# ಕೊಬ್ಬರಿಯಲ್ಲಿ ಕೊರೆದ ಕಲಾಕೃತಿಗಳು

ಒಂದಕ್ಕಿಂತ ಒಂದು ಅಪೂರ್ವ ಕಲಾಕೃತಿಗಳು. ಒಂದೆಡೆ ಗಣಪತಿಯಾದರೆ, ಮತ್ತೊಂದೆಡೆ ಹಸುವಿನೊಡನೆ ಸರ್ವಾಲಂಕಾರಭೂಷಿತನಾದ ಶ್ರೀ ಕೃಷ್ಣನ ಕೊಳಲೂದುವ ವೈಖರಿ. ಈಶ್ವರ, ಪಾರ್ವತಿ, ಇತ್ಯಾದಿ. ಇವೆಲ್ಲವೂ ಕೊಬ್ಬರಿಯ ಮೇಲೆ ಬ್ಲೇಡಿನ ಸಹಾಯದಿಂದ ಕೈಯಲ್ಲೇ ಕೊರೆದ ಕಲಾಕೃತಿಗಳು.

ಮೈಸೂರಿನ ಇಂದಿರಾ, ಮೀರಾ, ಗೀತಾ ಮತ್ತು ವತ್ಸಲಾ 'ಭವಾನಿ ಆರ್ಟ್ಸ್' ಎನ್ನುವ ಲಾಂಛನದಡಿ ಒಂದು ಅಪೂರ್ವ ಕಲೆಯ ಆಗರವನ್ನೇ ಸೃಷ್ಟಿಸಿದ್ದಾರೆ. ಮುಕುಂದ ಮತ್ತು ಮಾನಸ ಇವರ ಸಹಾಯಕರು.

೯೦ ವರ್ಷ ಪ್ರಾಯದ ಪದ್ದಮ್ಮನವರಿಗೆ ಚಿಕ್ಕಂದಿನಿಂದಲೂ ಕೈಕೆಲಸದಲ್ಲಿ ಆಸಕ್ತಿ. ಪಾಕಶಾಸ್ತ್ರ ಪ್ರವೀಣೆ ಕೂಡಾ. ಕಸದಿಂದ ರಸ ಉಂಟುಮಾಡುತ್ತಿದ್ದರು. ಇವರ ಮಕ್ಕಳೆಲ್ಲರೂ ಪದವೀಧರರು. ೧೯೬೯ರಲ್ಲಿ ಆದ ರಸ್ತೆ ಅಪಘಾತದಿಂದ ಒಬ್ಬ ಹೆಣ್ಣು ಮಗಳು ಒಂದು ವರ್ಷಕಾಲ ಹಾಸಿಗೆಯಲ್ಲಿ ಇರಬೇಕಾಯಿತು. ಅವಳೊಂದಿಗೆ ಇತರ ಅಕ್ಕತಂಗಿಯರೂ ಖಿನ್ನರಾದರು. ಚೇತರಿಸಿಕೊಂಡು ಹಾಸಿಗೆಯಿಂದ ಎದ್ದ ಮೀರಾ ತಾಯಿಯ ಅತ್ಯುತ್ತಮ ಮಾರ್ಗದರ್ಶನದಲ್ಲಿ ತನ್ನನ್ನು ಕೈಕೆಲಸಗಳಲ್ಲಿ, ಕಲಾವಂತಿಕೆಯಲ್ಲಿ ತೊಡಗಿಸಿಕೊಳ್ಳಲು ನಿಶ್ಚಯಿಸಿದಳು. ಹೊರಗಡೆ ಉದ್ಯೋಗ ಮಾಡುತ್ತಿದ್ದ ಸಹೋದರಿಯರು ಸಹ ೧೯೮೧ರಲ್ಲಿ ಅವಳಿಗೆ ಊರುಗೋಲಾಗಿ ನಿಂತು ಸಹಕರಿಸಲು ಪ್ರಾರಂಭಿಸಿದರು. ಆಗ ಉದಯವಾಯಿತು ''ಭವಾನಿ ಆರ್ಟ್ಸ್'' ಎಂಬ ಕಲೆಯ ಆಗರ.

ಇವರದು ಕ್ರಿಯಾತ್ಮಕ ಕಲೆ. ವಾಸ್ತವಕ್ಕೆ ಅತ್ಯಂತ ಸಮೀಪ. ಇವರಿಂದ ರಚಿತವಾದ ಕೊಬ್ಬರಿಯ ಕಲಾಕೃತಿಗಳನ್ನು ನೋಡಿದಾಗ ಅವರ ಉದ್ದೇಶ ಸಫಲವಾಗಿ ಅದಕ್ಕೆ ಅವರು ನೀಡುವ ರೂಪ ಅರ್ಥಪೂರ್ಣ ಎನ್ನಿಸುತ್ತದೆ. ಇವರ ಅನುಭವ ತಿಳಿಯಾದದ್ದು, ಉದಾರವಾದದ್ದು. ತಮ್ಮ ಒತ್ತಡವನ್ನು ತಗ್ಗಿಸಿಕೊಂಡು ಚಿತ್ರಿಸಿ ಕೆತ್ತುತ್ತಾರೆ. ತಮ್ಮ ನೋವನ್ನು ಮುಚ್ಚಿಟ್ಟು, ಮರೆತು ಸೊಗಸನ್ನು ಸೃಷ್ಟಿಸುತ್ತಾರೆ.

*ಜಯಂತಿ ಅಮೃತೇಶ್, ೪೦, ೬ನೇ ಮೇನ್, ೭ನೇ ಕ್ರಾಸ್, ಸರಸ್ವತಿಪುರ, ಮೈಸೂರು-೯*

ಕಲಾವಿದರ ವಿಳಾಸ

ಶ್ರೀಮತಿ ಪದ್ದಮ್ಮ, ಎಲ್-೭೨, ೧ನೇ ಹಂತ, ಕುವೆಂಪು ನಗರ, ಮೈಸೂರು-೨೩



ಮಹಿಷಾಸುರ ಮರ್ದಿನಿ



ಮದುವೆ ದಿಬ್ಬಣ



ಶ್ರೀ ಕೃಷ್ಣ

# ಹೊಸತು

## ಒಳಗೇನಿದೆ.....




*ಚಿತ್ರಗಳು* : ಸತೀಶ್ ಯಲ್ಲಾಪುರ, ಎನ್. ಆರ್. ಬೊಮ್ನಳ್ಳಿ
ಜಿ. ಎಂ. ಬೊಮ್ನಳ್ಳಿ, ಶ್ರೀಹರಿ, ಹರಿಣಿ, ಬಿ. ವಿಲ್ಸನ್.

*ವಿನ್ಯಾಸ : ನವಕರ್ನಾಟಕ ವಿನ್ಯಾಸ*

*ಕಚೇರಿ ಸಹಕಾರ : ಜಿ. ವಿ. ತೇಜೋವತಿ*

*ಮುಖಚಿತ್ರ* : ಶ್ರೀ ಕ್ಲೆಮೆಂಟ್ ಫ್ರಾನ್ಸಿಸ್ ಎಂ.


**ಚಿತ್ರದಲ್ಲಿ**: ಕರ್ನಾಟಕದ ಅಪರೂಪದ ಹಕ್ಕಿ ಹಳದಿ ಗಂಟಲಿನ ಪಿಕಳಾರ. ಆವಾಸಸ್ಥಾನದ ತೀವ್ರ ಅವಲಂಬಿ. ಕೇವಲ ಕಲ್ಲು ಗುಡ್ಡಗಳಿಂದ ಕೂಡಿದ ಕುರುಚಲು ಕಾಡುಗಳಲ್ಲಿ ಮಾತ್ರ ಕಂಡುಬರುತ್ತದೆ.

## ಈ ತಿಂಗಳು

**ಕೋ**ಮುದಳ್ಳುರಿಯನ್ನೆಬ್ಬಿಸಿ ಒಂದು ದಶಕಕ್ಕೂ ಹೆಚ್ಚು ಕಾಲ ಅದರ ಬೇಗೆಯಲ್ಲಿ ಬಸವಳಿದ ಭಾರತ ಎಂತಹ ಅಗ್ನಿಪರ್ವತದ ಮೇಲೆ ಕುಳಿತಿದೆಯೆಂಬುದು ನಮ್ಮನ್ನಿನ್ನೂ ಆಘಾತ ಮತ್ತು ವ್ಯಸನಕ್ಕೆ ಸಿಲುಕಿಸಿಲ್ಲದಿದ್ದರೆ ಸಮಸ್ಯೆ ಹೀಗೆ ಉಲ್ಬಣವಾಗುತ್ತ ಹೋಗುತ್ತದೆ. ಕೇರಳದ ಮರಾದ್ ಸಮುದ್ರ ತೀರವು ಪ್ರವಾಸಿಗಳನ್ನು ಆಕರ್ಷಿಸುವ ತಾಣವಾಗುವ ಬದಲು ಹೆಣಗಳುರುಳಿ ಮರಳನ್ನು ರಕ್ತದಿಂದ ಕಲಸಿಹಾಕುವಂತಾಗಿದೆ. ಕಲ್ಲಿಕೋಟೆಗೆ ವಿದೇಶಿ ವರ್ತಕರು ಬಂದಿಳಿದು ವಸಾಹತು ಕಟ್ಟಲು ಆರಂಭಿಸಿದಾಗ ಕೂಡ ಇಂತಹ ಕೊಲೆಗಳು ಸಂಭವಿಸಿರಲಿಲ್ಲವೆಂದು ತೋರುತ್ತದೆ. ಪೂಜಾಮಂದಿರಗಳಲ್ಲಿ ಆಯುಧಗಳನ್ನು ಶೇಖರಿಸಿಟ್ಟು ಆಮೇಲೆ ಅವುಗಳಿಂದ ಹಲ್ಲೆ ನಡೆಸುವ ದೂರ್ತತನ ಸಹಜವಾಗಿಯೇ ಮತೀಯ ಅಂತರ್ಯುದ್ಧಕ್ಕೆ ಪ್ರೇರಣೆ ನೀಡುತ್ತದೆ. ಒಂದು ಕಡೆ ತ್ರಿಶೂಲಧಾರಿಗಳ ಕೆನೆತ, ದಂಡಧಾರಿಗಳ ದಾಂಧಲೆ ಮತ್ತು ಕತ್ತಿಗಳ ಝಳಪಿಸುವಿಕೆ; ಇನ್ನೊಂದೆಡೆ ಪೂಜಾಮಂದಿರಗಳಲ್ಲಿ ಮಾರಕ ಆಯುಧಗಳ ಸಂಗ್ರಹ: ಇದು ಶಾಂತಿ ಮತ್ತು ಸುಭದ್ರತೆಗೆ ಸಾಧನಗಳಲ್ಲ. ಮರಾದ್‌ನಲ್ಲಿ ನಡೆದಿರುವ ಪಾತಕಕ್ಕೆ ಕಾರಣರಾದವರನ್ನು ತೀವ್ರವಾಗಿ ಶಿಕ್ಷಿಸಬೇಕು ಮತ್ತು ಕದಡಿರುವ ವಾತಾವರಣವನ್ನು ಯಥಾಸ್ಥಿತಿಗೆ ತರಲು ಎಲ್ಲ ಧರ್ಮೀಯರು ಮತ್ತು ರಾಜಕೀಯ ಕಾರ್ಯಕರ್ತರು ಒಟ್ಟಾಗಿ ಶ್ರಮಿಸಬೇಕು. ಜಡ್ಡು ಹಿಡಿದ ಮತೀಯ ಭಾವನೆಗಳನ್ನು ಪೋಷಿಸಿ ಸಮಾಜದಲ್ಲಿ ಮಾತ್ಸರ್ಯ ಹುಟ್ಟುಹಾಕಿರುವವರಿಂದ ಜನಸಾಮಾನ್ಯರಿಗೆ ದಕ್ಕುವ ಬಳುವಳಿಯೆಂದರೆ ದ್ವೇಷಸಾಧನೆ ಮತ್ತು ಅದರಿಂದ ಉದ್ಭವಿಸುವ ಹೀನಾಯ ಕೊಲೆಗಳು. ಇದರಿಂದ ಅಂತರ್ಮತೀಯವಾಗಿ ಪ್ರತೀಕಾರದ ಧೋರಣೆಯನ್ನು ನಿರೀಕ್ಷಿಸಬೇಕು. ಹೀಗೆ ಮುಂದುವರಿದರೆ ಶಂಕೆಗೆ ಮಿತಿಯಿರುವುದಿಲ್ಲ, ಹೊತ್ತಿದ ಬೆಂಕಿಯನ್ನು ಆರಿಸಲಾಗುವುದಿಲ್ಲ. ರಥಯಾತ್ರೆಗಳು ಉದ್ಘಾಟಿಸಿದ ಅನಾಗರಿಕ ಪ್ರಕ್ರಿಯೆಗೆ ಇನ್ನಾದರೂ ಮುಕ್ತಾಯ ಕಾಣಿಸುವ ಹೊಣೆ ನಮ್ಮ ದೇಶದ ಮೇಲಿದೆ. ರಾಜಕೀಯ ಸೇಡುಗಳ ಹವಣಿಕೆಯನ್ನು ಒತ್ತರಿಸಿ ಈ ಕ್ಷುಬ್ಧತೆಯನ್ನು ಎದುರಿಸಲು ನೇರ ಪ್ರಜಾತಾಂತ್ರಿಕ ಮಾರ್ಗಗಳನ್ನು ಕೇರಳದ ಸರ್ಕಾರ ಅನುಸರಿಸಬೇಕು. ಇಡೀ ದೇಶದಲ್ಲಿ ಎಲ್ಲ ಧರ್ಮೀಯರೂ ಎಲ್ಲೆಲ್ಲಿ ಮಾರಕ ಆಯುಧಗಳನ್ನು ಶೇಖರಿಸಿಟ್ಟುಕೊಂಡಿದ್ದಾರೆಂಬುದನ್ನು ತನಿಖೆ ಮಾಡಿ ಹಾಗೆ ಶೇಖರಣೆ ಮಾಡಿರುವವರನ್ನು ಮತ್ತು ಅವನ್ನುಪಯೋಗಿಸುವಂತೆ ಪ್ರಚೋದನೆ ನೀಡುವವರನ್ನು ತಕ್ಷಣ ಬಂಧಿಸಬೇಕು. ಇಂತಹ ಪ್ರಚೋದನೆಗಳು ಬೇರೆ ಬೇರೆ ಸ್ವರೂಪದಲ್ಲಿರುತ್ತವೆ. ಅದನ್ನು ಗುಪ್ತವಾಗಿ ಮಾಡಬಹುದು, ಬಹಿರಂಗವಾಗಿಯೂ ಮಾಡಬಹುದು. ಕರಾಚಿಯಲ್ಲಿ ವಿಶ್ವ ಹಿಂದೂ ಪರಿಷತ್ತಿನ ಬಾವುಟ ಹಾರಿಸುವವರೆಗೂ ನಿಲ್ಲಬಾರದೆಂದು ಸಾರ್ವಜನಿಕವಾಗಿ ಅಬ್ಬರಿಸುವ ತೋಗಡಿಯಾ ಪ್ರಚೋದನೆಯಿಂದ ಕೂಡಲೆ ಕೊಲೆಗಳಾಗದಿರಬಹುದು, ಆದರೆ ಕೊಲೆಗಡುಕ ಮನಸ್ಸುಗಳನ್ನು ಸೃಷ್ಟಿಸುವತ್ತ ಅದು ಸಾಗುತ್ತದೆ. ನಮ್ಮ ಸೈನ್ಯ ಪಾಕಿಸ್ತಾನವನ್ನು ಆಕ್ರಮಿಸಿಕೊಳ್ಳಬೇಕೆಂದೂ ಇದೇ ಧೀರ ಕರೆ ನೀಡಿದ್ದಾನೆಂದರೆ ಆಂತರಿಕ ಘರ್ಷಣೆಯ ಜೊತೆಗೆ ನೆರೆರಾಷ್ಟ್ರದೊಡನೆ ಕಾಲುಕೆರೆದು ಯುದ್ಧಕ್ಕೆ ನಿಲ್ಲಬೇಕೆಂಬ ಸೂಚನೆಯೂ ಬಂದಂತಾಗುತ್ತದೆ.

ತೋಗಡಿಯಾ ಹೇಳಿದ್ದನ್ನೇ ಅಧ್ವಾನಿ ಬೇರೆ ಭಾಷೆಯಲ್ಲಿ ಹೇಳಿದ್ದಾರೆ. ನಮ್ಮ ದೇಶದ ಕೈ ತಿರುಚುವ ಆರ್ಮಿಟೇಜ್ ಬಂದಾಗ ವಾಜಪೇಯಿ ಒಂದು ಸ್ವರದಲ್ಲಿ ಹಾಡಿದರೆ ಅಧ್ವಾನಿಯವರದು ಇನ್ನೊಂದು ಸ್ವರ. ಈ ಬುದ್ಧಿವಂತಿಕೆಯ ನಾಟಕದಿಂದ ಯಾರು ಸಂಪ್ರೀತರಾಗಬೇಕು ? ಭಾರತದ ಜನರೆ ಅಥವಾ ಅಮೆರಿಕಾದ ಸರ್ಕಾರವೆ ? ಅಮೆರಿಕಾದ ಹಸ್ತಕ್ಷೇಪವಿಲ್ಲವೆಂದು ಪದೇಪದೇ ಉಚ್ಚರಿಸುತ್ತಲೇ ನಮ್ಮ ಕೇಂದ್ರ ನಾಯಕತ್ವ ಶರವೇಗದಲ್ಲಿ ತಿಪ್ಪರುಲಾಗ ಹಾಕುತ್ತದೆ. ಏನೇನು ಅಸಾಧ್ಯವೆಂದು ಹೇಳುತ್ತಾ ಬಂದಿದ್ದಾರೋ (ಗಡಿಯಾಚೆಯಿಂದ ಭಯೋತ್ಪಾದನೆ ನಿಲ್ಲದೆ ಮಾತುಕತೆ ಇಲ್ಲ, ವಿಮಾನಯಾನ ಸಾಧ್ಯವಿಲ್ಲ, ಹೈ ಕಮಿಷನರ ನೇಮಕ ಕೂಡದು, ಇತ್ಯಾದಿ) ಅದನ್ನೆಲ್ಲಾ ಸಾಧ್ಯವಾಗಿಸಲು ವಾಜಪೇಯಿ ಸಿದ್ಧರಾಗುತ್ತಾರೆಂದರೆ ಅದರಲ್ಲಿ ಅರ್ಥವಾಗದ ಮರ್ಮ ಎಂಥದೂ ಇಲ್ಲ. ವಾಜಪೇಯಿ ದೇಶದ ಪ್ರಜಾಪ್ರಭುತ್ವವಾದಿ ಜನವರ್ಗವನ್ನು ಉದ್ದೇಶಿಸಿ ಮಾತನಾಡುತ್ತಾರೆ ಮತ್ತು ಹಾಗೆ ಮಾಡಲು ಅಮೆರಿಕಾದ ಆಣತಿ ಇದೆಯೆಂಬುದನ್ನು ಮುಚ್ಚಿಡುತ್ತಾರೆ. ಅದೇ ಸಮಯದಲ್ಲಿ ಅಧ್ವಾನಿ ತಮ್ಮ ಪರಿವಾರದ ಬಣಗಳನ್ನು ತೃಪ್ತಿಪಡಿಸಲು ಇನ್ನೊಂದು ಸ್ವರವೆತ್ತುತ್ತಾರೆ. ಆದರೆ ಅಮೆರಿಕಾದ ಗುಪ್ತಚಾರ ಸಂಸ್ಥೆ ಸಿ.ಐ.ಎ.ಯ ಕೇಂದ್ರ ಕೋಟೆಗೆ ಭೇಟಿ ನೀಡಿರುವ ಏಕೈಕ ಭಾರತದ ಗೃಹಮಂತ್ರಿ ಅಧ್ವಾನಿ ಎಂಬುದನ್ನು ಮರೆಯುವುದು ಬೇಡ. ಆರ್ಮಿಟೇಜ್

*೭ನೇ ಪುಟಕ್ಕೆ......*




ಸಂಪುಟ-೪   ಸಂಚಿಕೆ - ೧೧   ಜೂನ್ ೨೦೦೩

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೩೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**
**website : www.navakarnatakabooks.com**


## ವಾಲ್ಟರ್ ಸಿಸುಲೂ

**ಸಂಪಾದಕೀಯ**

"ನಾನು ಹುಟ್ಟಿದ್ದು ೧೯೧೨ರ ಮೇ ೧೮ರಂದು, ಟ್ರಾನ್ಸ್‌ಕೈನ ಎಂಕೋಬೋ ಎಂಬಲ್ಲಿ. ನನ್ನನ್ನು ಬೆಳೆಸಿದವರು ನನ್ನ ತಾಯಿ ಮತ್ತು ಮಾವ. ಆತ ಕತುಬೇನಿ ಎಂಬ ಹಳ್ಳಿಯ ಪಟೇಲ. ಕ್ರೈಸ್ತಧರ್ಮದ ನಡವಳಿಕೆ ಕಡ್ಡಾಯವಾಗಿ ಅನುಸರಿಸುವುದು ಆಗಿನಿಂದಲೇ ಅಭ್ಯಾಸವಾಯಿತು. ನನ್ನ ಮಾವ ಆಂಗ್ಲಿಕನ್ ಚರ್ಚ್‌ನಲ್ಲಿ ಪಾದ್ರಿಯಾಗಿದ್ದ. ಆತನಿಂದ ನಾನು ಕೇಳಿದ ಕತೆಗಳೇ ನನ್ನ ರಾಜಕೀಯ ಚಿಂತನೆಗೆ ಸಾಮಗ್ರಿ ಒದಗಿಸಿದ್ದು. ಉದಾಹರಣೆಗೆ, ಇಸ್ರೇಲಿನ ಸಂತತಿಯವರ ಹೋರಾಟ : ಜೋಸೆಫ್‌ನನ್ನು ಅವನ ಸೋದರ ಮಾರಾಟ ಮಾಡಿದಾಗಿನಿಂದ ಹಿಡಿದು ಈಜಿಪ್ಟ್‌ನಿಂದ ಮೋಸೆಸ್ ಹೊರಹೋಗುವತನಕ.

"ಆಂಗ್ಲಿಕನ್ ಸಂಸ್ಥೆಯ ಶಾಲೆಯಲ್ಲಿ ನಾಲ್ಕನೆಯ ತರಗತಿಯವರೆಗೆ ನಾನು ವ್ಯಾಸಂಗ ಮಾಡಿದೆ. ಅಂದರೆ, ಪ್ರಾಥಮಿಕ ಶಾಲೆಯನ್ನೂ ನಾನು ಪೂರೈಸಲಿಲ್ಲ. ಅದಾದ ನಂತರ ನಾನು ರ್‍ಯಾಂಡ್ ಗಣಿಗಳಲ್ಲಿ ಕೆಲಸಕ್ಕೆ ಹೋದೆ. ಆಮೇಲೆ ಖಾಸಗಿಯಾಗಿ ಓದಿಕೊಂಡು ಪ್ರೌಢಶಾಲೆಯ ಮಟ್ಟವನ್ನು ತಲುಪಿದೆ. ನನಗೆ ಮದುವೆಯಾಗಿದೆ, ಐವರು ಮಕ್ಕಳಿದ್ದಾರೆ. ಎಲ್ಲರಿಗಿಂತ ದೊಡ್ಡವನಿಗೆ ಹದಿನೆಂಟು ವರ್ಷ, ಚಿಕ್ಕವನಿಗೆ ಏಳು. ನಾನು ಕುಟುಂಬಕ್ಕೆ ಸಾಕಷ್ಟು ಶ್ರದ್ಧೆ ಇರಿಸಿಕೊಂಡವನು ಎನ್ನಬಹುದು. ನನಗಿದ್ದುದು ಒಬ್ಬಳೇ ಸೋದರಿ. ಅವಳು ಮತ್ತು ನನ್ನ ತಾಯಿಯೊಡನೆ ಬಂದು ನಾನು ಜೊಹಾನ್ಸ್‌ಬರ್ಗ್‌ನಲ್ಲಿ ನೆಲೆಸಿದೆ. ಆಗಿನಿಂದ ನಾನು ಕೆಲಸ ಮಾಡಿರುವ ಜಾಗಗಳೆಂದರೆ ಚಿನ್ನದ ಗಣಿಗಳು, ಕಾರ್ಖಾನೆಗಳು, ವ್ಯಾಪಾರ ಸಂಸ್ಥೆಗಳು. ೧೯೪೦ರಲ್ಲಿ ನಾನೊಂದು ಆಸ್ತಿ ವ್ಯವಹಾರ ವಹಿವಾಟು ನೋಡಿಕೊಳ್ಳುವ ಕಚೇರಿ ತೆಗೆದೆ. ಸಂಪೂರ್ಣವಾಗಿ ರಾಜಕೀಯದಲ್ಲಿ ತೊಡಗಿಕೊಳ್ಳುವ ತೀರ್ಮಾನ ಮಾಡಿದಾಗ ಅದನ್ನು ಮುಚ್ಚಿದೆ. ಹಾಗೆ ನೋಡಿದರೆ ನನ್ನ ರಾಜಕೀಯ ಜೀವನ ಆರಂಭವಾದ್ದು ನನ್ನ ಹಳ್ಳಿಯ ಒಂದು ಸಭೆಯಲ್ಲಿ. ವೆಲಿಂಗ್‌ಟನ್ ಬಲೆಲೇಜ್ ಎಂಬಾತ ಬಂದಿದ್ದ. ಅವನೊಂದು ಭಾಷಣ ಮಾಡುತ್ತಾ ಹೇಳಿದ, ಆಫ್ರಿಕನರನ್ನು ವಿಮೋಚನೆಗೊಳಿಸುವ ಉದ್ದೇಶದಿಂದ ಕರಿಯ ಅಮೆರಿಕನ್ನರು ಇಲ್ಲಿಗೆ ಬರುತ್ತಾರೆಂದು. ನನಗಾಗ ವಯಸ್ಸು ಹನ್ನೆರಡು.

"೧೯೩೦ರಲ್ಲಿ ಈಸ್ಟ್ ಲಂಡನ್ನಿನ ಹಲವು ಸಭೆಗಳಿಗೆ ನಾನು ಹೋಗುತ್ತಿದ್ದೆ. ಅಲ್ಲಿ ಸಿ. ಕಡಾಲ್ ಎಂಬೊಬ್ಬ ಉಪನ್ಯಾಸಗಳನ್ನು ನೀಡುತ್ತಿದ್ದ. ಆಗ್ಗೆ ಅವನು ಅತಿ ಪ್ರಸಿದ್ಧ ಆಫ್ರಿಕನ್ ನಾಯಕ. ಆತನ ಉಪನ್ಯಾಸಗಳಲ್ಲಿ ಸಾಮಾನ್ಯವಾಗಿರುತ್ತಿದ್ದ ವಿಷಯಗಳು ಆಫ್ರಿಕನರಿಗೆ ನೀಡಲಾಗುತ್ತಿದ್ದ ಕನಿಷ್ಠ ಮಟ್ಟದ ಕೂಲಿ ಮತ್ತು ಆಗಾಗ್ಗೆ ನಡೆಯುತ್ತಿದ್ದ ಪಾಸ್‌ಗಳ ತಪಾಸಣೆಯ ಉಪಟಳಗಳು, ಇವಕ್ಕೆ ಸಂಬಂಧಿಸಿದವು. ಮದ್ಯ ಮತ್ತು ಪಾಸ್‌ಗಳ ತಪಾಸಣೆಯ ಭರಾಟೆ ಆಗ ವಿಪರೀತವಾಗಿರುತ್ತಿತ್ತು. ಈ ವ್ಯಕ್ತಿಯ ಪ್ರಭಾವಕ್ಕೆ ನಾನು ಸಹಜವಾಗಿಯೇ ಒಳಗಾದೆನಾದರೂ ನಾನು ಕೇವಲ ಒಬ್ಬ ಬೆಂಬಲಿಗನಾಗಿ ಉಳಿದಿದ್ದೆ. ಮೊಟ್ಟಮೊದಲ ಬಾರಿಗೆ ನಾನು ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ನ ಸದಸ್ಯನಾಗಿದ್ದು ೧೯೪೦ರಲ್ಲಿ. ನಾಲ್ಕು ವರುಷಗಳ ತರುವಾಯ ಅದೇ ಸಂಸ್ಥೆಯ ಯುವಜನ ವೇದಿಕೆಯ ಸ್ಥಾಪಕ ಸದಸ್ಯನಾದೆ. ಅದು ರಾಷ್ಟ್ರೀಯತೆಗೆ ಹೆಸರಾದ ಸಂಸ್ಥೆ. ಕ್ರಮೇಣ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ನಲ್ಲಿ ತೀವ್ರಗಾಮಿ ಚಟುವಟಿಕೆಗಳನ್ನು ಹಮ್ಮಿಕೊಳ್ಳಬೇಕೆಂದು ಆಗ್ರಹಿಸುವ, ಒತ್ತಾಯವನ್ನು ಹೇರುವ ಬಣಕ್ಕೆ ಸೇರಿಕೊಂಡೆ. ೧೯೪೯ರಲ್ಲಿ ನಮ್ಮ ಸಂಸ್ಥೆಯ ರಾಷ್ಟ್ರೀಯ ಅಧಿವೇಶನ ನಡೆದಾಗ ನನ್ನನ್ನು ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ನ ಪ್ರಧಾನ ಕಾರ್ಯದರ್ಶಿಯನ್ನಾಗಿ ಚುನಾಯಿಸಲಾಯಿತು. ಆಗಿನಿಂದ ನಾನು ಬಹಳ ಕ್ರಿಯಾಶೀಲನಾಗಿದ್ದೇನೆ. ಹತ್ತಾರು ಪ್ರತಿಭಟನೆಗಳಲ್ಲಿ ಪಾಲ್ಗೊಂಡಿದ್ದೇನೆ. ಪಾಸ್‌ಗಳನ್ನು ಇಟ್ಟುಕೊಳ್ಳಬೇಕೆಂಬ ಕಾನೂನಿಗೆ ತಲೆಬಾಗಬಾರದೆಂಬ ಚಳುವಳಿಯಲ್ಲೂ ಭಾಗವಹಿಸಿದ್ದೇನೆ."

- ದಕ್ಷಿಣ ಆಫ್ರಿಕಾದ ಮಹಾನ್ ನಾಯಕ ವಾಲ್ಟರ್ ಸಿಸುಲೂ ೧೯೬೪ರ ಸುಮಾರಿನಲ್ಲಿ ತನ್ನ ಬಗ್ಗೆ ಸಂಕ್ಷಿಪ್ತವಾಗಿ ಹೇಳಿಕೊಂಡಿರುವ ಮಾತುಗಳಿವು. ನೆಲ್ಸನ್ ಮಂಡೇಲಾ ಮುಂತಾದ ಹೋರಾಟಗಾರರು ರಿವೋನಿಯಾ ಮೊಕದ್ದಮೆಯಲ್ಲಿ ವಿಚಾರಣೆಗೆ ಗುರಿಯಾಗಿದ್ದ ವೇಳೆಯಲ್ಲಿ ಜೇಮ್ಸ್ ಕ್ಯಾಂಟರ್ ಎಂಬ ಬಿಳಿಯ ವಕೀಲ ಕೂಡ ಅಕಸ್ಮಾತ್ತಾಗಿ ಅವರೊಡನೆ ವಿಚಾರಣೆಗೆ ಗುರಿಯಾದ. ಸಿನಿಮಾ ತಾರೆಯೊಬ್ಬಳನ್ನು ಮದುವೆಯಾಗಿದ್ದ ಆತ ಭಾರಿ ಶ್ರೀಮಂತ ಮತ್ತು ವೃತ್ತಿಯಲ್ಲಿ ಬಹಳ ಕೀರ್ತಿ ಗಳಿಸಿದ್ದವನು. ಅಂಥವನೊಬ್ಬನನ್ನು ಮಂಡೇಲಾ - ಸಿಸುಲೂ ಅಂಥವರೊಡನೆ ವಿಚಾರಣೆಗೆ ಗುರಿಪಡಿಸಿದರೆ ಕರಿಯರ ಸ್ಥಾನಮಾನಗಳ ಬಗ್ಗೆ ಹೋರಾಟದಲ್ಲಿ ಪಾಲ್ಗೊಳ್ಳಲು ಧುಮುಕುವ ಬಿಳಿಯರಿಗೆ ಪಾಠ ಕಲಿಸಿದಂತಾಗುತ್ತದೆಯೆಂಬುದು ಅಂದಿನ ಬಿಳಿ ಸರ್ಕಾರದ ಎಣಿಕೆ. ಕ್ಯಾಂಟರ್ ಯಾವತ್ತೂ ಹೋರಾಟದಲ್ಲಿ ಭಾಗಿಯಾಗಿರಲಿಲ್ಲ. ಆದರೆ ಆಪಾದನೆಗೆ ಗುರಿಯಾದ ಮೇಲೆ ಅವನಲ್ಲಿ ಹೊಸಪ್ರಜ್ಞೆ ಮೂಡಿತು. ಎಲ್ಲ ಸಹ-ಆಪಾದಿತರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಪಡೆಯಬೇಕೆಂದು ಇಚ್ಛಿಸಿ ಅದನ್ನು ಬರೆದುಕೊಡಬೇಕೆಂದು ಕೇಳಿಕೊಂಡಾಗ ವಾಲ್ಟರ್ ಸಿಸುಲೂ ಬರೆದುಕೊಟ್ಟಿದ್ದು ಇಷ್ಟನ್ನೇ. ಅದೇ ತೋರಿಸುತ್ತದೆ, ಆತ ಎಷ್ಟು ನಿಗರ್ವಿ ಮತ್ತು ಕಡಿಮೆ ಮಾತಿನವನು ಎಂಬುದನ್ನು. ಇದೇ ಮೇ ೬ರಂದು ತನ್ನ ೯೧ನೆಯ ವಯಸ್ಸಿನಲ್ಲಿ ಆತ ತೀರಿಕೊಂಡಾಗ ನಮ್ಮ ಬಹುತೇಕ ಪತ್ರಿಕೆಗಳು ಅದನ್ನು ವರದಿ ಮಾಡಿದವು ಮತ್ತು ಅಸೋಸಿಯೇಟೆಡ್ ಪ್ರೆಸ್ ಸಿದ್ಧಪಡಿಸಿದ ಮಾಹಿತಿಯನ್ನು ಪ್ರಕಟಿಸಿದವು. ಇದು ತೀರಾ ನಾಚಿಕೆಗೇಡಿನ ಪ್ರಸಂಗ. ಏಕೆಂದರೆ, ಈ ಅಮೆರಿಕಾ ಕೇಂದ್ರಿತ ಸಂಸ್ಥೆಯು ದಕ್ಷಿಣ ಆಫ್ರಿಕಾದ ವಿಮೋಚನಾ ಸಮರವನ್ನು ಯಾವಾಗಲೂ ವಿರೋಧಿಸಿದ್ದ ಸಂಸ್ಥೆ, ಅಮೆರಿಕಾದ ಬಂಡವಾಳ ಹೂಡಿಕೆಗೆ ವಿಮೋಚನಾ ಸಮರವು ಬಾಧೆಯುಂಟುಮಾಡುತ್ತದೆಂದು ಭಾವಿಸಿದ್ದ ಸಂಸ್ಥೆ. ನೆಲ್ಸನ್ ಮಂಡೇಲಾನಂತಹ ಪ್ರತಿಭಾವಂತನೊಬ್ಬನನ್ನು ಹೋರಾಟದ ಮುಂಚೂಣಿಗೆ ಕರೆತಂದು ಅವನಿಗೆ ಎಲ್ಲ ರೀತಿಗಳಲ್ಲೂ ಪ್ರೇರಣೆ ಮತ್ತು ಮಾರ್ಗದರ್ಶನ ನೀಡಿದ ಸಿಸುಲೂ ಬಗ್ಗೆ ವಿಮೋಚನಾ ಸಮರದ ಕಟ್ಟಾ ವಿರೋಧಿ ಸಂಸ್ಥೆಯು ತಯಾರಿಸಿದ ಮಾಹಿತಿಯನ್ನು ಪ್ರಕಟಿಸಲು ನಮಗೆ ಹೇಗೆ ಮನಸ್ಸು ಬರುತ್ತದೋ ತಿಳಿಯುತ್ತಿಲ್ಲ. ಇದು ಮಾಧ್ಯಮಗಳ ಸೋಮಾರಿತನವೋ ಅನೈತಿಕತೆಯೋ ಎಂಬುದರ ತೀರ್ಮಾನವಾಗಬೇಕು.

ಸಿಸುಲೂ ತನ್ನ ಅಪ್ರತಿಮ ಕ್ರಿಯಾಶೀಲತೆಯ ಬಗ್ಗೆ ಏನೂ ಹೇಳಿಕೊಂಡಿಲ್ಲ. ಆದರೆ ತಾನು ಸದಸ್ಯನಾದ ಒಂಭತ್ತು ವರ್ಷಗಳಲ್ಲೇ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ನ ರಾಷ್ಟ್ರೀಯ ಪ್ರಧಾನ ಕಾರ್ಯದರ್ಶಿಯಾಗಿ ಚುನಾಯಿಸಲ್ಪಟ್ಟ ಎಂಬುದನ್ನು ಗಮನಿಸಿದರೆ ಆತನ ವ್ಯಾಪಕ ಹೋರಾಟಗಳ ಮಾದರಿ, ಪ್ರಬುದ್ಧ ಚಿಂತನೆ ಮತ್ತು ಸಂಘಟನಾ ಚಾತುರ್ಯದ ಅರಿವು ಮೂಡುತ್ತದೆ. ಸಿಸುಲೂನಂಥವರಿಂದಾಗಿ ಎ.ಎನ್.ಸಿ. ಒಂದು ಮಹತ್ತರ ಚಳುವಳಿಯನ್ನು ರೂಪಿಸಲು ಸಾಧ್ಯವಾಯಿತು. ಎಲ್ಲ ಬಣ್ಣಗಳ, ಎಲ್ಲ ಧರ್ಮೀಯರ, ಎಲ್ಲ ಬುಡಕಟ್ಟುಗಳ ಏಕಚ್ಛತ್ರವಾಗಿ ಹೊಮ್ಮಿದ್ದು ಈ ಸಂಸ್ಥೆಯ ಅತ್ಯಂತ ಹೆಮ್ಮೆಯ ಶ್ರೇಯಸ್ಸು. ಇಲ್ಲಿ ಸಿಸುಲೂ, ನಾಯಕರ್, ಅಹ್ಮದ್ ಕಾಥ್ರಡಾ, ಡೆನಿಸ್ ಗೋಲ್ಡ್‌ಬರ್ಗ್, ಕ್ರಿಸ್ ಹನಿ, ಎಲ್ಲರೂ ಇರಲು ಸಾಧ್ಯವಿತ್ತು. ಸಿಸುಲೂ ಕ್ರೈಸ್ತಧರ್ಮೀಯ, ನಾಯಕರ್ ಹಿಂದು, ಅಹ್ಮದ್ ಮುಸಲ್ಮಾನ, ಡೆನಿಸ್ ಯಹೂದಿ ಮತ್ತು ಕ್ರಿಸ್ ಒಬ್ಬ ಕಮ್ಯುನಿಸ್ಟ್. ದೇಶದ ಶೇಕಡಾ ೮೦ಕ್ಕೂ ಹೆಚ್ಚಿನ

ಸಂಪತ್ತು ಜನಸಂಖ್ಯೆಯ ಶೇ. ೧೩ರಷ್ಟು ಮಾತ್ರವಿದ್ದ ಬಿಳಿಯರ ಅಧೀನದಲ್ಲಿದ್ದುದು ದಕ್ಷಿಣ ಆಫ್ರಿಕಾದ ಸಂಕಟಗಳಿಗೆ ಕಾರಣವಾಗಿತ್ತು. ಆ ವ್ಯವಸ್ಥೆಯನ್ನು ಊರ್ಜಿತಗೊಳಿಸಿಕೊಳ್ಳಲು ಕರಿಯರಿಗೆ ವಿದ್ಯಾಭ್ಯಾಸದ ಅಭಾವ, ಜನಾಂಗೀಯ ಪ್ರತ್ಯೇಕತೆಯ ಹೊಲಸು ನಿಯಮಗಳು, ಕ್ರೂರ ದಬ್ಬಾಳಿಕೆ, ಇವೆಲ್ಲಾ ಅಗಾಧವಾಗಿ ಜಾರಿಯಲ್ಲಿತ್ತು. ಆ ದೇಶದೊಡನೆ ವ್ಯಾಪಾರ ಸಂಬಂಧಗಳನ್ನು ಇಟ್ಟುಕೊಳ್ಳಕೂಡದೆಂಬ ವಿಶ್ವ ಸಂಸ್ಥೆಯ ಆಜ್ಞೆಯನ್ನು ತೃಣವನ್ನಾಗಿಸಿ, ಗುಟ್ಟಾಗಿ ವ್ಯಾಪಾರ ಸಂಬಂಧ ಇಟ್ಟುಕೊಂಡಿದ್ದ ಅಮೆರಿಕಾ ಸದಾ ಕರಿಯರ ವಿಮೋಚನೆಗೆ ಅಡ್ಡ ಗಾಲು ಹಾಕಿದ್ದ ದೇಶ. ರಾಜಕೀಯವಾಗಿ ಅಂದಿನ ಬಿಳಿಯ ಸರ್ಕಾರಕ್ಕೆ ಬೆಂಬಲ ನೀಡುತ್ತಿದ್ದ ನಾಲ್ಕೈದು ಸರ್ಕಾರಗಳಲ್ಲಿ ಅಮೆರಿಕಾ ಪ್ರಮುಖ.

ಸಿಸುಲೂ, ಮಂಡೇಲಾ, ಮುಂತಾದವರ ನಾಯಕತ್ವದಲ್ಲಿ ನಡೆದ ಹೋರಾಟದ ಆಕಾಂಕ್ಷೆಗಳನ್ನು ೧೯೫೫ರಲ್ಲಿ ಅಂಗೀಕರಿಸಲಾದ ''ಸ್ವಾತಂತ್ರ್ಯ ಸಂಹಿತೆ'' ವಿಶದಗೊಳಿಸಿತ್ತು. ಜೊಹಾನ್ಸ್‌ಬರ್ಗ್ ಬಳಿಯ ಕ್ಲಿಪ್‌ಟೌನ್‌ನಲ್ಲಿ ಜರುಗಿದ ಮಹಾಧಿವೇಶನವು ಈ ಸಂಹಿತೆಯನ್ನು ರೂಪಿಸಿತ್ತು. ಉಳುವವನಿಗೆ ಭೂಮಿ, ಮತ್ತು ರಾಷ್ಟ್ರೀಯ ಸಂಪತ್ತು ಇಡೀ ಜನರಿಗೆ ಸೇರಿದ್ದು ಎಂಬೆರಡು ಅಂಶಗಳು ಈ ಸಂಹಿತೆಯಲ್ಲಿ ಅಡಕವಾಗಿತ್ತು. ಸಿಸುಲೂ ಮುಂತಾದವರು ದೇಶದ ಬಿಡುಗಡೆಯನ್ನೇನೋ ಉಂಟುಮಾಡಿದರು, ಆದರೆ ಸ್ವಾತಂತ್ರ್ಯ ಸಂಹಿತೆಯ ಅನೇಕ ನಿರೀಕ್ಷೆಗಳು ಹಾಗೆಯೇ ಉಳಿದಿವೆ. ೧೯೯೦ರ ದಶಕವು ಇಡೀ ವಿಶ್ವದ ಅನಭಿವೃದ್ಧ ದೇಶಗಳ ಪಾಲಿಗೆ ಬೇಡಿ ಹಾಕಿಕೊಳ್ಳುವ ದಶಕವಾಗಿ ಪರಿಣಮಿಸಿದ್ದು ಆ ದೇಶಗಳು ಸ್ವಂತಿಕೆಯನ್ನು ಬಿಟ್ಟುಕೊಟ್ಟು ''ರಾಚನಿಕ ಪರಿವರ್ತನೆ'' ಎಂಬ ಹರಿತವಾದ ಸಾಮ್ರಾಜ್ಯಶಾಹಿ ಕುಟಿಲೋಪಾಯಕ್ಕೆ ತಲೆ ಕೊಟ್ಟಿದ್ದರಿಂದ. ನಮ್ಮ ದೇಶದ ಸಮಕಾಲೀನ ಸನ್ನಿವೇಶದಿಂದ ಭಿನ್ನವಾಗಿಲ್ಲದ ದಕ್ಷಿಣ ಆಫ್ರಿಕಾದ ಸನ್ನಿವೇಶ ಅಲ್ಲಿಯ ಜನರಿಗೆ ಹತಾಶೆಯನ್ನುಂಟುಮಾಡಿದೆ. ಅಲ್ಲೂ ನಿರ್ಗತಿಕರ ಬಾಳು ಹಿಂದಿನಂತೆಯೇ ಉಳಿದಿದೆ. ಕಾರ್ಖಾನೆಗಳು ಮುಚ್ಚುತ್ತಿವೆ, ಖಾಸಗಿತನ ಬೆಳೆಯುತ್ತಿದೆ. ವಿದೇಶಿ ಹುನ್ನಾರಗಳು ಸಂಚು ತರುತ್ತಿವೆ ಮತ್ತು ವಿದ್ಯಾಭ್ಯಾಸ ಎಲ್ಲರಿಗೂ ಎಟುಕದಂತಾಗಿದೆ. ಸಿಸುಲೂವಿನಂತಹ ವಿನಯವಂತರು ಯಾವ ಆದರ್ಶಕ್ಕಾಗಿ ತಮ್ಮ ಜೀವವನ್ನು ತೇಯ್ದರೋ ಅದಿನ್ನೂ ಮರೀಚಿಕೆಯಾಗಿಯೇ ಉಳಿದಿದೆ. ದೇಶದ ಮತ್ತು ಜನರ ಬಗೆಗಿನ ಅವರ ಕಾಳಜಿ ಪುನರ್ಜೀವ ಪಡೆಯದೆ ಅಭಿವೃದ್ಧಿ ಅರ್ಥ ಪಡೆದುಕೊಳ್ಳುವುದಿಲ್ಲ. ''ಸತ್ಯ ಮತ್ತು ಸಂಧಾನ'' ಎಂಬ ಹೆಸರಿನಲ್ಲಿ ಡೆಸ್ಮಂಡ್ ಟುಟು ನೇತೃತ್ವದಲ್ಲಿ ಇಡೀ ಭೂತಕಾಲದ ವಿಮರ್ಶೆ ನಡೆಯಿತು, ಘೋರ ಪಾತಕಗಳನ್ನು ಬಹಿರಂಗವಾಗಿ ಹೊರತೆಗೆಯಲಾಯಿತು. ಇದರಿಂದ ದ್ವೇಷದ ಕಿಡಿಗಳು ಆರುತ್ತವೆಂದು ಭಾವಿಸಲಾಯಿತು. ಆದರೆ ಜನಾಂಗೀಯ ದ್ವೇಷದ ಪ್ರಕರಣಗಳು ಇನ್ನೂ ಮುಂದುವರಿಯುತ್ತಿವೆ, ಐಕ್ಯತೆಯ ಬದಲು ಪ್ರತ್ಯೇಕತೆ ಹೆಚ್ಚುತ್ತಿದೆ. ''ಸಿಸುಲೂ, ಈ ವೇಳೆಯಲ್ಲಿ ನೀನಿರಬೇಕಾಗಿತ್ತು'' ಎಂದು ದಕ್ಷಿಣ ಆಫ್ರಿಕದ ಜನತೆ ಕಂಬನಿಗರೆಯುತ್ತಿದೆ. ಅಂದರೆ, ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ಸಿನ ಮೂಲಾಶಯಗಳಿಗೆ ಹಿಂದಿರುಗದೆ ದಕ್ಷಿಣ ಆಫ್ರಿಕಾಕ್ಕೆ ನಿಜವಾದ ಬಿಡುಗಡೆಯಿಲ್ಲವೆಂಬುದನ್ನು ಜನ ತಿಳಿಯುತ್ತಿದ್ದಾರೆ. ಬೇರೆಯವರ ಸಂಪತ್ತನ್ನು ಕಬಳಿಸಲು ಕಾದು ಕುಳಿತಿರುವ ರಣಹದ್ದು ವಾಷಿಂಗ್‌ಟನ್ನಿನಿಂದ ಭಾರತದತ್ತ ಹಾರಿಬರುವಂತೆ ದಕ್ಷಿಣ ಆಫ್ರಿಕಾದತ್ತಲೂ ಹಾರಿದೆ. ಅದರ ರೆಕ್ಕೆಗಳನ್ನು ಕತ್ತರಿಸಲು ಸಿಸುಲೂ ಮಾರ್ಗದಲ್ಲಿ ದಕ್ಷಿಣ ಆಫ್ರಿಕಾ ಮತ್ತು ಭಗತ್ ಸಿಂಗ್ ಮಾರ್ಗದಲ್ಲಿ ಭಾರತ ಸಜ್ಜಾಗಬೇಕಾದ್ದು ಇಂದಿನ ಆದ್ಯ ಅವಶ್ಯಕತೆಯಾಗಿದೆ. ■

## ಹೊಸ ಅರ್ಥಗಳ ಅನ್ವೇಷಣೆ

**ನ್ಯಾ**ಯಾಲಯವು ನಮ್ಮ ಸಂವಿಧಾನದ ಅರ್ಥವನ್ನು ಹೊಸ ಹೊಸದಾಗಿ ನೀಡುತ್ತಾ ಹೋಗುತ್ತಿದ್ದಂತೆ ರಾಜ್ಯದಲ್ಲಿ ಬಿಕ್ಕಟ್ಟು ಹೆಚ್ಚುತ್ತಿದೆ. ಎಷ್ಟೋ ವರ್ಷಗಳ ಹಿಂದೆ ಸರ್ಕಾರಿ ನೌಕರಿಗೆ ಆಯ್ಕೆಯಾಗಿ ಈಗ ಸೇವೆಯಲ್ಲಿರುವ ಹದಿಮೂರು ಸಾವಿರ ಮಂದಿಯನ್ನು ಎರಡು ತಿಂಗಳೊಳಗಾಗಿ ಹೊರಹಾಕಬೇಕೆಂಬುದು ಈಗಿನ ನಿರ್ದೇಶನ. ಏಕೆಂದರೆ ಅವರ ಆಯ್ಕೆ ಸಂವಿಧಾನಬಾಹಿರ. ಮೂಲ ಪ್ರಶ್ನೆ ಇರುವುದು ಸಂವಿಧಾನದ ಪದಗಳನ್ನು ಹೇಗೆ ಜೋಡಿಸಬೇಕೆಂಬುದಲ್ಲ, ನಗರ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಸೌಲಭ್ಯಗಳನ್ನು ಸಮಾನವಾಗಿ ಹೇಗೆ ಕಲ್ಪಿಸುವುದು ಎಂದು. ಪ್ರಜ್ಞಾವಂತರಿಗೆ ಈ ಪ್ರಶ್ನೆ ಪ್ರಸ್ತುತವಲ್ಲ. ಅವರ ಪ್ರಕಾರ ಕಾಗದದಲ್ಲಿ ಬರೆದಿಟ್ಟಿರುವ ಸೂತ್ರವೇ ನಿರ್ಧಾರಕ ಅಂಶ. ನಗರದ ಶಾಲೆಗಳ ವಾತಾವರಣ, ವಿದ್ಯಾರ್ಥಿಗಳ ಹಿನ್ನೆಲೆ, ಲಭ್ಯವಿರುವ ಸೌಲಭ್ಯಗಳು ಮುಂತಾದುವಕ್ಕೆ ಹೋಲಿಸಿದರೆ ಗ್ರಾಮಾಂತರ ಪ್ರದೇಶಗಳಲ್ಲಿ ಕೊರತೆಗಳಿವೆ. ಅದನ್ನು ಗಮನಿಸಿ ಒಂದೋ, ಎರಡೋ, ಐದೋ ಅಂಕಗಳನ್ನು ನೀಡಿ ಗ್ರಾಮಾಂತರದ ಅಭ್ಯರ್ಥಿಗಳಿಗೆ ಸರ್ಕಾರವು ಮಣೆ ಹಾಕಿ ಉಪಚಾರ ಮಾಡಿದೆಯೆಂಬುದು ನ್ಯಾಯಾಲಯದ ತಗಾದೆ. ಆದರಿಂದ ನಗರದ ಪ್ರತಿಭಾವಂತರಿಗೆ ಅನ್ಯಾಯವಾಗಿದೆ, ಅದನ್ನು ಸರಿದೂಗಿಸಲು ಈ ಹದಿಮೂರು ಸಾವಿರ ಮಂದಿಯನ್ನು ಕಾಡಿಗೆ ಕಳಿಸಬೇಕು ! ನಮ್ಮ ದೇಶದ ನ್ಯಾಯದ ಪ್ರಜ್ಞೆಗೆ-ಐದು ಸಾವಿರ ವರ್ಷಗಳ ಇತಿಹಾಸವಿದೆ. ಅದರ ಪ್ರಕಾರ ಯಾರಿಗೆ ಯಾವ ಮೆಟ್ಟಿಲು ನಿರ್ಧಾರವಾಗಿದೆಯೋ ಅವರು ಅಲ್ಲೇ ಉಳಿಯಬೇಕು. ಈ ಸೂತ್ರಕ್ಕೆ ಹೊಸ ಸ್ವರೂಪ ಕೊಡಬಹುದು, ಆದರೆ ಹೂರಣ ಬದಲಾಗಬಾರದು, ಅಷ್ಟೆ. ದೇಶದಲ್ಲಿರುವವರಿಗೆಲ್ಲಾ ಉದ್ಯೋಗ ಕಲ್ಪಿಸಬೇಕೆಂದು ಸಂವಿಧಾನದಲ್ಲಿ ಬರೆದಿಟ್ಟಿಲ್ಲವಾದ್ದರಿಂದ ಬಹುಶಃ ನ್ಯಾಯಾಲಯವು ಆ ಬಗ್ಗೆ ನಿರ್ದೇಶನ ನೀಡುವುದಿಲ್ಲವೆಂದು ತೋರುತ್ತದೆ. ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಯೊಂದು ಹೀಗೂ ದಾಖಲಾಗಬಹುದು : ಗ್ರಾಮಾಂತರ ಮತ್ತು ನಗರ ಶಾಲೆಗಳಲ್ಲಿ ಸೌಲಭ್ಯಗಳು ಏಕಪ್ರಕಾರವಾಗಿಲ್ಲ; ಆದ್ದರಿಂದ ಅವನ್ನು ಸಮಾನಗೊಳಿಸಬೇಕು. ನ್ಯಾಯಾಲಯವು ಆಗ ಸೂಕ್ತ ನಿರ್ದೇಶನ ನೀಡಬಹುದೆ ? ಇನ್ನೊಂದಂಶವಿದೆ : ಗ್ರಾಮಾಂತರದಿಂದ ಬಂದವರಿಗೆ ''ಕೃಪೆ'' ತೋರುವ ಉದಾರಬುದ್ಧಿಯವರು ನಗರಗಳಲ್ಲೇ ಕೊಳಚೆಪ್ರದೇಶಗಳ ಶಾಲೆಗಳ ವಿದ್ಯಾರ್ಥಿಗಳತ್ತ ಕೃಪಾಕಟಾಕ್ಷವನ್ನೇಕೆ ಬೀರಲಿಲ್ಲ? ನಗರದ ಶಾಲೆಗಳೆಲ್ಲಾ 'ಬಿಷಪ್ ಕಾಟನ್' ಶಾಲೆಗಳೇ ಏನು ? ಸಮಾನ ಸೌಲಭ್ಯದ ರಚನೆಗೆ ಪರ್ಯಾಯವಾಗಿ ಈ ''ಕೃಪೆ'' ಬಂದಿದೆ. ಆದರೆ ಅದು ಕೇವಲ 'ಗ್ರಾಮಾಂತರ' ಎಂಬ ಹೆಸರಿನಲ್ಲಿ ಅಡಕವಾಯಿತು. ಎರಡು ವಿಷಯಗಳನ್ನು ಗ್ರಹಿಸಬೇಕು : (ಅ) ಸಮಾನ ಸೌಲಭ್ಯ ಕಲ್ಪಿಸಿದರೆ ನಿಮ್ಮ ಕೃಪೆ - ಅವಕೃಪೆಗಳು ಬೇಕಾಗುವುದಿಲ್ಲ; (ಆ) ನಗರದ ಎಲ್ಲ ಶಾಲೆಗಳೂ ಉನ್ನತವಲ್ಲ ಮತ್ತು ಗ್ರಾಮಾಂತರದ ಎಲ್ಲ ಶಾಲೆಗಳೂ ಕನಿಷ್ಠವಲ್ಲ. ಗೊರವನೂರಿನಲ್ಲಿ ಬಿಷಪ್ ಕಾಟನ್ ಶಾಖೆ ತೆಗೆಯಲು ಅಡ್ಡಿಯಿಲ್ಲ? ಕೆಲವನ್ನು ತೆಗೆದೂ ಆಗಿದೆ. ಆದ್ದರಿಂದ ನ್ಯಾಯಾಲಯದ ನಿರ್ದೇಶನ ಎಷ್ಟು ಅಪರಿಪಕ್ವವೋ ಗ್ರಾಮಾಂತರ ಕೃಪೆಯ ನಾಟಕವೂ ಅಷ್ಟೇ ಅಮಾನ್ಯ. ವರ್ಗದ ಪ್ರಶ್ನೆಯನ್ನು ಪ್ರದೇಶದ ಪ್ರಶ್ನೆಯಾಗಿ ಮಾರ್ಪಡಿಸಿ ಸಮಸ್ಯೆಗೆ ಉತ್ತರ ನೀಡುವ ನಾಜೂಕುತನ ಯಾರಿಗೂ ಶ್ರೇಯಸ್ಕರವಲ್ಲ. ಸಂವಿಧಾನವು ವರ್ಗವನ್ನು ನಮೂದಿಸಿಲ್ಲ; ಆದರೆ ಅದು ಜೀವಂತವಾಗಿದೆ. ನಾವು ಕಂಡುಕೊಳ್ಳಬೇಕಾದ ಉತ್ತರವು ವರ್ಗ ಹೋರಾಟದಿಂದ ದೊರೆಯುತ್ತದೆಯೇ ಹೊರತು ಯಾರ ''ಕೃಪೆ''ಯಿಂದಲೂ ಅಲ್ಲ.

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೦೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎ : ೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎ : ೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎ : ೪೨೪೩೦೨




ಅಮೆರಿಕ ದಾಳಿಯಿಂದ ತತ್ತರಿಸಿದ ಇರಾಕ್ – ಇದರ ವಾಸ್ತವತೆಯನ್ನು ಪ್ರತಿಬಿಂಬಿಸಿದ ಕರುಳು ಮಿಡಿಸಿದ ವರ್ಣಪಾರದರ್ಶಿಕೆಯೊಂದಿಗಿನ "ಹೊಸತು" ಕೈಸೇರಿದಾಗ ಕಣ್ಣಲ್ಲಿ ಹನಿ ಮೂಡಿತ್ತು.

ಶಿಕ್ಷಣ ಪದ್ಧತಿಯೊಳಗಿನ ಅವ್ಯವಸ್ಥೆಯನ್ನು ಹಾಸುಹೊಕ್ಕಾಗಿ ಚಿತ್ರಿಸಿದ ಲೇಖನ ಈ ತಿಂಗಳ ಸಂಪಾದಕೀಯ. ಅದು ವಾಸ್ತವತೆಯ ಪ್ರತೀಕವಾಗಿ ಹೊರಹೊಮ್ಮಿತ್ತು.

ಯಾಂತ್ರಿಕತೆಯ ಆಕ್ರಮಣದಿಂದಾಗಿ ಕೃಷಿಯಂತಹ ಬೃಹತ್ ಮಾನವಾಲಂಬಿತ ಕ್ಷೇತ್ರವೂ ತನ್ನ ಸಾಂಪ್ರದಾಯಿಕತೆಯಿಂದ ವಂಚಿತವಾಗುತ್ತಿರುವ ಈ ಆಧುನಿಕ ಯುಗದ ಕೃಷಿಗಾರಿಕೆಯಲ್ಲೂ ಹಲವು ಕೃಷಿ ಸಂಪ್ರದಾಯಗಳನ್ನು ಬಿಂಬಿಸಿತ್ತು ಪರಂಜ್ಯೋತಿಯವರ "ಕಳಸಂಸ್ಕೃತಿ ಮಾಯವಾಗುತ್ತಿದೆಯೇ ?"

ಬೆಂಗಳೂರು — **ನೆ. ಲ. ರಾಂ**

ಪತ್ರಿಕೆಯ ಮುಖಪುಟ ನೋಡಿ ಬಹಳ ನೋವುಂಟಾಯಿತು. ಹಾನಿಗೊಳಗಾದ ಅವಶೇಷಗಳು, ಬೆಂಕಿ ಹೊತ್ತಿ ಉರಿಯುತ್ತಿರುವ ಎಣ್ಣೆ ಬಾವಿಗಳು ಹಾಗೂ ಭಯಭೀತರಾಗಿ ಅಳುತ್ತಿರುವ ಮಕ್ಕಳು.

ಡಾ|| ಡಿ. ಎಸ್. ಪೂರ್ಣಾನಂದರು ಹೇಳುವಂತೆ ಎಲ್ಲಾ ಪ್ರಸಾರ ಮಾಧ್ಯಮಗಳು ಅಮೆರಿಕಾ ಸರ್ಕಾರದ ಕೈಗೊಂಬೆಯಂತೆ ನಟಿಸಿದವು. ಲೇಖಕರಿಗೆ ಧನ್ಯವಾದಗಳನ್ನು ತಿಳಿಸುತ್ತೇನೆ.

ಪ್ರಪಂಚದಲ್ಲಿ ಭಯೋತ್ಪಾದಕರನ್ನು ಸೃಷ್ಟಿಸುವಂತಹ ರಾಷ್ಟ್ರ ಅಮೆರಿಕಾ ಎಂಬುದು ನೂರಕ್ಕೆ ನೂರರಷ್ಟು ಸತ್ಯ. ಇರಾಕ್‌ನ ಮುಗ್ಧ ನಾಗರಿಕರ ಮೇಲೆ ಅಮೆರಿಕಾ ನಡೆಸಿದ ಯುದ್ಧದಿಂದ ಉಂಟಾದ ಸನ್ನಿವೇಶಗಳ ಬಗ್ಗೆ ವಿವರವಾಗಿ ಬರೆದಿರುವ ಸೀಯಾರ್ಕರವರಿಗೆ ಅಭಿನಂದನೆಗಳನ್ನು ತಿಳಿಸುತ್ತೇನೆ.

ಹೊನ್ನಾಯ್ಕನ ಹಳ್ಳಿ — **ನೆಲ್ಲೂರ ಕೆ. ಹನುಮೇಗೌಡ**

ಹೂಮಳೆಗರೆದು ನಗಿಸಬೇಕಾದ ಮಗುವನ್ನು ಹೀಗೆ ಗುಂಡು-ಬಾಂಬಿನ ಮಳೆಗರೆದು ಭಯಭೀತಗೊಳಿಸಿ ಅಳಿಸಬಹುದೆ? ಕೋಮಲತೆಯನ್ನೂ, ಕ್ರೌರ್ಯವನ್ನೂ ಏಕ ಕಾಲಕ್ಕೆ ಸೆರೆಹಿಡಿದ ಮೇ ೨೦೦೩ರ ಮುಖಪುಟದ ಮುದ್ದುಕಂದನ ನೋಟವನ್ನು ನಾವು ಎದುರಿಸಬಲ್ಲೆವೆ ? ನಾಗರಿಕತೆ ನಾಚಿ ತಲೆತಗ್ಗಿಸಬೇಕಾದ ಕೃತ್ಯವಿದು. ಇರಾಕ್ ಯುದ್ಧದ ಭೀಕರತೆಯನ್ನು ಒಂದು ಚಿತ್ರದ ಮೂಲಕ ಬಿಂಬಿಸಿದ್ದೀರಿ. ಪಾತಕಿಗಳ ಪಾಷಾಣ ಹೃದಯಕ್ಕೊಂದು ಸಾಕ್ಷಿ! ಈ ದೃಶ್ಯಕ್ಕಾಗಿ ಧನ್ಯವಾದ ಹೇಳಲು ಮನಸ್ಸೊಪ್ಪದು; ಆದರೂ ಸತ್ಯವನ್ನು ತಿಳಿಸಿದ್ದಕ್ಕೆ ವಂದನೆಗಳು.

ಬೆಂಗಳೂರು — **ಇಂದಿರಾ, ಮೀನಾಕ್ಷಿ ಅಮ್ಮ**

ಏಪ್ರಿಲ್ "ಹೊಸತು"ವಿನ, "ಬಾಬಾಬುಡನ್‌ಗಿರಿ" ವಿಷಯ ಕುರಿತ ಲೇಖನದ ಬಗ್ಗೆ ದಾದಾ ಹಯಾತ್ ಪೈಗಂಬರರ ಶಿಷ್ಯ ಎಂದರೆ ಆತ ಆರನೇ ಶತಮಾನದ ವ್ಯಕ್ತಿ. ಆತನ ಶಿಷ್ಯ ಖಲಂದರ್ (ಬಾಬಾಬುಡನ್). ಈತನು ೧೧೨೨ರಲ್ಲಿ ಸತ್ತನು ಎಂದು ಲೇಖಕರು ಬರೆದಿದ್ದಾರೆ. ಎಂದರೆ ಸುಮಾರು ೬೦೦ ವರ್ಷಗಳಷ್ಟು ಜೀವಿಸಿದ್ದನೆಂದಾಗುತ್ತದೆ, ಅಲ್ಲವೇ ? ನಂಬುವುದು ಸ್ವಲ್ಪ ಕಷ್ಟವೇ!




ಎರಡನೆಯದಾಗಿ, ದಾದಾ ಹಯಾತ್ ಸೂಫಿ ತತ್ತ್ವಗಳನ್ನು ಪೈಗಂಬರ್ ಮುಖಾಂತರ ಅರಿತು ಇಲ್ಲಿ ಪ್ರಸಾರ ಕೈಗೊಂಡಿದ್ದುದಾಗಿ ಬರೆದಿದ್ದಾರೆ. ಆದರೆ ಐತಿಹಾಸಿಕವಾಗಿ ಇಸ್ಲಾಂನಲ್ಲಿ ಸೂಫಿ ತತ್ತ್ವ ಕಾಣಿಸಿಕೊಂಡುದು ಅದು ಪಾರಸಿಕ ಮತದೊಡನೆ ಸಂವಾದಿಯಾದಾಗ.

ಸಾಗರ — **ಬ. ನಾ. ರಘುರಾಮ**

## ಮಂದ್ರ

ಎಸ್. ಎಲ್. ಭೈರಪ್ಪನವರ ಮಂದ್ರ ಕಾದಂಬರಿಯ ಕುರಿತ ಡಾ|| ಸಿ. ವಿ. ವತ್ಸಲಾ ಅವರ ವಿಮರ್ಶೆಗೆ ನನ್ನ ಪ್ರತಿಕ್ರಿಯೆ.

ವಿಶ್ಲೇಷಣಾ ಮನೋಭಾವ ವಿಮರ್ಶಕನ ಪ್ರಯತ್ನಕ್ಕೆ ಹೆಚ್ಚು ಅರ್ಥ ತುಂಬುತ್ತದೆ. ವತ್ಸಲಾ ಅವರು ಇಡೀ ಕಾದಂಬರಿಯನ್ನು ಲೈಂಗಿಕತೆ, ಸ್ವೇಚ್ಛೆ ಮತ್ತು ಭಾವೋದ್ರೇಕಗಳ ದೃಷ್ಟಿಕೋನಕ್ಕೆ ಸೀಮಿತವಾಗಿ ನೋಡಬಯಸುತ್ತಾರೆ. ಈ ಕಾರಣದಿಂದಲೇ ಅವರ ವಿಮರ್ಶೆ ಏಕಪಕ್ಷೀಯವಾಗಿದೆ, ರಚನಾತ್ಮಕತೆಯನ್ನು ಕಳೆದುಕೊಂಡಿದೆ. ಅವರ ಮಾತುಗಳೆಲ್ಲವೂ ಮೋಹನಲಾಲ, ಮನೋಹರಿದಾಸ್ ಮತ್ತು ಮಧುಮಿತ ಇವರ ಪ್ರಣಯ ಜೀವನದ ಮೇಲೆಯೇ ಕೇಂದ್ರೀಕೃತವಾಗಿವೆ. ಕಾದಂಬರಿಯ ಜೀವಾಳವಾಗಿರುವ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಸೊಬಗಿನ ಬಗ್ಗೆ ವಿಮರ್ಶೆಯಲ್ಲಿ ಒಂದು ಶಬ್ದವೂ ಸಿಗದು. ಕಲಾವಿದರ ಬದುಕು ಎಷ್ಟೋ ಬಾರಿ ವಿಚಿತ್ರವಾಗಿರುತ್ತದೆ, ವೈಲಕ್ಷಣ್ಯದಿಂದ ಕೂಡಿರುತ್ತದೆ. ಎಲ್ಲ ಸಾಮಾನ್ಯ ಮನುಷ್ಯರಂತೆ ಅವರಿಗೂ ದೌರ್ಬಲ್ಯಗಳಿರುವ ಸಾಧ್ಯತೆ ಇದ್ದೇ ಇರುತ್ತದೆ. 'ಮಂದ್ರ'ದಲ್ಲಿ ಬರುವ ಪಾತ್ರಗಳ ಸಣ್ಣಪುಟ್ಟ ವಿವರಗಳನ್ನು ಎತ್ತಿ ಹಿಡಿಯುವ ಬದಲು ವಿಮರ್ಶಕರು ಸಂಗೀತಕ್ಕೆ ಹೆಚ್ಚು ಒತ್ತು ಕೊಟ್ಟಿದ್ದರೆ ಸೂಕ್ತವಾಗಿರುತ್ತಿತ್ತು.

ಇನ್ನು ಭೈರಪ್ಪನವರ 'ವಂಶವೃಕ್ಷ' ಮತ್ತು 'ತಬ್ಬಲಿಯು ನೀನಾದೆ ಮಗನೆ' ಕುರಿತ ಅವರ ಅಭಿಪ್ರಾಯಗಳು ಪೂರ್ವಾಗ್ರಹದಿಂದ ಕೂಡಿವೆ.

ಭೈರಪ್ಪನವರ ಕಾದಂಬರಿಗಳಿಗೆ ತಮ್ಮದೇ ಆದ ಛಾಪು ಇದೆ. ಅವರ ಕೃತಿಗಳು ಲಘುವಾಗಿ ಓದಿಸಿಕೊಂಡು ಹೋಗುವ ಕೃತಿಗಳಲ್ಲ. ಅವುಗಳನ್ನು ಆಸ್ವಾದಿಸಬೇಕು. ಪದರಪದರವಾಗಿ ಬಿಡಿಸಿ ಅರ್ಥೈಸಬೇಕು.

ಬೆಂಗಳೂರು — **ವಿಮಲಾ ರಾವ್**

## ಸಿ.ಇ.ಟಿ. ಗೊಂದಲ

"ವಿವಾದಕ್ಕೆ ಸಂಬಂಧಪಟ್ಟವರೆಲ್ಲಾ ಉನ್ನಿಕೃಷ್ಣ ಮೊಕದ್ದಮೆ ರಾಜ್ಯಾಂಗ ಬಾಹಿರವೆಂದು ಒಪ್ಪಿಕೊಂಡಿದ್ದಾರೆ". "ಅದು ಸಮಾಜವಾದದ ನಂಬಿಕೆಗಳನ್ನು ಅವಲಂಬಿಸಿದ್ದು, ಅದಕ್ಕೆ ಅವಕಾಶವಿಲ್ಲ, ಆದ್ದರಿಂದ ಇದನ್ನು ರಾಜ್ಯಾಂಗಬಾಹಿರವೆಂದು ನಾವು ಹೇಳುತ್ತೇವೆ." ಇಲ್ಲಿ, ಸಂಬಂಧಪಟ್ಟವರು ಎಂದರೆ ಯಾರು ? ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳು, ಖಾಸಗೀ ಕಾಲೇಜುಗಳು, ಅಲ್ಪಸಂಖ್ಯಾತರ ಕಾಲೇಜುಗಳು, ಮಾತಾಪಿತೃಗಳು, ವಿದ್ಯಾರ್ಥಿಗಳು ಇದರಲ್ಲಿ ಸಂಬಂಧಪಟ್ಟವರಲ್ಲ ! ಅರ್ಜಿದಾರರು "ರಾಜ್ಯಾಂಗಬಾಹಿರವೆನ್ನುತ್ತಾರೆ. ಆದ್ದರಿಂದ ನಾವೂ ಹೇಳುತ್ತೇವೆ" ಎನ್ನುವುದು ಸರಿಯೇ? ಅಥವಾ "ನಮಗೆ ಇದು, ಇಂತಿಂಥ ಕಾರಣಗಳಿಂದ ರಾಜ್ಯಾಂಗಬಾಹಿರವೆಂದು ಕಾಣುತ್ತದೆ" ಎನ್ನುವುದು ಸರಿಯೇ ? ರಾಜ್ಯಾಂಗದಲ್ಲಿ ಸೋಷಿಯಲಿಸಂ ಪದವಿರುವವರೆಗೆ, ಅದನ್ನು ಅವಲಂಬಿಸಿದ ನೀತಿಯನ್ನು ರಾಜ್ಯಾಂಗ ವಿರೋಧವಾದ ನಿಲುವು ಎನ್ನುವುದು ಹೇಗೆ ಸಾಧ್ಯ ? ಪಾಮರರಿಗೆ ಅರ್ಥವಾಗದ ವಿಷಯ ಯಾರಿಗೆ ಗೊತ್ತು? ಇಷ್ಟು ಹೇಳುವುದೂ ನ್ಯಾಯಾಲಯ ನಿಂದನೆಯಾಗುವುದೋ ಏನೋ! ಸೋಲಿ ಅವರು ಹೇಳಿದ್ದು ಹಿಡಿಸಲಿಲ್ಲವೆಂದರೆ ಹಿಡಿಸಿದ್ದನ್ನು ಹೇಳಲು ಸಾಲ್ವೆಯವರನ್ನು ಮುಂದೊಡ್ಡಬಹುದು. ಒಬ್ಬ ನ್ಯಾಯಾಧೀಶರೇ ಇರುವ ಪೀಠ ಹೇಳಿದ್ದು ಪಥ್ಯವಾಗದಿದ್ದರೆ ಮೂವರು ನ್ಯಾಯಾಧೀಶರ ಪೀಠ ಮಾಡಬಹುದು. ಅದೂ ಸರಿಯೆನಿಸದಿದ್ದರೆ ೭, ೧೧ ಹೀಗೆ ಪೂರ್ಣ ಪೀಠ ರಚಿಸಿಕೊಳ್ಳಬಹುದು. ನಮಗೆ ಬೇಕಾದ ತೀರ್ಮಾನ ದೊರಕುವವರೆಗೂ ಈ ಕ್ರಿಯೆಯನ್ನು ಮುಂದುವರಿಸುತ್ತಲೇ ಹೋಗಬಹುದು ಎಂದಂತಾಗುತ್ತದಲ್ಲಾ?

ಈ ಪರಿಸ್ಥಿತಿ ದಿಢೀರೆಂದು ಬಂದದ್ದೇನಲ್ಲ ಸರ್ಕಾರದ ಅಧಿಕಾರದ ಹಿಂದಿನ ಸೂತ್ರ ಹಿಡಿದ ಪಟ್ಟಭದ್ರರು ಹತ್ತಾರು ವರ್ಷಗಳಿಂದ ಈ ಯೋಜನೆ ಹಾಕಿಕೊಂಡೇ ಬಂದಿದ್ದಾರೆ. ಅದರ ಬಹುಮುಖ್ಯ ಅಂಶವೆಂದರೆ ಸರ್ಕಾರೀ ಕಾಲೇಜುಗಳನ್ನು ಸ್ಥಾಪಿಸದೇ ಮುಂದುವರಿದದ್ದು. ಕಾಲಕ್ರಮದಲ್ಲಿ ಸರ್ಕಾರದ ಪ್ರಭಾವವನ್ನೇ ಬಂಡವಾಳವಾಗಿಸಿಕೊಂಡು ಹೆಸರು ಸಂಪಾದಿಸಿ ಕೊಬ್ಬಿ ಬೆಳೆದ ಮೇಲೆ ಈಗ ಅನುದಾನವನ್ನು ಬಯಸದೆಯೇ ಇಡೀ ಕ್ಷೇತ್ರವನ್ನು ನಿಯಂತ್ರಿಸುವ ಶಕ್ತಿ ಪಡೆದ ಖಾಸಗೀ ಕ್ಷೇತ್ರ ಸರಿಯಾದ ರಾಜಕೀಯ ಸಂದರ್ಭ ನೋಡಿ ನ್ಯಾಯಾಲಯದ ತೀರ್ಪು ಪಡೆದುಕೊಂಡಿದೆ. ಹಿಂದುಳಿದ ವರ್ಗಕ್ಕೆ ಖಾಸಗೀ ಕಾಲೇಜುಗಳಲ್ಲಿ ಸೀಟು ಕೊಡಿಸಬೇಕಾದರೆ ಕರ್ನಾಟಕ ಸರ್ಕಾರಕ್ಕೇ ನೂರಾರು ಕೋಟಿ ರೂಪಾಯಿ ಅಗತ್ಯವಿದೆ. ಈ ಹಣದಲ್ಲಿ ಧಾರಾಳವಾಗಿ ಹೊಸ ಕಾಲೇಜುಗಳನ್ನು ಸ್ಥಾಪಿಸಬಹುದಿತ್ತು. ಈಗಲೂ ಸಾಧ್ಯವಿದೆ. ಆದರೆ ಖಾಸಗಿಯವರಿಗೆ ಇದು ಒಲ್ಲದ ಬೆಳವಣಿಗೆ. ಬಹುಶಃ ಅವರು ಸರ್ಕಾರದ ಮೇಲಿನ ಈ ಭಾರವನ್ನು ಕಮ್ಮಿ ಮಾಡಿ, ಬೇಕಾದ ಹಣವನ್ನು ಇತರ ವರ್ಗದವರಿಂದ ವಸೂಲಿ ಮಾಡಿಕೊಂಡರೂ ಖಾಸಗೀಕರಣಕ್ಕೆ, ಉದಾರೀಕರಣಕ್ಕೆ, ಜಾಗತೀಕರಣಕ್ಕೆ ಮೂರು ಸಾರಿ ಜೈ ಅನ್ನೋಣವೇ ?

ಬೆಂಗಳೂರು — **ಕೆ. ಎಸ್. ಪಾರ್ಥಸಾರಥಿ**

# ದೇವರಿಲ್ಲದ ಗುಡಿಯಲ್ಲಿ

**ಗೆ**ಳೆಯ ಪ್ರದೀಪ್ ಪ್ಲೇ-ವಿನ್ ಲಾಟರಿ ಟಿಕೆಟ್ ತಂದಿದ್ದ. ಅವನಿಗೆಂಥದೋ ಭರವಸೆ. 'ಒಂದಲ್ಲ ಒಂದು ದಿನ ಹೊಡೆದೇ ಹೊಡೆಯುತ್ತದೆ' ಎಂದು. ನಾನು ತಮಾಷೆಗೆ 'ಒಂದು ಕೋಟಿ ಬಂದರೆ ಏನು ಮಾಡುತ್ತೀಯೋ?' ಎಂದೆ. 'ಒಂದು ಹೈಟೆಕ್ ದೇವಸ್ಥಾನ ಕಟ್ಟಿಸಬೇಕೆಂದಿದ್ದೇನೆ' ಎಂದ. ಅಂದರೆ ಆತನಲ್ಲಿ ಅಂತಹ ಉತ್ಕಟ ಭಕ್ತಿ ಇದೆ ಅಂತಲ್ಲ, ಜನರ ಭಕ್ತಿಯನ್ನು ಎನ್‌ಕ್ಯಾಷ್ ಮಾಡಿಕೊಳ್ಳುವ ಹುನ್ನಾರ ಅದು. ಹಣ ಮಾಡಲು ದೇವಸ್ಥಾನಗಳಿಗಿಂತ ಬೇರೊಂದು ಮಾಧ್ಯಮವಿಲ್ಲ ಅನ್ನುವ ಇಂತಹ ಸಿದ್ಧಾಂತದ ತಳಹದಿಯ ಮೇಲೆಯೇ ಇಂದು ಇಸ್ಕಾನ್‌ನಂಥ ದೇವಾಲಯಗಳು ಭದ್ರವಾಗಿ ತಳವೂರಿರುವುದು.

ಯಾಕೆ ಹೇಳಿದೆ ಎಂದರೆ, ಇತ್ತೀಚೆಗಷ್ಟೇ ಇಸ್ಕಾನ್ ದೇವಸ್ಥಾನಕ್ಕೆ ಹೋಗಿದ್ದೆ. ಕೈಗೆಟುಕುವಷ್ಟು ದೂರದಲ್ಲಿದ್ದರೂ ಅದೇಕೋ ಅದನ್ನು ನೋಡಬೇಕೆಂಬ ತವಕ ನನ್ನಲ್ಲಿ ಹುಟ್ಟಿರಲೇಯಿಲ್ಲ. ಆಕಸ್ಮಿಕವಾಗಿ ಅತ್ತ ಹೋದಾಗ ಗೆಳೆಯರೆಲ್ಲ ಹೋಗಿಬಂದೆವು. 'ಅಲ್ಲಿ ದೇವರಿಲ್ಲ ಮಾರಾಯ. ನಾಜೂಕಿನ ಜನರಿದ್ದಾರೆ - ದುಡ್ಡು ಮಾಡುವ ತಂತ್ರವಿದೆ' ಅಂತ ಗೆಳೆಯ ರಮೇಶ ಹೇಳುತ್ತಿದ್ದ ಮಾತುಗಳು, ಇಸ್ಕಾನ್‌ನ ಅದ್ದೂರಿತನ, ಮೊಸಾಯಿಕ್ ನೆಲಹಾಸು, ಮುಟ್ಟಿದರೆ ಮಾಸಿಬಿಡುತ್ತದೆನ್ನುವಂಥ ಗೋಡೆಗಳು, ಹೈಟೆಕ್ ಆಚರಣೆಗಳನ್ನು ನೋಡಿಬಂದ ಮೇಲೆ ನನ್ನಲ್ಲಿ ಮತ್ತಷ್ಟು ಜೀವ ಪಡೆದುಕೊಂಡವು. ನಿಜಕ್ಕೂ ಇದೊಂದು ದೇವಸ್ಥಾನವಲ್ಲ, ಒಂದು ಸುವ್ಯವಸ್ಥಿತ ವಾಣಿಜ್ಯ ಸಂಕೀರ್ಣ. ದೇವರು ಇಲ್ಲಿ ನೆಪಮಾತ್ರ. ನನ್ನ ಆತ್ಮೀಯಳೊಬ್ಬಳಿದ್ದಾಳೆ. ಪರಮ ದೈವಭಕ್ತೆ. ''ಅಲ್ಲಿ ಭಕ್ತಿ ಅನ್ನುವುದು ಹುಟ್ಟುವುದೇಯಿಲ್ಲ'' ಅನ್ನುತ್ತಾಳವಳು. ಅಲ್ಲಿ ಬಂದುಹೋಗುವ ಅನೇಕರ ಅಭಿಪ್ರಾಯವೂ ಇದಕ್ಕೆ ಹೊರತೇನಲ್ಲ. ವ್ಯಾಪಾರದ ಎಲ್ಲಾ ತಂತ್ರಗಳನ್ನು ಅಳವಡಿಸಿಕೊಂಡಿರುವ ಇಸ್ಕಾನ್ ಒಂದು ಪಂಚತಾರಾ ಹೋಟೆಲ್‌ಗೇನೂ ಕಡಿಮೆಯಲ್ಲ. ರೆಸ್ಟೋರೆಂಟ್ ಇದೆ, ಬೇಕರಿ ಇದೆ, ಅಂದ ಚೆಂದದ ಬಟ್ಟೆ ಸಿಗುತ್ತದೆ, ರುಚಿರುಚಿಯಾದ ತಿಂಡಿತಿನಿಸು ಸಿಗುತ್ತದೆ — ಕೊನೆಗೊಂದು ಚಮಚ ತೀರ್ಥವೂ ಸಿಗುತ್ತದೆ — ಆದರೆ ಇಲ್ಲಿ ದೇವರು ಸಿಗುತ್ತಾನೋ ಇಲ್ಲವೋ ಗೊತ್ತಿಲ್ಲ. ಎಲ್ಲಿ ಹೋದರೂ ಹುಂಡಿಗಳು, ಅರ್ಚನೆ - ಅಭಿಷೇಕಗಳ ನೆಪದಲ್ಲಿ ಹಣ ಬೇಡುವ, ಸೇವೆಯ ಹೆಸರಿನಲ್ಲಿ ಕಾವಲು ಕಾಯುವ ಕೃಷ್ಣ ಸೇವಕರು. ಒಟ್ಟಾರೆ ಅದ್ದೂರಿತನ, ಪ್ರದರ್ಶನ ಮತ್ತು ಪ್ರಚೋದನೆ ನಿಮ್ಮನ್ನು ಘಾಸಿಗೊಳಿಸುತ್ತದೆ.

ಸಾಮಾನ್ಯ ಜನರಿಗೂ ನಿಲುಕಬೇಕಾದ ಕೃಷ್ಣನೆಂಬ ಮಹಾಶಯ ಹೀಗೆ ಪಂಚತಾರಾ ವ್ಯವಸ್ಥೆಯಲ್ಲಿ ಕುಳಿತು ಭಕ್ತ ಮಹಾಶಯರ ಸುಲಿಗೆ ಮಾಡುವ ರೀತಿ ನೋಡಿದರೆ 'ಕೃಷ್ಣ ಬೆಣ್ಣೆ ಮಾತ್ರ ಕದಿಯುವವನಲ್ಲ, ಸುಲಿಗೆಯೂ ಮಾಡುತ್ತಾನೆ' ಎಂದೆನಿಸುತ್ತದೆ. ಜನರ ಭಕ್ತಿಯನ್ನೇ ಬಂಡವಾಳ ಮಾಡಿಕೊಂಡು ಅವರನ್ನು ಮತ್ತಷ್ಟು ಮಾನಸಿಕವಾಗಿ, ಆರ್ಥಿಕವಾಗಿ ಶೋಷಿಸುವ ಇಂತಹ ವ್ಯವಸ್ಥಿತ ಕ್ರಿಯೆಗಳು ನಿಜಕ್ಕೂ ಆತಂಕಕಾರಿ. ಎಲ್ಲಿಂದಲೋ ಬಂದು ತನ್ನ ಇಷ್ಟ ದೈವವನ್ನು ಕಣ್ಣಲ್ಲಿ ತುಂಬಿಕೊಳ್ಳಲು ಬಯಸುವ ಭಕ್ತನನ್ನು ಕ್ಷಣ ನಿಲ್ಲಿಸದ ಈ ಮಂದಿ ಅದೇ ತಿಂಡಿ - ತೀರ್ಥಗಳ ಮುಂದೆ ನಿಂತಾಗ ಓಲೈಸುವ ಪರಿ ನೋಡಿದರೆ ಅಸಹ್ಯ ಹುಟ್ಟಿಸುತ್ತದೆ. ಯಾಂತ್ರಿಕ ಜೀವನದ ನಡುವೆ ಮಾನಸಿಕ ನೆಮ್ಮದಿಗಾಗಿ ಪರಿತಪಿಸುವ ಜನಸಾಮಾನ್ಯನ ಭಕ್ತಿ ಹೀಗೆ ಹಣದ ರೂಪದಲ್ಲಿ ಸೋರಿಹೋಗಿ ಹಣ ಮಾಡುವ ಹುಂಬರ ಹೊಟ್ಟೆ ಸೇರುತ್ತಿರುವುದು ಪರಮ ಮೋಸವಲ್ಲದೆ ಮತ್ತೇನು ?

ಬೆಂಗಳೂರು **ರವಿಕುಮಾರ್ ಅಜ್ಜೀಪುರ**

---

*೩ನೇ ಪುಟದಿಂದ.... (ಈ ತಿಂಗಳು)*

ದರ್ಪದಿಂದ ದೊಡ್ಡ ಹೊಟ್ಟೆ ಹೊತ್ತು ಬಂದ, ಉಪದೇಶ ಸಹಸ್ರ ಉಸುರಿದ ಮತ್ತು ವಿಜಯ ಸಾಧಿಸಿದವನಂತೆ ದೆಹಲಿಯಿಂದ ಹಾರಿದ. ಭಾರತದ ಯಾವ ನಿರೀಕ್ಷೆಯನ್ನವನು ಪೂರೈಸಿದ ? ಸೊನ್ನೆ ಅವನ ಅದ್ಭುತ ಕೊಡುಗೆ. ಆದರೆ ನಮ್ಮ ಸರ್ಕಾರ ನೇರವಾಗಿ ಅದನ್ನು ಒಪ್ಪಿಕೊಳ್ಳಲು ಕೂಡ ಹಿಂಜರಿಯುತ್ತದೆ. ಕೈ ತಿರುಚಲು ಬಂದವನ ಮುಖಕ್ಕೆ ಗುದ್ದಲು ಅಂಜುವುದೇಕೋ ಎಂಬ ಹತಾಶೆ ನಮ್ಮನ್ನು ಕಾಡುತ್ತದೆ. ಅರ್ಮಿಟೇಜ್ ಮತ್ತವನ ನಾಯಕವೃಂದ ಬಳಸುವ ಅಹಂಕಾರದ ಭಾಷೆಯನ್ನು ಭಾರತ ಸಹಿಸುವುದಿಲ್ಲವೆಂಬುದನ್ನಾದರೂ ಹೇಳಬಾರದೆ ?

ಇರಾಕಿನ ನಾಗರಿಕರ ತಲೆಯ ಮೇಲೆ ತಮ್ಮ ಬೂಟುಕಾಲನ್ನಿರಿಸಿರುವ ಅಮೆರಿಕಾ ಸರ್ಕಾರದ ಅಪರಾಧವನ್ನು ಮನ್ನಿಸಿಬಿಟ್ಟಿರುವಂತೆ ಆ ಸರ್ಕಾರದ ಪ್ರತಿನಿಧಿಗಳೊಂದಿಗೆ ವ್ಯವಹರಿಸುವುದೇ ನಮ್ಮ ದೇಶಕ್ಕೆ ನಾಚಿಕೆಯ ವಿಷಯ. ನಿಮ್ಮ ರಕ್ತಸಿಕ್ತ ಕೈಗಳನ್ನು ಮುಟ್ಟುವಷ್ಟು ಹೀನ ಸಾಂಸ್ಕೃತಿಕ ಪ್ರಜ್ಞೆ ನಮ್ಮದಲ್ಲ ಎಂದು ಹೇಳುವ ನೈತಿಕ ಶಕ್ತಿಯನ್ನು ನಮ್ಮ ದೇಶ ಬೆಳೆಸಿಕೊಳ್ಳದಿದ್ದರೆ ನಮ್ಮ ದೀರ್ಘಕಾಲದ ಸಾಂಸ್ಕೃತಿಕ ಚರಿತ್ರೆ ತೃಣಸಮಾನವಾಗುತ್ತದೆ. ಅರ್ಮಿಟೇಜ್ ಜೊತೆ ಮಾತನಾಡುವಾಗ ಮೊದಲ ವಾಕ್ಯವೇ ''ನೀನು ಕೊಲೆಗಡುಕ ದೇಶದ ಪ್ರತಿನಿಧಿ, ನಿನಗೆ ಧಿಕ್ಕಾರವಿದೆ, ಆದರೆ ರಾಜತಾಂತ್ರಿಕ ಸಂಬಂಧದಲ್ಲಿ ಭೇಟಿ ನೀಡುತ್ತಿದ್ದೀಯೆ, ಹೇಳು ಅದೇನು ಮಾಡಲು ಬಂದಿರುವೆ ?'' ಎಂಬುದಾಗಬೇಕಿತ್ತು. ಆದರೆ ಹಾಗಾಗಲಿಲ್ಲ. ಅವನು ವಿಮಾನವೇರಿದ ನಂತರ ವಿಜ್ಞಾನಿಗಳನ್ನುದ್ದೇಶಿಸಿ ಮಾತನಾಡುತ್ತಾ ವಾಜಪೇಯಿ ತಮ್ಮ ದುಗುಡವನ್ನು ತೋಡಿಕೊಂಡರು. ವಿಶ್ವಸಂಸ್ಥೆಯನ್ನು ಧಿಕ್ಕರಿಸಿರುವ ರಾಷ್ಟ್ರದ ವಿರುದ್ಧ ಅಂತರರಾಷ್ಟ್ರೀಯವಾಗಿ ಕೆಲವು ನೇರಕ್ರಮಗಳನ್ನು ಆಯೋಜಿಸುವ ಜವಾಬ್ದಾರಿ ಹೊರಬೇಕಾಗಿದ್ದ ಭಾರತವು ಮುಸುಕಿನ ಗುದ್ದಿನಿಂದ ತೃಪ್ತಿಪಟ್ಟುಕೊಳ್ಳುವ ಪರಿ ಒಂದು ಪ್ರಹಸನವಾಗಿದೆ.

ಈ ಪ್ರಹಸನದ ಇನ್ನೊಂದು ಅಂಕ ವಾಷಿಂಗ್‌ಟನ್ನಿನಲ್ಲಿ ಜರುಗಿತು. ಅರ್ಮಿಟೇಜ್ ದೆಹಲಿಯಲ್ಲಿದ್ದಾಗಲೇ ಭಾರತದ ಭದ್ರತೆಯ ಸಲಹೆಗಾರ ಬ್ರಜೇಶ್ ಮಿಶ್ರ ಅಲ್ಲಿಗೆ ತೆರಳಿದ್ದು, ಕೊಂಡಲಿಸ್ಸಾಳನ್ನು ಭೇಟಿಯಾಗಿದ್ದರೆಂದು ಸುದ್ದಿ. ಅವಳು ಕೈ ತಿರುಚುವ ಪಡೆಯ ರೂವಾರಿ. ಬ್ರಜೇಶ್ ಕೇವಲ ಕೈ ತಿರುಚಿಸಿಕೊಂಡರೆ ಸಾಲದೆಂದು ಕಿವಿ ಮತ್ತು ಬುದ್ಧಿ ಎರಡನ್ನೂ ಅವಳಿಗೆ ಕೊಟ್ಟು ನಮ್ಮ ದೇಶಕ್ಕೆ ಮಸಿ ಬಳಿದರು. ಭಯೋತ್ಪಾದನೆ ಎದುರಿಸಲು ಭಾರತವು ಇಸ್ರೇಲ್ ಮತ್ತು ಅಮೇರಿಕಾದೊಡನೆ ಶಾಮೀಲಾಗಬೇಕೆಂಬ ವಿವೇಕ ಉದಯವಾಯಿತೆಂದು ಬ್ರಜೇಶ್ ಹೇಳಿಕೊಂಡಿದ್ದಾರೆ. ಭಯೋತ್ಪಾದನೆ ಎಂದರೇನು, ಅದರ ಮೂಲವೇನು ಎಂಬ ಪ್ರಶ್ನೆಗಳೆಲ್ಲಾ ಅಪ್ರಸ್ತುತವಂತೆ; ಸುಮ್ಮನೆ ಜೊತೆ ಸೇರಿ ಬಡಿಯುವುದಷ್ಟೇ ಇದಕ್ಕೆ ಪರಿಹಾರವಂತೆ. ಅಂದರೆ ಇಸ್ರೇಲ್ ಹೇಗೆ ಪ್ಯಾಲಿಸ್ಟೈನಿನಲ್ಲಿ ದರ್ಪ ಮೆರೆಯುತ್ತಿದೆಯೋ ಹಾಗೆ ಮಾಡಬೇಕೆಂದರ್ಥ. ಇದು ಕಾಶ್ಮೀರವನ್ನು ಭಾರತದಲ್ಲಿ ಉಳಿಸಿಕೊಳ್ಳುವ ಏಕೈಕ ಮಾರ್ಗವೆಂದು ಬ್ರಜೇಶ್ ಭಾವಿಸಿದ್ದರೆ ನಮ್ಮ ದೇಶದಲ್ಲಿ ಇನ್ನೆಷ್ಟು ರಕ್ತದ ಕೋಡಿ ಹರಿಯಬೇಕೆಂದು ಅವರು ಭಾವಿಸಿದ್ದಾರೋ ತಿಳಿಯದು. ಅದು ರಾಷ್ಟ್ರದ ಭದ್ರತೆಗೆ ಹಾದಿಯಲ್ಲ, ಛಿದ್ರತೆಗೆ ಆಹ್ವಾನ. ಒಟ್ಟಿನಲ್ಲಿ ಭಾರತವನ್ನು ಅಮೆರಿಕಾದ ಭಂಟನನ್ನಾಗಿಸುವ ನೀಚ ಕೆಲಸವನ್ನು ಭಾರತೀಯ ಜನತಾ ಪಕ್ಷವು ಭರದಿಂದ ಮಾಡುತ್ತಿದೆ. ಆ ಪಕ್ಷವು ಭಾರತೀಯ ಸಂಸ್ಕೃತಿಯನ್ನು ಅರ್ಥ ಮಾಡಿಕೊಳ್ಳುವ ಮತ್ತು ಗೌರವಿಸುವ ವಿಧಾನ ಇದು. ಅದು ದೇಶದ ವಿಧಾನವೂ ಆಗಬೇಕೆ ?

# ಸಂಸಾರವೆಂಬ ಹೆಣ ಬಿದ್ದರೆ !

ಪ್ರೊ|| ಶಿವರಾಮಯ್ಯ

*ಸಂಸಾರವೆಂಬ ಹೆಣ ಬಿದ್ದರೆ*
*ತಿನಬಂದ ನಾಯ ಜಗಳವ ನೋಡಿರೆ*
*ನಾಯ ಜಗಳವ ನೋಡಿ ಹೆಣನೆದ್ದು ನಗುತ್ತಿದೆ*
*ಗುಹೇಶ್ವರನೆಂಬ ಲಿಂಗವಲ್ಲಿಲ್ಲ ಕಾಣಿರೆ*

– ಅಲ್ಲಮ

ಮೇಲ್ಕಂಡ ವಚನದ ಬೆಡಗಿನ ಧ್ವನಿ ನನಗೆ ಈಗೀಗ ಹೆಚ್ಚು ನಿಚ್ಚಳವಾಗುತ್ತಿದೆ. ಸುತ್ತುಬಳಸಿನ ಮಾತೇಕೆ ? ಜಾಗತಿಕ ಸಂಸಾರದ ನಡುವೆ ಇರಾಕ್ ದೇಶದ ಹೆಣ ಬಿದ್ದಿದೆ. ಸಾಮ್ರಾಜ್ಯಶಾಹಿ ನಾಯಿಗಳು ಅದನ್ನು ಹರಿದು ತಿನ್ನಲು ಜಗಳಕ್ಕೆ ನಿಂತಿವೆ. ಈ ನಾಯ ಜಗಳವ ನೋಡಿ ಆ ಹೆಣನೆದ್ದು ''ನೋ ಸದ್ದಾಂ, ನೋ ಅಮೆರಿಕ, ನೋ ಯೂರೋಪ್'' ಎಂದು ಪ್ರತಿಭಟನೆಯ ನಗು ನಗುತ್ತಿದೆ. ಅಲ್ಲಿ ಜನತಾ ಜನಾರ್ಧನನೆಂಬ ಜನತಂತ್ರಲಿಂಗ ಇನ್ನೂ ಕಾಣುತ್ತಿಲ್ಲ. ಹೀಗೆ ಅನ್ವಯಿಸಿಕೊಂಡು ಓದಿದರೆ ಅಲ್ಲಮನ ಈ ವಚನ ದಿಗಂತ ವಿಸ್ತಾರವಾದ ಅರ್ಥವನ್ನು ಹೊಂದಿರುವುದು ಕಂಡುಬರುತ್ತದೆ. ಎಂದರೆ ಇರಾಕ್ ಎಂಬ ದೇಶಕ್ಕೆ ಸದ್ದಾಂ ಹುಸೇನ್ ಎಂಬ ಸರ್ವಾಧಿಕಾರಿಯ ಆಳ್ವಿಕೆ ಕೊನೆಗೊಂಡು ವಿದೇಶೀ ಸರ್ವಾಧಿಕಾರ ಆರಂಭಗೊಂಡಿತು ಎಂದರ್ಥ. ಆದ್ದರಿಂದ ಅಲ್ಲಮನ ವಚನ ಜಾಗತೀಕರಣ ಸಿದ್ಧಾಂತಕ್ಕೆ ಹಿಡಿದ ಅಪೂರ್ವ ಕನ್ನಡಿ ಎಂಬಂತಿದೆ.

ಇದು ಹೇಗೆ ಎಂಬುದರ ಬಗ್ಗೆ ಮುಂದೆ ಕೆಲವು ವಿವರಣೆಗಳನ್ನು ನೋಡಬಹುದು. ರೂಪವತಿ ಹೆಣ್ಣಿಗೆ ಅವಳ ಸೌಂದರ್ಯವೇ ಶಾಪ ಎಂಬ ಮಾತಿದೆ. ಹಾಗೆಯೇ ಒಂದು ದೇಶಕ್ಕೆ ಅದರಲ್ಲಿರುವ ನೈಸರ್ಗಿಕ ಸಂಪನ್ಮೂಲಗಳೇ ಶಾಪ ಎಂಬ ಮಾತು ಈಗ ಅನುಭವಕ್ಕೆ ಬರುತ್ತಿದೆ. ಬಾಗ್ದಾದ್ ನಗರದ ಮೇಲೆ ಸುರಿಯುತ್ತಿದ್ದ ಬಾಂಬ್ ದಾಳಿ ಕಂಡು ಅಲ್ಲಿನ ಸಾಮಾನ್ಯ ಪ್ರಜೆಯೊಬ್ಬ 'ನಮ್ಮಲ್ಲಿರುವ ಎಣ್ಣೆಯೇ ನಮಗೆ ಶಾಪವಾಗಿದೆ' ಎಂದು ಅಸಹಾಯಕನಾಗಿ ಪ್ರತಿಕ್ರಿಯಿಸಿದ್ದು ಈ ಮಾತನ್ನು ಸರಿಯಾಗಿಯೇ ಸಮರ್ಥಿಸುತ್ತದೆಯಲ್ಲವೆ ?

ಇದೇನು ನೆನ್ನೆ ಮೊನ್ನೆಯ ಮಾತಲ್ಲ. ಇತಿಹಾಸವೆಂದರೆ ಸಂಪತ್ತಿನ ಕೊಳ್ಳೆಯೇ ತಾನೆ ? ಪಶ್ಚಿಮದ ದಂಡಯಾತ್ರೆಗಳೆಲ್ಲ ಪೂರ್ವ ರಾಷ್ಟ್ರಗಳನ್ನು ಮೇಲಿಂದ ಮೇಲೆ ಲೂಟಿ ಹೊಡೆದಿದ್ದೆ ಅಲ್ಲವೆ ? ಮಂಗೋಲಿಯನ್ನರಿಂದ ಮೊದಲುಗೊಂಡು ಬ್ರಿಟಿಷರವರೆಗೆ, ಅಲೆಗ್ಸಾಂಡರನಿಂದ ಮೊದಲುಗೊಂಡು ನೆಪೋಲಿಯನ್ನನವರೆಗೆ; ಯಾಕೆ, ಇವತ್ತು ಬಹುರಾಷ್ಟ್ರೀಯ ಕಂಪನಿಗಳು ಮಾಡುತ್ತಿರುವುದಾದರೂ ಮತ್ತೇನು ? ದುರ್ಬಲ ರಾಷ್ಟ್ರಗಳ ಸಂಪನ್ಮೂಲಗಳನ್ನು ಲೂಟಿ ಹೊಡೆಯುವುದೇ ಆಗಿದೆ. ಅದಕ್ಕೆ ಈಗ ಜಾಗತೀಕರಣವೆಂಬ ಹೊಸ ಹೆಸರನ್ನು ಕೊಡಲಾಗಿದೆ, ಅಷ್ಟೆ. .

ಆದರೆ ಈ ಲೂಟಿಕೋರ ಸಾಮ್ರಾಟರು ತಮ್ಮ ಅನ್ಯಾಯಗಳನ್ನು ಮುಚ್ಚಿಹಾಕಿಕೊಳ್ಳಲು ಧರ್ಮ ಸಂಸ್ಥಾಪನೆ, ಪ್ರಜಾತಂತ್ರ ರಕ್ಷಣೆ ಮುಂತಾದ ಹೊಸ ಪರಿಭಾಷೆಗಳನ್ನು ಕಾಲದಿಂದ ಕಾಲಕ್ಕೆ ಬಳಸುತ್ತ ಶೋಷಿತ ಜನರನ್ನು ದಿಕ್ಕು ತಪ್ಪಿಸುತ್ತಿದ್ದಾರೆ. ಬರಡಾಗಿ ಹೋಗುತ್ತಿರುವ ಲ್ಯಾಟಿನ್ ಅಮೆರಿಕ, ಆಫ್ರಿಕಾ ಹಾಗೂ ಏಷ್ಯಾ ಖಂಡದ ಕೆಲವು ರಾಷ್ಟ್ರೀಯತೆಗಳು ಈ ಮಾತಿಗೆ ನಿದರ್ಶನವಾಗಿ ನಿಂತಿವೆ ಈಗ.

ಎರಡನೆಯ ವಿಶ್ವ ಸಮರದ ನಂತರ ಅಮೆರಿಕದ ಜೈತ್ರಯಾತ್ರೆ ಈ ನಿಟ್ಟಿನಲ್ಲಿ ಸಾಗಿದೆ. ಹಿಂದೆ ಬ್ರಿಟಿಷರು ಮಾಡಿದ ಕೆಲಸವನ್ನೇ ಈಗ ಅಮೆರಿಕನ್ನರು ಮಾಡುತ್ತಿದ್ದಾರೆ. ಅಪಾರ ತೈಲ ನಿಕ್ಷೇಪಗಳನ್ನು ತಮ್ಮಲ್ಲಿ ಹೊಂದಿರುವ ಮಧ್ಯ ಪ್ರಾಚ್ಯದ ಅರಬ್ ರಾಷ್ಟ್ರಗಳು ಅದರ ಕೊಳ್ಳೆ ದೃಷ್ಟಿಗೆ ಒಳಗಾಗಿವೆ. ಅದರಲ್ಲಿ ಮೊದಲ ಬಲಿ ಇರಾಕ್. ಅಮೆರಿಕ ಮತ್ತು ಇಂಗ್ಲೆಂಡಿನ ಜಂಟಿ ಪಡೆಗೆ ಅದು ಶರಣಾಗಿದೆ. ಸರ್ವಾಧಿಕಾರಿ ಸದ್ದಾಂ ಹುಸೇನ್ ಪದಚ್ಯುತನಾಗಿ ನಾಪತ್ತೆಯಾದ. ಹೀಗೆ ಅನಾಯಾಸ ಸೋತ ರಾಷ್ಟ್ರದ ಪೋಸ್ಟ್ ಮಾರ್ಟಂ ಕಾರ್ಯ ಈಗ ಭರದಿಂದ ಸಾಗಿದೆ. ಎಣ್ಣೆ ವಾಸನೆ ಹಿಡಿದ ರಣಹದ್ದುಗಳ ಹಾರಾಟ ಹೆಚ್ಚಾಗುತ್ತಿದೆ. ಫ್ರಾನ್ಸ್, ಜರ್ಮನಿ, ರಷ್ಯಾ ಮುಂತಾದುವು 'ಇರಾಕಿನ ಪುನರ್ ನಿರ್ಮಾಣದ ಉಸ್ತುವಾರಿಯನ್ನು ವಿಶ್ವಸಂಸ್ಥೆಯೇ ನೋಡಿಕೊಳ್ಳಬೇಕೆ'ಂಬ ಪ್ರಸ್ತಾವನೆಯನ್ನು ಭದ್ರತಾ ಮಂಡಳಿಯ ಮುಂದೆ ಮಂಡಿಸಿವೆ. ಆದರೆ ಇತ್ತ ಪೆಂಟಗಾನ್ ವ್ಯಾಘ್ರ ಮಾತ್ರ ಇದಕ್ಕೆಲ್ಲ ಸೊಪ್ಪು ಹಾಕದೆ ಆ ಕಂಟ್ರಾಕ್ಟಿನ ಸಿಂಹ ಪಾಲು ತನಗೇ ಬಿಟ್ಟಿದ್ದು ಎಂದು ಗರ್ಜಿಸುತ್ತಿದೆ. ಯಾಕೆಂದರೆ ಇಡೀ ವಿಶ್ವದ ಸಮರ ವಿರೋಧವನ್ನು ಲೆಕ್ಕಿಸದೆ ಅಮೆರಿಕ ಮತ್ತು ಇಂಗ್ಲೆಂಡ್ ಜಂಟಿಯಾಗಿ ಇರಾಕನ್ನು ಆಂಟಿಸೆಪ್ಟಿಕ್ ಯುದ್ಧದಲ್ಲಿ ಮಣಿಸಿವೆ. ತರ್ಕಬದ್ಧವಾಗಿ ಅದರಿಂದ ಬರುವ ಎಲ್ಲ ಫಲಾಫಲಗಳು ಈ ಎರಡು ರಾಷ್ಟ್ರಗಳಿಗೇ ಸೇರಬೇಕು. ಇಲ್ಲಿಯೂ ಕೂಡ ಅಮೆರಿಕದ ವರ್ತನೆ ಬ್ರಿಟನ್ನಿಗೆ ಮುಜಗರ ತರಲಾಗಿ ತನ್ನ ಸೈನ್ಯವನ್ನು ಅದು ಹಿಂದಕ್ಕೆ ಕರೆಸಿಕೊಳ್ಳುತ್ತಿದೆ. ಈ ಎರಡು ದೇಶಗಳ ಬಗ್ಗೆ ಒಂದು ಮಾತು. ಅಮೆರಿಕ ಇಂಗ್ಲೆಂಡಿನ ಜೊತೆ ಕೂಡಿಕೊಂಡಿರುವುದಕ್ಕೆ ಮುಖ್ಯ ಕಾರಣವೆಂದರೆ, ಆ ದೇಶಕ್ಕೆ ವಸಾಹತು ಸಾಮ್ರಾಜ್ಯವನ್ನು ಕಟ್ಟಿ ಆಳಿದ ಶತಮಾನಗಳ ಅನುಭವವಿದೆ. ಲೂಟಿಯ ವಿಧಿ ವಿಧಾನಗಳನ್ನು ಅದು ಚೆನ್ನಾಗಿ ಬಲ್ಲುದು. 'ಸಹಾಯಕ ಸೈನ್ಯಪದ್ಧತಿ' ಎಂಬ ಮನೆಮುರುಕ ಕಾನೂನನ್ನು ಜಾರಿಗೆ ತಂದಿದ್ದ ಕಂಪನಿ ಸರ್ಕಾರ, ಒಂದು ದೇಶದ ಸೈನ್ಯವನ್ನು ಮತ್ತೊಂದು ದೇಶದಲ್ಲಿ ನೆಲೆಗೊಳಿಸಿ, ಪರಸ್ಪರ ಕಾದಾಡಲು ಬಿಟ್ಟು ಹೀಗೇ ಸೂರ್ಯ ಮುಳುಗದ ಸಾಮ್ರಾಜ್ಯವನ್ನು ಕಟ್ಟಿ ಆಳಿತು. ಅದು ತೆರವು ಮಾಡಿರುವ ರಾಷ್ಟ್ರಗಳೆಲ್ಲ ಈಗ ಮರುಭೂಮಿಗಳಾಗುತ್ತಿವೆ. ಜೊತೆಗೆ ಕಾಶ್ಮೀರ, ಪ್ಯಾಲೆಸ್ಟೈನ್, ಕೊರಿಯಾ, ಐರ್ಲೆಂಡ್, ಮುಂತಾದ ಕಡೆ ಸಮಸ್ಯೆಗಳನ್ನು ಜೀವಂತವಿಟ್ಟು ಅಲ್ಲಿಂದ ಕಾಲ್ಕಿತ್ತಿದೆ. ಹೀಗೆ ಒಡೆದು ಆಳುವ ನೀತಿಯನ್ನು ಅಮೆರಿಕ ಇಂಗ್ಲೆಂಡಿನಿಂದ ಊರ್ಜಿತಗೊಳಿಸಿಕೊಂಡಿದೆ. ಆದ್ದರಿಂದ ಅದನ್ನು ಪ್ರಿಯತಮೆಯಂತೆ ಅಪ್ಪಿ ಮುದ್ದಾಡುತ್ತ ಅದರ ವಸಾಹತುಶಾಹಿ ನೀತಿಯನ್ನೇ ತನ್ನ ಸಾಮ್ರಾಜ್ಯಶಾಹಿ ನೀತಿಯಲ್ಲಿ ಅಳವಡಿಸಿಕೊಂಡು ಮುಂದುವರಿಯುತ್ತಿದೆ. ಅದೇ ಜನತಂತ್ರ ರಕ್ಷಣೆ, ಅದೇ ಧಾರ್ಮಿಕ ಸಂಸ್ಥಾಪನೆ ಎಂಬ ಹಳೆಯ ಮಂತ್ರಗಳನ್ನೇ ಪುನರುಚ್ಚರಿಸುತ್ತದೆ. ಉಳಿದ ವಿಶ್ವರಾಷ್ಟ್ರಗಳು 'ಉಢಾಳ ಊರಿಗೆ ದೊಡ್ಡವನು' ಎಂದು ಹಲ್ಲುಕಚ್ಚಿಕೊಂಡು ಸುಮ್ಮನೆ ಕುಳಿತಿವೆ. ಅಮೆರಿಕದ ದುಂಡಾವರ್ತನೆಯನ್ನು ನೇರವಾಗಿ ಎದುರಿಸಲಾರದ ಅರಬ್ ಮತ್ತಿತರ ಕೆಲ ರಾಷ್ಟ್ರಗಳು ಭಯೋತ್ಪಾದನೆಗೆ, ಗೆರಿಲ್ಲಾ ಕಲಹಕ್ಕೆ, ಜೆಹಾದ್‌ಗೆ ಮುಂದಾದುವು. ಆದರೆ ಇದರಿಂದ ರೊಚ್ಚಿಗೆದ್ದ ಅಮೆರಿಕ ಅವುಗಳ ಮೂಲೋತ್ಪಾಟನೆ ಮಾಡುವ ಪಣ ತೊಟ್ಟು ನೇರ ಕಾಳಗಕ್ಕೆ ಇಳಿಯಿತು.

ಇದೇ ಸಮಯಕ್ಕೆ ಸರಿಯಾಗಿ ೨೦೦೧ ಸೆಪ್ಟೆಂಬರ್ ಘಟನೆಯನ್ನು ನೆಪ ಮಾಡಿಕೊಂಡು ಮೂರ್ಖರ ಮೌಳಿ ಒಸಾಮ ಬಿನ್ ಲಾಡೆನನನ್ನು ಮಟ್ಟ ಹಾಕಲು ಹೊರಟ ಅಮೆರಿಕ ಕಾಬೂಲಿನಲ್ಲಿ ತಾಲಿಬಾನ್ ಸರ್ಕಾರವನ್ನು ವಜಾ ಮಾಡಿ ತನ್ನ ಕೈ ಗೊಂಬೆ ಕರ್ಜೈ ಎಂಬುವನನ್ನು ಅಲ್ಲಿ ಕೂರಿಸಿ ಕಾಬೂಲಿನ ಆಯಕಟ್ಟಿನ ಮಾರ್ಗದಲ್ಲಿ ಎಣ್ಣೆ ಕೊಳವೆಗಳನ್ನು ಹಾಕಿಕೊಳ್ಳಲು ಮಾರ್ಗವನ್ನು ಸುಗಮ ಮಾಡಿಕೊಂಡಿತು. ಆದರೆ ಅಲ್ಲಿ ಬೆಟ್ಟ ಅಗೆದರೂ ಲಾಡೆನ್ ಎಂಬ ಇಲಿ ಮಾತ್ರ ಸಿಕ್ಕಲೇ ಇಲ್ಲ. ಅದಿರಲಿ. ಇದರಿಂದ ಏಷ್ಯಾ, ಯೂರೋಪಿನ ಎಣ್ಣೆ ವಹಿವಾಟು ಮಾತ್ರ ನಿರಾತಂಕವಾಯಿತು. ಅಮೆರಿಕಾಕ್ಕೆ ಬೇಕಾದದ್ದು ಇಷ್ಟೇ ತಾನೆ ?

ಇದರಿಂದ ಉತ್ತೇಜನಗೊಂಡ ಬುಷ್ ಗ್ಯಾಂಗ್ ಇರಾಕನ್ನು ಮಣಿಸಲು ಶಪಥ ತೊಟ್ಟಿತು. ವಿಶ್ವಸಂಸ್ಥೆಯ ಠರಾವನ್ನು ಧಿಕ್ಕರಿಸಿ ಮಾರಕಾಸ್ತ್ರಗಳ ನೆಪವೊಡ್ಡಿ ನಾಗರಿಕತೆಯ ತೊಟ್ಟಿಲು, ನಾವಿಕರ ತವರೂರು, ೧೦೦೧ ಕಥೆಗಳ ಕಲ್ಪನಾನಗರಿ ಬಾಗ್ದಾದನ್ನು ವಶಪಡಿಸಿಕೊಂಡುಬಿಟ್ಟಿತು. ಇರಾಕಿನ ಪತನದ ತರುವಾಯ ಶ್ವೇತಭವನದಿಂದ ಹೊರಬಿದ್ದ ನಾಲ್ಕಾರು ಪ್ರಕಟಣೆಗಳು ಪ್ರಕೃತ ವಿಚಾರಕ್ಕೆ ಅಗತ್ಯ ಬೇಕಾಗಿವೆ. ಅವುಗಳಲ್ಲಿ ಮೊದಲನೆಯದು, ಇನ್ನು ಮುಂದೆ ಪೆಟ್ರೋಲಿಯಂ ಉತ್ಪನ್ನಗಳ ವಹಿವಾಟನ್ನು ಪೂರ್ತಿ ಅಮೆರಿಕವೇ ಖುದ್ದಾಗಿ ನೋಡಿಕೊಳ್ಳುತ್ತದೆ; ಎರಡನೆಯದು ಸ್ಥಳೀಯ ಸರ್ಕಾರ ಅಸ್ತಿತ್ವಕ್ಕೆ ಬರುವವರೆಗೆ ಇರಾಕಿನ ಸಮಸ್ತ ಉಸ್ತುವಾರಿಯನ್ನೂ ಜಾಯ್ ಗಾರ್ನರ್ ಎಂಬ ಅಮೆರಿಕದ ನಿವೃತ್ತ ಸೇನಾ ಜನರಲ್ ನೋಡಿಕೊಳ್ಳುತ್ತಾನೆ; ಮೂರನೆಯದು, ಯುದ್ಧ ಸಂತ್ರಸ್ತ ಇರಾಕಿನ ಪುನರ್ ನಿರ್ಮಾಣ ಸಂಬಂಧವಾದ ೫೮೦ ಕೋಟಿ ಡಾಲರಿನ ಕಂಟ್ರಾಕ್ಟನ್ನು ಅಮೆರಿಕದ ಬೆಕ್‌ಟೆಲ್ ಎಂಬ ಮೆಗಾ ಕಂಪನಿಗೆ ವಹಿಸಿಕೊಡಲಾಗಿದೆ. ನಾಲ್ಕನೆಯದು, ಕರ್ಬಲಾ ಎಂಬ ಪವಿತ್ರ ಸ್ಥಳವನ್ನು ಶಿಯಾ ಪಂಗಡದ ಮುಸ್ಲಿಮರಿಗೆ ತೆರವು ಮಾಡಿಕೊಡಲಾಗಿದೆ. ಈ ಒಂದೊಂದು ಪ್ರಕಟಣೆಯಲ್ಲೂ ಅಮೆರಿಕ ತನ್ನ ಸಿಂಹಪಾಲನ್ನು ಗಿಟ್ಟಿಸಿಕೊಂಡು ಇಡೀ ಇರಾಕನ್ನು ತನ್ನ ಮುಷ್ಟಿಗೆ ತೆಗೆದುಕೊಂಡಿರುವ ಅಂಶ

ಸುವ್ಯಕ್ತವಾಗುತ್ತದೆ. ಬಹುಶಃ ಇದರಿಂದ ಕಸಿವಿಸಿಕೊಂಡ ಇಂಗ್ಲೆಂಡ್ ಅಲ್ಲಿಂದ ತನ್ನ ಸೈನ್ಯವನ್ನು ಹಿಂದಕ್ಕೆ ಕರೆಸಿಕೊಳ್ಳಲು ನಿರ್ಧಾರ ತೆಗೆದುಕೊಂಡಿರಬೇಕು.

ಇರಾಕಿನಂಥ ತೈಲ ಸಮೃದ್ಧ ರಾಷ್ಟ್ರವನ್ನು ಮಾರಕಾಸ್ತ್ರಗಳ ನೆಪಹೂಡಿ ಇಷ್ಟು ಅವಸರದಲ್ಲಿ ಅಮೆರಿಕ ವಶಪಡಿಸಿಕೊಂಡುದಕ್ಕೆ ಮುಖ್ಯ ಕಾರಣ ಆ ದೇಶದ ಹದಗೆಟ್ಟ ಆರ್ಥಿಕತೆಯೇ. ಎರಡನೇ ವಿಶ್ವ ಸಮರದ ನಂತರ ಅದು ಮೊದಲ ಬಾರಿಗೆ ಆರ್ಥಿಕ ದಿವಾಳಿಗೆ ಗುರಿಯಾಯಿತು. ಅದನ್ನು ಸರಿಗಟ್ಟಿಕೊಳ್ಳಬೇಕಾದರೆ ತೈಲ ವಹಿವಾಟನ್ನು ಸಂಪೂರ್ಣವಾಗಿ ತನ್ನ ಹತೋಟಿಗೆ ತೆಗೆದುಕೊಳ್ಳಲೇಬೇಕಾಗಿತ್ತು; ಯುದ್ಧಾಸ್ತ್ರಗಳ ಕೈಗಾರಿಕೆಗಳನ್ನು ಪುನಃಶ್ಚೇತನಗೊಳಿಸಿಕೊಳ್ಳಬೇಕಾಗಿತ್ತು; ಮತ್ತು ವಿಶ್ವದ ಎಲ್ಲೆಡೆ ಭಯೋತ್ಪಾದನೆಯನ್ನು ಹುಟ್ಟು ಹಾಕುವ ಮೂಲಕ, ಹಿಂದಿನಿಂದ ಅದನ್ನು ಹತ್ತಿಕ್ಕಿ ತನ್ನ ವರ್ಚಸ್ಸನ್ನು ಬೆಳೆಸಿಕೊಳ್ಳಬೇಕಾಗಿತ್ತು. ಇಂಥ ಒಂದು ಕಾರ್ಯಸೂಚಿಯನ್ನು ಹಿಡಿದುಕೊಂಡೇ ಬುಷ್, ಡಿಕ್ ಚೆನಿ, ರಮ್ಸ್‌ಫೆಲ್ಡ್ ಮತ್ತು ಕಾಲಿನ್ ಪೊವೆಲ್ ಎಂಬುವ ಯುದ್ಧದಾಹಿ ತಂಡ ಕಳೆದ ಚುನಾವಣೆಯಲ್ಲಿ ಗೆದ್ದು ಬಂದಿದೆ. ಇಂಥವರಿಗೆ ಸೆಪ್ಟಂಬರ್ ಘಟನೆ ವರದಾನವಾಗಿ ಪರಿಣಮಿಸಿತು. ತದನಂತರ ತಮ್ಮ ಒಂದೊಂದೇ ಕಾರ್ಯಾಚರಣೆಯನ್ನು ಮುಂದುವರಿಸಿ ಅಫಘಾನಿಸ್ತಾನ, ಇರಾಕನ್ನು ಮಣಿಸಿ ಈಗ ಸಿರಿಯಾದತ್ತ ದೃಷ್ಟಿ ನೆಟ್ಟಿದೆ.

ಪೆಟ್ರೋಲಿಯಂ ವಸ್ತುಗಳ ವಹಿವಾಟು, ಮತ್ತು ಯುದ್ಧಗಳು ಹಾಗೂ ವಿಶ್ವರಾಷ್ಟ್ರಗಳನ್ನು ತನ್ನ ಬಿಗಿಬಂಧದಲ್ಲಿ ಉಳಿಸಿಕೊಳ್ಳುವುದು, ಈ ಮೂರು ಏಕಕಾಲಕ್ಕೆ ನಡೆಯುವಂಥ ಪ್ರಕ್ರಿಯೆಗಳಾಗಿವೆ. ಶಕ್ತಿ ರಾಷ್ಟ್ರವಾದ ಅಮೆರಿಕ ವಿಶ್ವದ ಆಯಕಟ್ಟಿನ ಜಾಗಗಳಲ್ಲಿ ಈಗಾಗಲೇ ೬೦ ಮಿಲಿಟರಿ ನೆಲೆಗಳನ್ನು ಸ್ಥಾಪಿಸಿಕೊಂಡಿದೆ. ಯಾವ ರಾಷ್ಟ್ರವೂ ಇದರ ರೆಡಾರ್ ಹದ್ದಿನ ಕಣ್ಣಿನಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಸೆಪ್ಟಂಬರ್ ೧೧ರ ಘಟನೆ ಕೂಡ ಬುಷ್ ತಂಡವೇ ಪ್ರಾಯೋಜಿಸಿತ್ತು ಎಂಬ ವದಂತಿ ಇದೆ. ಆದ್ದರಿಂದ ತನ್ನ ಹಿತಾಸಕ್ತಿಗೆ ಒಪ್ಪದ ಯಾವುದೇ ರಾಷ್ಟ್ರೀಯತೆ ಇರಲಿ ನಿರ್ದಾಕ್ಷಿಣ್ಯವಾಗಿ ಅದನ್ನು ಬಗ್ಗು ಬಡಿಯುವ ನಿಷ್ಕಾರುಣ್ಯವನ್ನು ಅದು ಬೆಳೆಸಿಕೊಂಡಿದೆ. ಉರುಳಿದ ಸದ್ದಾಮನ ಪ್ರತಿಮೆಯ ಮೂರ್ತಿಯ ಮೇಲಿಟ್ಟ ಅಮೆರಿಕ ಸೈನಿಕನ ಬೂಟುಕಾಲಿನ ಟಿವಿ ಚಿತ್ರವು ಕಂಡವರ ಎದೆಯನ್ನು ನಡುಗಿಸುತ್ತದೆ. ದುರ್ಯೋಧನನ ಊರು ಭಂಗ ಮಾಡಿ ಅದು ಸಾಲದು ಎಂಬಂತೆ ಅವನ ಕಿರೀಟಭಂಗ ಮಾಡಿದ ಭೀಮನ ಸೇಡು ನೆನಪಾಗುತ್ತದೆ. ಇನ್ನು ಯಾರಿಗೆ ತಾನೆ ಅಮೆರಿಕದ ವಿರುದ್ಧ ಸೊಲ್ಲೆತ್ತುವುದಕ್ಕೆ ಧೈರ್ಯವಾಗುತ್ತದೆ? ಕೈಲಾಗದವನು ಮೈಯೆಲ್ಲಾ ಪರಚಿಕೊಂಡ ಎಂಬಂತೆ ಭಯೋತ್ಪಾದಕರು ಮುನ್ನುಗ್ಗಿ ಸಾಯುವುದು ಮೂರ್ಖತನವೆನಿಸುತ್ತದೆ. ಯಾಕೆಂದರೆ ಅಮೆರಿಕದ್ದು ಈಗ ತೋಳ ಕುರಿಮರಿ ನ್ಯಾಯ ಇದ್ದಂತೆ. ಹಾಗೆಯೇ ಇರಾಕಿನಲ್ಲಿ ಸಮೂಹನಾಶಕ ಶಸ್ತಾಸ್ತ್ರಗಳಿವೆ ಎಂದು ಬುಷ್ ಪಟ್ಟು ಹಿಡಿದು ಆ ದೇಶವನ್ನು ನುಂಗಿ ಹಾಕಿದ್ದು. ಅಲ್ಲಿನ್ನೂ ಅಂಥ ಮಾರಕಾಸ್ತ್ರಗಳು ಸಿಕ್ಕಿಯೇ ಇಲ್ಲ. ಆದರೂ ಅಮೆರಿಕವನ್ನು ದಂಡಿಸುವ ದಣಿ ಯಾರೂ ಇಲ್ಲ. ರಷ್ಯಾ ಸ್ವಲ್ಪ ಕೊಸರಾಡಿ ಬಾಯಿಮುಚ್ಚಿಕೊಂಡಿತು. ಯಾಕೆಂದರೆ ಇರಾಕಿನಲ್ಲೂ ಅದರ ಸಾಕಷ್ಟು ತೈಲ ಕಂಪನಿಗಳು ಬೀಡು ಬಿಟ್ಟಿವೆ. ಹಾಗೆಯೇ ಚೈನ, ಇಟಲಿ, ಜರ್ಮನಿ, ಫ್ರಾನ್ಸ್ ಮುಂತಾದ ದೇಶಗಳ ತೈಲ ಕಂಪನಿಗಳೂ ಅಲ್ಲಿವೆ. ಆದ್ದರಿಂದ ಈಗೇನಾದರೂ ಅಮೆರಿಕದ ವಿರುದ್ಧ ಮಾತಾಡಿದರೆ ತಮ್ಮ ಕಂಪನಿಗಳಿಗೇ ನಷ್ಟ ಎಂಬುದು ಅವರಿಗೆ ಚೆನ್ನಾಗಿ ಗೊತ್ತಿದೆ.

ಹಾಗಾಗಿ ವಿಶ್ವಸಂಸ್ಥೆ ಎಂಬುದು ಈಗ ನಿರ್ವೀರ್ಯವಾಗಿದೆ. ಅದರ ಮಹಾ ಕಾರ್ಯದರ್ಶಿ ಕೋಫಿ ಅನ್ನಾನ್ ವೈಯಕ್ತಿಕವಾಗಿ ತನ್ನ ರಾಜೀನಾಮೆಯನ್ನಾದರೂ ಸಲ್ಲಿಸಬಹುದಿತ್ತು. ಆದರೆ ಅಂಥ ನೈತಿಕ ಧೈರ್ಯ ಆತನಿಗೆಲ್ಲಿಯದು ? ಇರಾಕಿನ ಪತನದ ನಂತರ ಇಡೀ ವಿಶ್ವ ಗಾಬರಿಗೊಂಡಿದೆ. ಅಮೆರಿಕದ ಹುಚ್ಚಾಟಕ್ಕೆ ಮುಂದಿನ ಬಲಿಪಶು ಯಾರೆಂದು ಕಾದು ನೋಡುವಂತಾಗಿದೆ. ಮೂಗುದಾರ ಇಲ್ಲದ ಮಾರಿಕೋಣನಂತೆ ಅಮೆರಿಕ ಬೀದಿ ಸುತ್ತುತ್ತಿದ್ದರೆ ಉಳಿದ ರಾಷ್ಟ್ರಗಳು ಸಾಮಂತರಂತೆ ವಿಧೇಯತೆಯನ್ನು ವ್ಯಕ್ತಪಡಿಸುತ್ತಿವೆ.

ಅಮೆರಿಕದ ಮತದಾರ ಎಚ್ಚೆತ್ತುಕೊಳ್ಳುವಷ್ಟರಲ್ಲಿ ಬುಷ್ ತಂಡ ಮಾಡುವುದನ್ನೆಲ್ಲ ಮಾಡಿ ನಿರ್ಗಮಿಸಿಬಿಟ್ಟಿರುತ್ತೆ. ಆದ್ದರಿಂದ ಅಲ್ಲಮನ ವಚನವನ್ನು ಈಗ ಮತ್ತೊಮ್ಮೆ ಪರಿಭಾವಿಸಿ ನೋಡುವುದು ಸೂಕ್ತ.


ಪ್ರೊ|| ಶಿವರಾಮಯ್ಯ
ನಂ. ೧೬೨, ಐಸೆಕ್ ರೋಡ್, ನಾಗರಬಾವಿ, ಬೆಂಗಳೂರು - ೫೬೦ ೦೭೨


# ಸಾಕುಪ್ರಾಣಿ ಲೋಕ

ಹೌದು
ನಿಮ್ಮ ಕಣ್ಣಲ್ಲಿ ನಾವು ಹುಳು.

ಹುಳು ನೀವೇನು ಮೇಸೋದು
ಮೇಯೋದು ಅವಕ್ಕೆ ಗೊತ್ತು.

'ಹುಳು ತನ್ನನ್ನೇ ಸುತ್ತಿ ಸುತ್ತಿ ಸಾವ'
ಮೊದಲು ನೇಯೋದು ಯಾಕೆ ?
ನೀವು ಬೇಸಿ ಬಟ್ಟೆ ಮಾಡಲೆಂದಲ್ಲ
ತಾನೇ ಚಿಟ್ಟೆ ಆಗೋಕೆ.

ರೆಕ್ಕೆ ಬಲಿಯುವ ಮುನ್ನ
ಮೊಟ್ಟೆಯೊಡೆಯುವ ಮುನ್ನ
ಕುಕ್ಕಿ ತಿನ್ನುವ
ಇದಿಯೋ ಕೋ ಬಲಿ ಜನ
ನಿಮ್ಮ ಬಟ್ಟೆಯ ಮೇಲೆ
ಚಿಟ್ಟೆಯ ಚಿತ್ರ ಚಿತ್ತಾರ ಆಹಾ ಎಂಥಾ ಸುಂದರಾ.

ತನ್ನಂದಕ್ಕೆ ಹಾರುವ ಆನೆಯ ರೆಕ್ಕೆ ಕಡಿದು
ನಿತ್ಯ ನಿಮ್ಮ ಸಿಂಗರಕ್ಕೇ ಬೇಸುವ
ನಿಮ್ಮದಲ್ಲದ ಬೆಲೆಗೆ ಬಲೆಗೆ ಬೀಳುವ
ನಮ್ಮ ಹುಟ್ಟು ಸಾವಿನ ನಡುವೆ ಯಾರಿಗಾಗಿ ?

ಕೋಳಿ ಸಾಕೋದೆ ಕುಯ್ಯೋಕೆ
ಕೋಣ ಮೆರೆಸೋದೆ ಕಡಿಯೋಕೆ
ನೆಲ ಇರೋದೆ ಉಳೋಕೆ
ಕಾಲು ಇರೋದೆ ತುಳೋಕೆ
ಸಾಕು ಸಾಕು ಪ್ರಾಣಿಯ ಬ್ರಹ್ಮರೇ
ನಿಮ್ಮ ಲೋಕ ನ್ಯಾಯಕ್ಕೆ ನಿಮಗೆ ನಮೋ ನಮಹ.

ಬೆಳೆಯಲು ಬಿಡಿ ನಮ್ಮ ನಮ್ಮಂತೆ
ಹಾರಲಿ ಕಣ್ಣುಳ್ಳ ರೆಕ್ಕೆಗಳು
ಧಿಕ್ಕಾರ ನಿಮ್ಮ ಬಿಸಿನೀರು ಕತ್ತರಿ ಮಗ್ಗಗಳಿಗೆ
ಅಜ್ಞಾತ ಖೆಡ್ಡಾಗಳಿಗೆ.


ರಾಮಲಿಂಗಪ್ಪ ಟಿ. ಬೇಗೂರು
ಸರ್ಕಾರಿ ಬಾಲಕರ ಕಾಲೇಜು, ಕೋಲಾರ - ೫೬೩೧೦೧

# ನೆನಪಾಗಿಹೋದ ಮೋಹಿತ್ ಸೇನ್

**ಮೇ** ೫ ಮಾರ್ಕ್ಸ್ ಹುಟ್ಟಿದ ದಿನ. ಈ ವರ್ಷ ಆ ದಿನ ಬರುವ ಮುನ್ನಾ ದಿನ ಹಿರಿಯ ಸಂಗಾತಿ ಮೋಹಿತ್ ಸೇನ್ ತಮ್ಮ ೭೪ನೆಯ ವಯಸ್ಸಿನಲ್ಲಿ ಗತಿಸಿದರು. ಮೇ ೮ಕ್ಕೆ ದೇವಿಪ್ರಸಾದ್ ಚಟ್ಟೋಪಾಧ್ಯಾಯ ಅವರು ನಮ್ಮನ್ನಗಲಿ ಒಂದು ದಶಕ ಕಳೆದುಹೋಗುತ್ತದೆಂದು ನೆನಪಿಸಿಕೊಳ್ಳುತ್ತಿರುವಾಗಲೇ ಮೋಹಿತ್ ಸೇನರ ನಿಧನದ ವಾರ್ತೆ ಬಂದಿದೆ. ಮೋಹಿತ್ ಮತ್ತು ದೇವಿಪ್ರಸಾದ್ ಬಹಳ ಆತ್ಮೀಯ ಸ್ನೇಹಿತರು, ಸೈದ್ಧಾಂತಿಕ ಚರ್ಚೆಗಳಲ್ಲಿ ನಿಷ್ಣಾತರು ಮತ್ತು ತಮ್ಮ ಅಚಲವಾದ ನಂಬಿಕೆಗಳಿಗೆ ತಕ್ಕಂತಹ ನೀತಿ-ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಿದವರು. ಅವರಿಬ್ಬರನ್ನೂ ಮೊದಲ ಬಾರಿಗೆ ಭೇಟಿಯಾಗುವ ಅವಕಾಶ ನನಗೆ ಲಭಿಸಿದ್ದು ಬೆಂಗಳೂರಿನ ವಿದ್ಯಾರ್ಥಿ-ಯುವಜನ ಸಭಾ ಮೂರು ದಿನಗಳ 'ಲೆನಿನ್ ಶಾಲೆ' ನಡೆಸಿದ ಸಂದರ್ಭದಲ್ಲಿ ಮತ್ತು ಮೈಸೂರು ವಿಶ್ವವಿದ್ಯಾನಿಲಯವು ಲೆನಿನ್ ಜನ್ಮ ಶತಮಾನೋತ್ಸವ ವಿಚಾರ ಸಂಕಿರಣವನ್ನೇರ್ಪಡಿಸಿದ ಸಂದರ್ಭದಲ್ಲಿ. ಅದಾದ ಮೇಲೆ ಅವರಿಬ್ಬರನ್ನೂ ಅದೆಷ್ಟೋ ಬಾರಿ ಒಟ್ಟಿಗೆ ಮತ್ತು ಪ್ರತ್ಯೇಕವಾಗಿ ಭೇಟಿಯಾಗಿ ಬಹಳ ಹತ್ತಿರದಿಂದ ಇಬ್ಬರನ್ನೂ ತಿಳಿಯುವ ಅವಕಾಶ ದೊರೆಯಿತು. ನಮ್ಮ ಪೀಳಿಗೆಯ ಅನೇಕರ ಅಧ್ಯಯನ ಮತ್ತು ಕ್ರಿಯಾಶೀಲತೆಗೆ ಇವರಿಬ್ಬರೂ ಪ್ರೇರಕ ಶಕ್ತಿಗಳಾಗಿ ಕೆಲಸ ಮಾಡಿದರೆಂದು ಹೇಳಿದರೆ ಅದು ಉತ್ಪ್ರೇಕ್ಷೆಯಾಗುವುದಿಲ್ಲ.

ಕೇಂಬ್ರಿಜ್‌ನಲ್ಲಿ ವಿದ್ಯಾರ್ಥಿಯಾಗಿದ್ದಾಗ ಒಂದೇ ಬಾರಿಗೆ ಅರ್ಥಶಾಸ್ತ್ರ ಮತ್ತು ಇಂಗ್ಲಿಷ್ ಸಾಹಿತ್ಯ ಎರಡರಲ್ಲೂ ಸ್ನಾತಕೋತ್ತರ ಪದವಿ ಪಡೆದ ಕೀರ್ತಿ ಮೋಹಿತ್ ಸೇನರದು. ಅಲ್ಲಿ ಖ್ಯಾತ ವಿಮರ್ಶಕ ಎಫ್. ಆರ್. ಲೀವೀಸ್‌ನಲ್ಲಿ ಶಿಷ್ಯವೃತ್ತಿ ನಡೆಸುತ್ತಿದ್ದಂತೆ ಆರ್.ಪಿ. ದತ್ ಮತ್ತು ಹ್ಯಾರಿ ಪಾಲಿಟ್ ಜೊತೆ ರಾಜಕೀಯ ಚರ್ಚೆಗಳಲ್ಲೂ ಇವರು ಭಾಗಿಗಳಾಗುತ್ತಿದ್ದರು. ದತ್ ಮತ್ತು ಪಾಲಿಟ್ ಬ್ರಿಟನ್ನಿನ ಕಮ್ಯುನಿಸ್ಟ್ ಪಕ್ಷದ ನೇತಾರರು. ಮೋಹಿತ್‌ರವರೊಡನೆ ಲೀವೀಸ್ ಬಳಿ ವ್ಯಾಸಂಗ ಮಾಡಿದ ಮೈಸೂರಿನ ಪ್ರೊ|| ಸಿ. ಡಿ. ನರಸಿಂಹಯ್ಯನವರು ಮೋಹಿತ್‌ರ ವಿದ್ವತ್ತನ್ನು ಶ್ಲಾಘಿಸಿರುವುದುಂಟು. ಅನೇಕ ಸಾಹಿತ್ಯಕ ಗೋಷ್ಠಿಗಳಲ್ಲಿ ಶೇಕ್ಸ್‌ಪಿಯರ್, ಎಲಿಯಟ್, ಯೇಟ್ಸ್, ಟಾಲ್‌ಸ್ಟಾಯ್, ಟಾಗೋರ್, ಮುಂತಾದ ಶ್ರೇಷ್ಠರ ಬಗ್ಗೆ ಮೋಹಿತ್ ಆಳವಾದ ವಿಶ್ಲೇಷಣೆ ನೀಡಿದ್ದುದು ಅವರ ರಾಜಕೀಯ ಮಿತ್ರರನೇಕರಿಗೆ ತಿಳಿದಿಲ್ಲ. ಬೆಂಗಳೂರಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದ ಟಿ. ಜಿ. ವೈದ್ಯನಾಥನ್ ಮೊದಲಿಗೆ ಹೈದರಾಬಾದಿನ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಇಂಗ್ಲಿಷ್‌ನಲ್ಲಿದ್ದರು. ಆಗ್ಗೆ ಡಾ|| ವಿ. ಕೆ. ಗೋಕಾಕ್ ಅದರ ನಿರ್ದೇಶಕರು. ಯಾವುದೋ ಗೋಷ್ಠಿಗೆ ವೈದ್ಯನಾಥನ್ ಮೋಹಿತ್‌ರನ್ನು ಕರೆತಂದಾಗ ಗೋಕಾಕರಿಗೆ ಸಿಟ್ಟು ಬಂದಿತಂತೆ. ಗೋಷ್ಠಿಯಲ್ಲಿ ಮೋಹಿತ್ ಸೇನ್ ''ಕಿಂಗ್ ಲಿಯರ್'' ಬಗ್ಗೆ ಉಪನ್ಯಾಸ ನೀಡಿದರು. ಅದನ್ನು ಕೇಳಿದ ನಂತರ ಗೋಕಾಕರು ಇವರ ಆಪ್ತರಾದರು. ಅಂಥ ಎಷ್ಟೋ ಸ್ವಾರಸ್ಯಕರ ಪ್ರಸಂಗಗಳು ಮೋಹಿತ್‌ರ ಜೀವನದಲ್ಲಿ ನಡೆದುಹೋದುವು. ಬಹುಶಃ ಪಿ. ಸಿ. ಜೋಶಿಯವರನ್ನು ಬಿಟ್ಟರೆ ಸಾಹಿತ್ಯ - ಸಂಸ್ಕೃತಿ ಕ್ಷೇತ್ರಗಳ ದಿಗ್ಗಜರ ನೇರ ಪರಿಚಯವನ್ನು ಹೊಂದಿದ್ದ ಕಮ್ಯುನಿಸ್ಟ್ ಕಾರ್ಯಕರ್ತರೆಂದರೆ ಮೋಹಿತ್‌ರೇ ಇರಬೇಕು. ಅಥವಾ ಇ. ಎಂ. ಎಸ್. ನಂತರ ಮೋಹಿತ್ ಬರುತ್ತಾರೇನೋ ತಿಳಿಯದು.

ಬೆಂಗಳೂರಿನ ಲೆನಿನ್ ಶಾಲೆಗೆ ಬಂದಿದ್ದ ಮೋಹಿತ್‌ರನ್ನು ನಾನು 'ಪ್ರೊಫೆಸರ್' ಎಂದು ಬೇಕೆಂದೇ



ಪರಿಚಯಿಸಿ ''ಇವರು ವಿಭಿನ್ನ ಮಾದರಿಯ ಪ್ರೊಫೆಸರ್. ಏಕೆಂದರೆ ಇವರು ಪ್ರೊಫೆಸ್ ಮಾಡುವುದನ್ನು ಪ್ರಾಕ್ಟೀಸ್ ಮಾಡುತ್ತಾರೆ'' ಎಂದು ಹೇಳಿದ್ದೆ. ಅದನ್ನವರು ಅನೇಕ ಬಾರಿ ಜ್ಞಾಪಿಸಿಕೊಳ್ಳುತ್ತಿದ್ದರು ಮತ್ತು ತಾವು ನಿಜಕ್ಕೂ ಹಾಗೆ ಮಾಡಿದ್ದರೆ ಅದೇ ಧನ್ಯತೆ ಎಂಬ ಮಾತನ್ನು ಹೇಳುತ್ತಿದ್ದರು. ವಿದ್ವದ್ಗೋಷ್ಠಿಗಳಲ್ಲಿ ಅವರ ಭಾಗವಹಿಸುವಿಕೆಯೆಂದರೆ ಅಸಾಧಾರಣವಾದ್ದು. ನಿರರ್ಗಳ ಮಾತು, ಹರಿತವಾದ ಹೊಡೆತಗಳು, ಬೇರೆಯವರ ಅಪಕ್ವ ಪ್ರತಿಪಾದನೆಗಳ ಬಗ್ಗೆ ಅಸಡ್ಡೆ ಪ್ರಕಟಿಸುವಂತಹ ಒಂದೋ ಎರಡೋ ವಾಕ್ಯಗಳು, ಮತ್ತು ಸೈದ್ಧಾಂತಿಕ ವಿಶ್ಲೇಷಣೆಯಲ್ಲಿ ಅಸಂದಿಗ್ಧತೆ, ಇವು ಅವರ ವಿಶಿಷ್ಟ ಲಕ್ಷಣಗಳು. ಮಾರ್ಕ್ಸ್ ನಿಧನದ ನೂರು ವರ್ಷಗಳ ನಂತರ ಅನೇಕ ಕಡೆಗಳಲ್ಲಿ ಚಿಂತನ ಗೋಷ್ಠಿಗಳೇರ್ಪಟ್ಟಿದ್ದುವು. ತಿರುಪತಿಯ ವೆಂಕಟೇಶ್ವರ ವಿಶ್ವವಿದ್ಯಾಲಯದಲ್ಲಿ ತತ್ತ್ವಶಾಸ್ತ್ರ ವಿಭಾಗವು ಮೂರು ದಿನಗಳ ಒಂದು ರಾಷ್ಟ್ರೀಯ ಅಧಿವೇಶನ ಏರ್ಪಡಿಸಿತ್ತು. ಹತ್ತಾರು ವಿಶ್ವವಿದ್ಯಾಲಯಗಳ ಪ್ರಾಧ್ಯಾಪಕರು, ರಾಜಕೀಯ ಕಾರ್ಯಕರ್ತರು, ಸಂಶೋಧನಾ ವಿದ್ಯಾರ್ಥಿಗಳು ಅದರಲ್ಲಿ ಭಾಗವಹಿಸಿದ್ದರು. ಅದು ಹೇಗೋ ಏನೋ, ನಾನು ಮತ್ತು ಮೋಹಿತ್ ಕೂಡ ಇದ್ದೆವು. ನನ್ನ ಉಪನ್ಯಾಸಕ್ಕೆ ಅವರು ಅಧ್ಯಕ್ಷರು ಮತ್ತು ಅವರ ಉಪನ್ಯಾಸಕ್ಕೆ ನಾನು ಅಧ್ಯಕ್ಷ. ನನಗೆ ಪರಿಚಿತರೇ ಅಲ್ಲವೇನೋ ಎಂಬಂತೆ ಅಧ್ಯಕ್ಷಸ್ಥಾನದಿಂದ ಮೋಹಿತ್ ಒಂದು ಪ್ರಶ್ನೆ ಕೇಳಿ ಧರ್ಮಶಾಸ್ತ್ರಗಳಿಂದ ಹಲವು ಅಂಶಗಳನ್ನು ಸಭೆಯ ಮುಂದಿಡಲು ಪ್ರಚೋದಿಸಿದ್ದುದು ಇಂದಿಗೂ ಜ್ಞಾಪಕಕ್ಕೆ ಬರುತ್ತದೆ. ಪುಣೆ ವಿಶ್ವವಿದ್ಯಾಲಯದ ಪ್ರಾಧ್ಯಾಪಕರೊಬ್ಬರು ತಮ್ಮ ಉಪನ್ಯಾಸದಲ್ಲಿ ನನಗೆ ತಿಳಿಯದಂತಹ ತಾಂತ್ರಿಕ ಕಲ್ಪನೆಗಳನ್ನು ಪದಗುಚ್ಛಗಳನ್ನು ತುಂಬಿ ಪ್ರಚಂಡ ಭಾಷಣ ಮಾಡಿದ್ದರು. ಅವರಿಗೆ ಎಲ್ಲಿಲ್ಲದ ಕರತಾಡನ. ಮೋಹಿತ್ ನನ್ನ ಪಕ್ಕದಲ್ಲೇ ಕುಳಿತಿದ್ದರು. 'ಏನವರು ಹೇಳಿದ್ದು?' ಎಂದೆ. 'ಐದು ನಿಮಿಷ ತಡೆ' ಎಂದರು. ಸ್ವಲ್ಪ ಹೊತ್ತು ಇತರರು ಬಂದು ಪುಣೆ ಪ್ರತಿಭೆಯನ್ನು ಕೊಂಡಾಡಿದರು. ಆಮೇಲೆ ಮೋಹಿತ್ ಇಪ್ಪತ್ತು ನಿಮಿಷಗಳ ಕಾಲ ಗುಡುಗು-ಸಿಡಿಲು ಯಾವುದೂ ಇಲ್ಲದೆ ಅತ್ಯಂತ ಸರಳವಾಗಿ, ಎಲ್ಲರಿಗೂ ತಿಳಿಯುವ ಭಾಷೆಯಲ್ಲಿ, ಅದು ಕೇವಲ 'ಅಕೆಡೆಮಿಕ್' ಎಂಬಂತೆ ಮಾತನಾಡಿದರು. ಇಡೀ ಸಭೆ ತದೇಕಚಿತ್ತದಿಂದ ಕೇಳಿತು. ಪುಣೆ ವಿದ್ವಾಂಸರ 'ಜಾರ್ಗನ್' ಮುಸುಕನ್ನು ಕಿತ್ತುಹಾಕಿ, ಅವರು ಮಾರ್ಕ್ಸ್‌ವಾದದ ಅವಹೇಳನವನ್ನು 'ಪಾಂಡಿತ್ಯಪೂರ್ಣವಾಗಿ' ಮಾಡಲೆಳಸಿದ್ದುದನ್ನು ಮೋಹಿತ್ ಎಲ್ಲರ ಮುಂದೆ ಬಿಚ್ಚಿಟ್ಟು, ನಂತರ ವಿಮರ್ಶೆ ಮಾಡಿ, ಪುಣೆ ಪ್ರತಿಭೆಗೆ ನೀರು ಕುಡಿಸಿದರು. ''ನಿಮ್ಮ ಬಾಲಿಶತನವನ್ನು ಮುಚ್ಚಿಡಲು ಪಾಂಡಿತ್ಯ ಪ್ರದರ್ಶನವನ್ನು ಇಷ್ಟು ಹೊಣೆಗೇಡಿತನದಿಂದ ಮಾಡಬಲ್ಲಿರೆಂಬುದನ್ನು ಮೆಚ್ಚಿಕೊಳ್ಳುತ್ತೇನೆ'' ಎನ್ನುತ್ತಾ ತಮ್ಮ ಮಾತು ಮುಗಿಸಿದಾಗ ಅಲ್ಲಿ ನೆರೆದಿದ್ದ ವಿದ್ವಾಂಸರು ಮೋಹಿತ್‌ರ ಮಾತಿನಿಂದ ಅವಾಕ್ಕಾಗಿದ್ದರು. ಆಗ್ಗೆ ಅವರ ಪತ್ನಿ ಡಾ|| ವನಜಾ ಅಯ್ಯಂಗಾರ್ ತಿರುಪತಿ ಮಹಿಳಾ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದರು. ಆಕೆ ಗಣಿತಜ್ಞೆ, ಕೇಂಬ್ರಿಜ್‌ನಲ್ಲಿ ಮೋಹಿತ್ ಸಹಪಾಠಿ. ಅವರ ಅಧಿಕೃತ ನಿವಾಸಕ್ಕೆ ಮೋಹಿತ್ ಮತ್ತು ನಾನು ತೆರಳಿದೆವು. ''ಗೋಷ್ಠಿಯಲ್ಲಿ ವಿದ್ವಾಂಸರೊಬ್ಬರನ್ನು ನಿಮ್ಮ ಗಂಡ ಚಿಂದಿ ಮಾಡಿಹಾಕಿದರು'' ಎಂದು ಹೇಳಿದಾಗ ವನಜಾ ಹೇಳಿದರು, ''ಪಾಪ, ಇವರು ಹಾಗೆ ಮಾಡುತ್ತಾರೆಂದು ತಿಳಿದಿದ್ದರೆ ಮುನ್ನೆಚ್ಚರಿಕೆ ವಹಿಸುತ್ತಿದ್ದರೇನೋ'' ಎಂದು. ಪುಣೆ ವಿದ್ವಾಂಸರ ತಾಂತ್ರಿಕ ಪರಿಭಾಷೆಯ ಬಗ್ಗೆ ನಮ್ಮಿಬ್ಬರಿಗೂ ಮೋಹಿತ್ ಸೇನರು ಒಂದು ತರಗತಿ ನಡೆಸಿ ಹೇಳಿದರು : ''ಇದನ್ನೆಲ್ಲಾ ನೀವು ಅಭ್ಯಾಸ ಮಾಡಬೇಕು. ಇಲ್ಲದಿದ್ದರೆ ಅವರು ಏನೋ ಗಹನವಾದ್ದು ಹೇಳುತ್ತಿದ್ದಾರೆಂದು ಮೋಸ ಹೋಗುತ್ತೀರಿ. ಆ ಪರಿಭಾಷೆ ತಿಳಿದರೆ ಅವರ ಮಂಕುತನವನ್ನು ಎತ್ತಿ ತೋರಿಸುವುದು ಸುಲಭ.''

ಕಮ್ಯುನಿಸ್ಟ್ ಪಕ್ಷದ ಅಂದಿನ ಅಧ್ಯಕ್ಷ ಎಸ್. ಎ. ಡಾಂಗೆಯವರು ಬಾಣಿ ದೇಶಪಾಂಡೆ ಬರೆದಿದ್ದ ಒಂದು ಕೆಟ್ಟ ಪುಸ್ತಕಕ್ಕೆ ಮುನ್ನುಡಿ ಬರೆದು ಪಕ್ಷದಲ್ಲಿ ಕೋಲಾಹಲ ಎಬ್ಬಿಸಿದ್ದರು. 'ಹಿಮಾಲಯದ ಗುಹೆಗಳಲ್ಲಿ ಮೂಗು

**ಜಿ. ರಾಮಕೃಷ್ಣ**

ಹಿಡಿದು ತಪಸ್ಸು ಮಾಡಿದ ನಮ್ಮ ಪ್ರಾಚೀನರು ಮಾರ್ಕ್ಸ್ ತಿಳಿಯಲಾಗದಿದ್ದುದನ್ನು ಸಹ ತಮ್ಮ ಅಂತರ್ಜ್ಞಾನದಿಂದ ತಿಳಿದಿದ್ದರು' ಎಂಬ ಘನವಾದ ಒಂದು ವಾಕ್ಯವು ಆ ಮುನ್ನುಡಿಯಲ್ಲಿತ್ತು. ಅದೇನೂ ಪ್ರಮಾದವಲ್ಲ ಎನ್ನೋಣ ಬೇಕಾದರೆ; ಆದರೆ ಅಸಂಗತವಾದ ನೂರಾರು ಮಾತುಗಳನ್ನು ಭಾವುಕತೆಯಿಂದ ಬರೆದಿದ್ದ ಡಾಂಗೆ ತಾವು ಹೇಳಿದ್ದೇ ಅಂತಿಮ ಸತ್ಯವೆಂದು ವಾದಿಸತೊಡಗಿದ್ದರು. ಆ ಮುನ್ನುಡಿಯನ್ನು ಟೀಕಿಸಿ ದೇವಿಪ್ರಸಾದ್ ಒಂದು ದೀರ್ಘ ಲೇಖನ ಬರೆದರು. ನಮ್ಮ ಹಿರಿಯ ಸಂಗಾತಿ ಎಸ್. ಆರ್. ಭಟ್ ಮತ್ತು ನಾನು ಸಹ ಪ್ರತ್ಯೇಕವಾಗಿ ವಿಮರ್ಶಾ ಲೇಖನಗಳನ್ನು ಬರೆದಿದ್ದೆವು. ಇಡೀ ಪ್ರಸಂಗವು ಚರ್ಚೆಗೆ ಬಂದಾಗ ಒಂದು ಸಭೆಯಲ್ಲಿ ಮೊದಲು ಡಾಂಗೆಯವರ ಪ್ರತಿಪಾದನೆ ಆಯಿತು. ಅವರ ಶೈಲಿ ಮತ್ತು ವಾಕ್ಚಟುತ್ವ ಪ್ರಸಿದ್ಧವಾಗಿತ್ತು. ದೇವಿಪ್ರಸಾದ್ ಶೈಲಿ ಅದಕ್ಕೆ ಸರಿಸಾಟಿಯಾಗಲು ಸಾಧ್ಯವಿರಲಿಲ್ಲ. ಆದ್ದರಿಂದ ಪ್ರೊ|| ಹಿರೇನ್ ಮುಖರ್ಜಿಯವರು ಒಂದು ಸೂಚನೆ ತಂದರು : ''ಡಾಂಗೆ ಮಾತನಾಡಿದ ನಂತರ ಮೊದಲು ಮಾತನಾಡಲು ಸಮರ್ಥರೆಂದರೆ ಮೋಹಿತ್ ಸೇನ್ ಒಬ್ಬರೇ'' ಎಂದು. ಪುಣೆ ಪಂಡಿತನಿಗೆ ಆಗಿದ್ದ ಮಂಗಳಾರತಿ ಮುಂಬಯಿ ಸಿದ್ಧಾಂತಿಗೂ ಆಯಿತು, ಅದು ಬೇರೆಯೇ ಮಾತು.

ನೂರುಲ್ ಹಸನ್, ಬಿಪಿನ್ ಚಂದ್ರ, ಆರ್. ಎಸ್. ಶರ್ಮಾ, ರೋಮಿಲಾ ಥಾಪರ್, ಇರ್ಫಾನ್ ಹಬೀಬ್, ದಾಮೋದರನ್ ಮೊದಲಾದ ಹಲವಾರು ಇತಿಹಾಸ ತಜ್ಞರೊಂದಿಗೆ ಬೆರೆತು ಚರ್ಚೆಗಳಲ್ಲಿ ಪಾಲ್ಗೊಳ್ಳುತ್ತಿದ್ದ ಮೋಹಿತ್ ಸೇನ್ ಒಬ್ಬ ರಾಜಕೀಯ ಕಾರ್ಯಕರ್ತನೋ ಅಥವಾ ಒಬ್ಬ ಪ್ರಜ್ಞಾವಂತ ಸಂಶೋಧಕ - ಪ್ರಾಧ್ಯಾಪಕನೋ ಎಂದು ಹಲವರು ಹುಬ್ಬೇರಿಸುತ್ತಿದ್ದರೆಂಬ ಮಾತು ಆಗಾಗ್ಗೆ ಕೇಳಿಬರುತ್ತಿತ್ತು. ''ಭಾರತ ಕಮ್ಯುನಿಸ್ಟ್ ಪಕ್ಷದ ಸೈದ್ಧಾಂತಿಕ ಗೊಂದಲಗಳಿಗೆ ಮೋಹಿತ್ ಸೇನರ ಕಾಣಿಕೆ ಗಮನಾರ್ಹವಾದ್ದು'' ಎಂದು ಇ. ಎಂ. ಎಸ್. ಅವರು ಆಗಾಗ್ಗೆ ಛೇಡಿಸಿ ಬರೆಯುತ್ತಿದ್ದುದೂ ಉಂಟು. ಆದರೆ ಸ್ವತಃ ನಿಗರ್ವಿಯಾಗಿದ್ದ ಮೋಹಿತ್ ತಮ್ಮ ನಂಬಿಕೆಗೆ ಮತ್ತು ವಿಶ್ಲೇಷಣೆಗೆ ಬದ್ಧರಾಗಿ ಉಳಿದರೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ತಮ್ಮದೇ ಪಕ್ಷವನ್ನು ರಚಿಸಿ ರಾಜಕೀಯಕ್ಕೆ ತಿರುವು ಕೊಡಬಹುದೆಂಬ ಅವರ ಭ್ರಮೆ ಅವರಿಗೆ ಬಹುಬೇಗನೆ ಮನದಟ್ಟಾಯಿತು. ನಂತರ ಬಹುಮಟ್ಟಿಗೆ ಬೌದ್ಧಿಕ ಕ್ರಿಯಾವಂತಿಕೆಯೊಂದೇ ಅವರ ಪಾಲಿಗೆ ಉಳಿದದ್ದು. ಅವರು ಬರೆದ ಪುಸ್ತಕಗಳು ಹೆಚ್ಚೇನಿಲ್ಲ, ಲೇಖನಗಳು ಮಾತ್ರ ನೂರಾರು. ಇತ್ತೀಚೆಗಷ್ಟೇ ಅವರ ಆತ್ಮಕತೆ ಪ್ರಕಟವಾಯಿತು. ಕಮ್ಯುನಿಸ್ಟ್ ಪಕ್ಷದ ಅಧಿಕೃತ ವಕ್ತಾರರಾಗಿ, ಕೇಂದ್ರಸಮಿತಿಯ ಸದಸ್ಯರಾಗಿ, ಗುಜರಾತ್ ರಾಜ್ಯದಲ್ಲಿ ಪಕ್ಷದ ಅಧೀಕ್ಷಕರಾಗಿ, ಅಂತರರಾಷ್ಟ್ರೀಯ ವಿಭಾಗದ ಪ್ರಮುಖ ಸದಸ್ಯರಾಗಿ, ಪ್ರಕಟಣಾ ವಿಭಾಗದ ಸಲಹೆಗಾರರಾಗಿ, ಹೀಗೆ ಹಲವು ಜವಾಬ್ದಾರಿಗಳನ್ನು ಹೊತ್ತಿದ್ದ ಮೋಹಿತ್ ಸೇನರು ಸದಾ ನಗುಮುಖದ ವ್ಯಕ್ತಿ, ಸ್ನೇಹಪರ ಸಂಭಾವಿತ, ಅಹಂಕಾರವಿಲ್ಲದ ವಿದ್ವಾಂಸ.

೧೯೭೨ರಲ್ಲಿರಬೇಕು, ಹೈದರಾಬಾದಿನಲ್ಲಿ ''ಮಾರ್ಕ್ಸ್‌ವಾದಿ ಅಧ್ಯಯನ ಕೂಟ'' ಎಂಬ ಚಿಕ್ಕ ಸಂಸ್ಥೆಯನ್ನು ಮೋಹಿತ್‌ರ ನೇತೃತ್ವದಲ್ಲಿ ಸ್ಥಾಪಿಸಲಾಗಿತ್ತು. ಅದರ ಉದ್ಘಾಟನೆಗೆ ನನ್ನನ್ನೂ ಬರಮಾಡಿಕೊಂಡಿದ್ದರು. ಮಾರನೆಯ ದಿನವಿಡೀ ಗೋಷ್ಠಿಗಳನ್ನೇರ್ಪಡಿಸಿದ್ದರು. ಮುಕ್ತಾಯದ ಗೋಷ್ಠಿಯಲ್ಲಿ ಮಾತನಾಡಿದ್ದ ಮೋಹಿತ್ ಸೇನರ ಮಾತುಗಳ ಸಾರಾಂಶ ನನ್ನ ಸ್ಮೃತಿಪಟಲದಲ್ಲಿ ಉಳಿದಿದೆ. ಅದೇನೂ ಅದ್ಭುತ ವ್ಯಾಖ್ಯಾನವೆನಿಸುವುದಿಲ್ಲ. ಆದರೆ ಅವರು ಅದನ್ನು ವಿಶದೀಕರಿಸಿದ ವೈಖರಿ ಅನನ್ಯವಾದ್ದು. ಅವರ ಮಾತು ಮನನಯೋಗ್ಯವಾಗಿದೆ: ನಮ್ಮ ದೇಶದಲ್ಲಿ ಮತೀಯ ಶಕ್ತಿಗಳನ್ನು ಸೋಲಿಸುವ ತನಕ ನೈಜ ಪ್ರಜಾಪ್ರಭುತ್ವದ ರಚನೆ ಸಾಧ್ಯವಾಗುವುದಿಲ್ಲ. ಈ ಶಕ್ತಿಗಳಿಗೂ ಬಂಡವಾಳ ಶಾಹಿಗೂ ಪರಸ್ಪರ ನೆಂಟಸ್ತನವಿದೆ. ಅಂತಹ ಬಾಂಧವ್ಯದಿಂದ ಉಂಟಾಗುವ ಕರಾಳ ಸಾಧ್ಯತೆಗಳನ್ನು ಇತಿಹಾಸದಿಂದ ತಿಳಿದುಕೊಳ್ಳಬೇಕು. ನಮ್ಮ ಆರ್ಥಿಕ ಅಭಿವೃದ್ಧಿಗೆ ಹಾಗೂ ಪ್ರಜಾಪ್ರಭುತ್ವದ ವ್ಯವಸ್ಥೆಗೆ ಒಮ್ಮೆಲೇ ಅಡಚಣೆ ಬರುವುದು ಮತೀಯ ಮತ್ತು ಬಂಡವಾಳಿಗ ಶಕ್ತಿಗಳ ಮಿಲನದಿಂದ. ಮಾರ್ಕ್ಸ್‌ವಾದದ ನೆಲೆಯಲ್ಲಿ ಅಲ್ಲದೆ ಇದಕ್ಕೆ ಪ್ರತಿರೋಧ ಸಮಗ್ರವಾಗಿ ಇನ್ನೆಲ್ಲಿಂದಲೂ ಬರಲು ಸಾಧ್ಯವಿಲ್ಲ.

ತೋಗಡಿಯಾ ಸಂತತಿಗೆ ಇದು ತಿಳಿದಿದೆ. ಎಂದೇ ಅವರ ಆರ್ಭಟದಲ್ಲಿ ಮಾರ್ಕ್ಸ್‌ವಾದಿಗಳಿಗೆ ಆದ್ಯತೆಯ ಸ್ಥಾನ. ಅವರು ತಯಾರಿಸಿರುವ ''ದೇಶದ್ರೋಹಿಗಳ'' ಪಟ್ಟಿಯಲ್ಲಿ ಕಮ್ಯುನಿಸ್ಟರ ಸೇರ್ಪಡೆಯಾಗಿರುವುದು ಅಸ್ವಾಭಾವಿಕವೇನಲ್ಲ. ಆದರೆ ೧೯೭೨ರಲ್ಲಿ ಅದನ್ನು ಮೋಹಿತ್ ಸೇನರು ಸ್ಪಷ್ಟಪಡಿಸಿದಾಗ ಅವರನ್ನು ಲೇವಡಿ ಮಾಡಿದವರಿದ್ದಾರೆ, ''ಸಂಪೂರ್ಣ ಕ್ರಾಂತಿ'' ಇನ್ನೇನು ನಡೆದೇಹೋಯಿತೆಂದು ಮೂರ್ಖತನದ ಸಂಭ್ರಮದಿಂದ ಮರಿ ಗೋಳ್ವಾಲ್ಕರ್‌ಗಳೊಂದಿಗೆ ಲಾಠಿ ಹಿಡಿದು ಓಡಾಡಿದ ಕಮ್ಯುನಿಸ್ಟರೂ ಇದ್ದಾರೆ. ಈಗಿನ ಅನುಭವ ಅವರಲ್ಲನೇಕರಲ್ಲಿ ಮಾರ್ಪಾಟು ತಂದಿದೆ, ಆಘಾತ ಉಂಟುಮಾಡಿದೆ, ಹೊಸ ಪ್ರಕ್ರಿಯೆಗಳಿಗೆ ಪ್ರೇರಣೆ ನೀಡಿದೆ. ಮೋಹಿತ್ ಸೇನ್ ಇಂದು ನಮ್ಮೊಡನೆ ಇಲ್ಲ. ಆದರೆ ಅವರ ಎಚ್ಚರಿಕೆಯ ನುಡಿ, ಸೈದ್ಧಾಂತಿಕ ಶಿಸ್ತು ಮತ್ತು ಹೋರಾಟದ ನಮ್ರತೆ ನಮಗೆ ಮಾರ್ಗದರ್ಶಿ ಸೂತ್ರಗಳಾಗಬೇಕು. ಮೂವತ್ತು ವರ್ಷಗಳ ಕಾಲ ಅವರ ಸ್ನೇಹದ ಸೌಖ್ಯವನ್ನುಂಡ ನನ್ನಂತಹವರಿಗೆ ಮೋಹಿತ್ ಸೇನ್ ಒಬ್ಬ ಮಾದರಿ ವ್ಯಕ್ತಿಯಾಗಿ ಕಾಣುತ್ತಾರೆ. ಅವರ ಬೌದ್ಧಿಕ ಸಂಪತ್ತು ನಮ್ಮನ್ನು ಅವರತ್ತ ಸೆಳೆಯಿತು. ಆದರೆ ಅವರೇ ಹೇಳಿಕೊಟ್ಟ ಮಾರ್ಕ್ಸ್‌ವಾದಿ ಪ್ರಮೇಯಗಳು ಅವರ ಇಳಿವಯಸ್ಸಿನ ರಾಜಕೀಯ ತೀರ್ಮಾನಗಳು ಪೇಲವವಾದುವೆಂಬುದನ್ನು ತಿಳಿಸಿಕೊಟ್ಟವು. ಅವರಿಗೆ ಗೌರವ ಸಲ್ಲಿಸುತ್ತಾ ಒಂದು ಕಡೆಯ ಪ್ರಸಂಗವನ್ನು ನೆನೆಯುತ್ತೇನೆ. ಗೋರ್ಬಚೇವ್ ಖ್ಯಾತಿಗೆ ಬಂದಿದ್ದ ಕಾಲ. ಅವನ ಗ್ಲಾಸ್‌ನೋಸ್ತನ್ನು ಪ್ರಶಂಸಿಸುತ್ತಿದ್ದವರಲ್ಲಿ ಮೋಹಿತ್ ಸಹ ಒಬ್ಬರು. ಸೋವಿಯತ್ ಒಕ್ಕೂಟದ ವಿದೇಶಾಂಗ ಸಚಿವನಾಗಿ ಗ್ರೋಮಿಕೋ ಯಶಸ್ಸು ಗಳಿಸಲಿಲ್ಲ, ತನ್ನ ದೇಶದ ಹಾದಿಯನ್ನು ತಪ್ಪಿಸಿದ, ಎಂದೆಲ್ಲ ಅಪಸ್ವರದ ಮಾತುಗಳನ್ನು ಮೋಹಿತ್ ಸೇನ್ ಆಡುತ್ತಿದ್ದರು. ಯಾವುದೋ ಕೆಲಸಕ್ಕೆ ಬೆಂಗಳೂರಿಗೆ ಬಂದಿದ್ದ ಮೋಹಿತ್‌ರನ್ನು ನಮ್ಮ ಅಧ್ಯಯನ ಕೂಟದ ಆಶ್ರಯದಲ್ಲಿ ಲಾ ಕಾಲೇಜಿನಲ್ಲಿ ಒಂದು ಉಪನ್ಯಾಸ ಕೊಡಲು ಕೇಳಿಕೊಂಡೆ. ಸಭೆಯಲ್ಲಿ ಪ್ರೊ|| ಕುಟ್ಟಿನೋ ಸಹ ಉಪಸ್ಥಿತರಿದ್ದರು. ಮೋಹಿತ್‌ರ ಉಪನ್ಯಾಸದ ನಂತರ ಒಂದು ಪ್ರಶ್ನೆ ಕೇಳಿದೆ : ''ಇದೇನು, ನಿಮ್ಮದು ವೈದಿಕ ಸಂಪ್ರದಾಯದಂತೆ ಕಾಣುತ್ತದಲ್ಲಾ ! ಅಲ್ಲಿ ಯಾವ ದೇವತೆಯನ್ನು ಸ್ತುತಿಸುವಾಗಲೂ ಅವನೇ ಸರಿ, ಅವನೇ ದೊಡ್ಡವ, ಅವನೇ ಮಹಾದಾನಿ ಎಂದೆಲ್ಲ ಕೊಂಡಾಡುತ್ತಾರೆ. ಕಮ್ಯುನಿಸ್ಟರೂ ಹಾಗೆ ಮಾಡಬೇಕೆಂಬ ನಿಯಮವೇನಾದರೂ ಉಂಟೆ ? ಸ್ಟಾಲಿನ್ ಇದ್ದಾಗ ಅವನೇ ಸರಿ, ಕ್ರುಶ್ಚೇವ್ ಬಂದಾಗ ಅವನ ಮಾತೇ ಮುದ್ದು. ಗೋರ್ಬಚೇವ್ ಬಂದಾಗ ಅವನೇ ಎಲ್ಲದಕ್ಕೂ ಮದ್ದು. ಅಂದು ಗ್ರೋಮಿಕೋ ನಮಗೆ ಬೇಕಾಗಿದ್ದ, ವಿಶ್ವಸಂಸ್ಥೆಯಲ್ಲಿ ಆತನೇ ನಮಗೆ ಕಟ್ಟಾ ಬೆಂಬಲಿಗ. ಈಗ ಅವನು ಹಾದಿ ತಪ್ಪಿಸಿದವ ಎನ್ನುತ್ತೀರಿ. ಮಾರ್ಕ್ಸ್‌ವಾದವು ಅಂದೇ ಏಕೆ ಇದನ್ನು ತಿಳಿದುಕೊಳ್ಳಲು ನಮಗೆ ಸಹಾಯ ಮಾಡಲಿಲ್ಲ?''

- ಮೋಹಿತ್ ಸೇನರು ಸಭೆಯಲ್ಲಿ ಉತ್ತರವನ್ನೇನೂ ಕೊಡಲಿಲ್ಲ. ತಮಾಷೆಯಾಗಿ, ನಿನ್ನ ವೇದ ನನಗೆ ತಿಳಿಯದು; ಅದು ನಿನ್ನ ಮತ್ತು ದೇವಿಪ್ರಸಾದರ ಸಾಮ್ರಾಜ್ಯ, ಎಂದುಬಿಟ್ಟರು. ಆಮೇಲೆ ನಾವಿಬ್ಬರೇ ಇದ್ದಾಗಲೂ ಬಹಳ ಕಾಲ ಮೌನಿಗಳಾಗಿದ್ದರು. ನಂತರ ಲೋಕಾಭಿರಾಮವಾಗಿ ಮತ್ತೆ ದೇವಿಪ್ರಸಾದ್ ಬಗ್ಗೆ ಮಾತನಾಡಲಾರಂಭಿಸಿಬಿಟ್ಟದ್ದರು.

■

## ನೆತ್ತರದಾರಿ

ಅಯೋಧ್ಯೆಯ ಬಾಬರಿ
ಇಲ್ಲಿನ ಬಾಬಾಬುಡನ್‌ಗಿರಿ
ಒಂದು ಮಾಡಲು
ಕರೆ ನೀಡಿದ ಕೋಮು ಕೇಸರಿ
ತೋರಿಸಬೇಡ ನೆತ್ತರ ದಾರಿ

ರಕ್ತದ ಬಣ್ಣ
ಸಮಾನತೆಯ ಸಂಕೇತ
ಸುಖವಾಗಿರಲಿ ಸರ್ವಜನ
ಮಂತ್ರ ಪಠಿಸುವ ನಿನ್ನ ವಂಶದ ಕುಡಿ
ಬಿಡದಿರಲಿ ಗರ್ಭಗುಡಿ

ಸಾಯಲು ಕಂಡವರ
ಮಕ್ಕಳಿದ್ದಾರೆ ಬಿಡು
ಆಳ ನೋಡುವುದಷ್ಟೇ ನಿನ್ನ ಕೆಲಸ
ಗೆದ್ದಲು ಹುತ್ತಕಟ್ಟಿದರೆ
ಅಧಿಕಾರದೊಂದಿಗೆ ನಿನ್ನ ಹಾವಿನ ಸರಸ

■ *ಡಾ|| ರಂಗಾರೆಡ್ಡಿ ಕೋಡಿರಾಂಪುರ*

# ಶೋಷಿತರ ಮೂಕ ವೇದನೆಗೆ ದನಿ ನೀಡಿದ ಮಹಾನ್ ಚೇತನ ಭಾರತರತ್ನ ಡಾ॥ ಬಿ. ಆರ್. ಅಂಬೇಡ್ಕರ್

*ಮುಖ್ಯಮಂತ್ರಿ ಶ್ರೀ ಎಸ್. ಎಂ. ಕೃಷ್ಣ ನೇತೃತ್ವದ ಕರ್ನಾಟಕ ಸರ್ಕಾರ ಡಾ॥ ಅಂಬೇಡ್ಕರ್ ಅವರ ಆಶಯಗಳಿಗೆ ಪೂರಕವಾಗಿ ಶೋಷಿತರ ಸರ್ವಾಂಗೀಣ ಅಭಿವೃದ್ಧಿಗೆ ಹಲವಾರು ಯೋಜನೆಗಳನ್ನು ಹಮ್ಮಿಕೊಂಡು ಅನುಷ್ಠಾನಗೊಳಿಸುತ್ತಿದೆ.*

- ಪರಿಶಿಷ್ಟ ಜಾತಿವರ್ಗದವರಿಗೆ ಮೀಸಲಿರಿಸಿದ 16800 ಬ್ಯಾಕ್‌ಲಾಗ್ ಹುದ್ದೆಗಳನ್ನು ಗುರ್ತಿಸಿ ಭರ್ತಿ ಮಾಡಲು ಕ್ರಮ.
- ನೇರ ಸಂವಾದ ಕಾರ್ಯಕ್ರಮದಡಿ ದೌರ್ಜನ್ಯಕ್ಕೊಳಗಾಗಿ ನೊಂದ ಪರಿಶಿಷ್ಟ ಜಾತಿ - ವರ್ಗದ ಸಂತ್ರಸ್ಥರಿಗೆ ಸುಮಾರು ಮೂರು ಕೋಟಿ ರೂ. ಗಳ ಪರಿಹಾರ ಧನ.

**ಶಿಕ್ಷಣ**

- ಪರಿಶಿಷ್ಟ ಜಾತಿಯ 25 ಲಕ್ಷ ವಿದ್ಯಾರ್ಥಿಗಳಿಗೆ ರೂ. 47 ಕೋಟಿಗಳ ಹಾಗೂ ಪರಿಶಿಷ್ಟ ವರ್ಗದ 5.50 ಲಕ್ಷ ವಿದ್ಯಾರ್ಥಿಗಳಿಗೆ ರೂ. 10.50 ಕೋಟಿಗಳ ವಿವಿಧ ರೀತಿಯ ವಿದ್ಯಾರ್ಥಿ ವೇತನಗಳ ಮಂಜೂರು.
- ಉನ್ನತ ವ್ಯಾಸಂಗಕ್ಕಾಗಿ ವಿದೇಶಿ ವಿದ್ಯಾನಿಲಯಗಳಲ್ಲಿ ಆಯ್ಕೆಯಾಗಿರುವ ಪರಿಶಿಷ್ಟ ಜಾತಿಯ 19 ವಿದ್ಯಾರ್ಥಿಗಳಿಗೆ ರೂ. 1.28 ಕೋಟಿಗಳ ಧನ ಸಹಾಯ ಮತ್ತು ಉನ್ನತ ವ್ಯಾಸಂಗಕ್ಕಾಗಿ ಈ ಬಾರಿ ಪರಿಶಿಷ್ಟ ವರ್ಗದ 5 ಅಭ್ಯರ್ಥಿಗಳ ಆಯ್ಕೆ.

**ವಸತಿ**

- ರೂ. 20 ಕೋಟಿಗಳ ವೆಚ್ಚದಲ್ಲಿ ಪರಿಶಿಷ್ಟ ಜಾತಿಯ 10000 ಜನರಿಗೆ ಹಾಗೂ ತಲಾ ರೂ. 10 ಕೋಟಿಗಳ ವೆಚ್ಚದಲ್ಲಿ 5000 ದೇವದಾಸಿ ಮಹಿಳೆಯರಿಗೆ ಹಾಗೂ ಪರಿಶಿಷ್ಟ ವರ್ಗದ 5000 ಜನರಿಗೆ ಅಂಬೇಡ್ಕರ್ ಮನೆಗಳ ನಿರ್ಮಾಣ.
- ರೂ. 65 ಕೋಟಿಗಳ ವೆಚ್ಚದಲ್ಲಿ ಪರಿಶಿಷ್ಟ ಜಾತಿಯ 65000 ಜನರಿಗೆ ರೂ. 15 ಕೋಟಿಗಳ ವೆಚ್ಚದಲ್ಲಿ ಪರಿಶಿಷ್ಟ ವರ್ಗದ 15000 ಜನರಿಗೆ ಆಶ್ರಯ ಮನೆಗಳ ನಿರ್ಮಾಣ.

**ವಿಶೇಷ ಘಟಕ ಯೋಜನೆ : ಗಿರಿಜನ ಯೋಜನೆ**

- ಪರಿಶಿಷ್ಟ ಜಾತಿಯ 1,75,000 ಫಲಾನುಭವಿಗಳಿಗೆ ವಿಶೇಷ ಘಟಕ ಯೋಜನೆಯಡಿ ಮತ್ತು ಪರಿಶಿಷ್ಟ ವರ್ಗದ 29,000 ಫಲಾನುಭವಿಗಳಿಗೆ ಗಿರಿಜನ ಉಪಯೋಜನೆಯಡಿ ವಿವಿಧ ಸೌಲಭ್ಯ.

**ಕರ್ನಾಟಕ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ**

- ಪರಿಶಿಷ್ಟ ಜಾತಿಯ 14697 ಹಾಗೂ ಪರಿಶಿಷ್ಟ ವರ್ಗದ 2062 ಜನರಿಗೆ ಸಾಲ ಸೌಲಭ್ಯ.

**ಭೂ ಒಡೆತನ ಯೋಜನೆ :**

- ರೂ. 4.60 ಕೋಟಿಗಳ ವೆಚ್ಚದಲ್ಲಿ ಪರಿಶಿಷ್ಟ ಜಾತಿಯ 733 ಫಲಾನುಭವಿಗಳಿಗೆ 1250 ಎಕರೆ ಜಮೀನು ವಿತರಣೆ.
- ರೂ. 1 ಕೋಟಿ ವೆಚ್ಚದಲ್ಲಿ ಪರಿಶಿಷ್ಟ ವರ್ಗದ 190 ಫಲಾನುಭವಿಗಳಿಗೆ 244 ಎಕರೆ ಜಮೀನು ವಿತರಣೆ.

**ಗಂಗಾ ಕಲ್ಯಾಣ :**

- ರೂ. 5 ಕೋಟಿಗಳ ವೆಚ್ಚದಲ್ಲಿ ಪರಿಶಿಷ್ಟ ಜಾತಿಯ 186 ಮತ್ತು ಪರಿಶಿಷ್ಟ ವರ್ಗದ 47 ಜನರಿಗೆ ಕೊಳವೆ ಬಾವಿಗಳ ನಿರ್ಮಾಣ.
- ರೂ. 18 ಕೋಟಿಗಳ ವೆಚ್ಚದಲ್ಲಿ ಪರಿಶಿಷ್ಟ ಜಾತಿಯ 1718 ಮತ್ತು ಪರಿಶಿಷ್ಟ ವರ್ಗದ 420 ಫಲಾನುಭವಿಗಳಿಗೆ ವೈಯಕ್ತಿಕ ಬಾವಿಗಳ ನಿರ್ಮಾಣ.
- 159 ದೇವದಾಸಿ ಮಹಿಳೆಯರಿಗೆ ರೂ. 43 ಲಕ್ಷಗಳ ಸಾಲ ಸಹಾಯಧನ ಮಂಜೂರು.
- 1695 ಸಫಾಯಿ ಕರ್ಮಚಾರಿಗಳಿಗೆ ರೂ. 3.50 ಕೋಟಿಗಳ ವೆಚ್ಚದಲ್ಲಿ ಪುನರ್‌ವಸತಿ ಸೌಲಭ್ಯ.

**2003-04 ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು ಉದ್ದೇಶಿಸಿರುವ ಪ್ರಮುಖ ಕಾರ್ಯಕ್ರಮಗಳು :**

- ರಾಜ್ಯದ ಬಿಜಾಪುರ, ಬಾಗಲಕೋಟೆ, ಬೀದರ್, ರಾಯಚೂರು, ಗುಲಬರ್ಗಾ, ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಪರಿಶಿಷ್ಟ ಜಾತಿಯವರಿಗೆ 25 ಮತ್ತು ಪರಿಶಿಷ್ಟ ವರ್ಗದವರಿಗೆ 25 ವಿದ್ಯಾರ್ಥಿ ನಿಲಯಗಳ ಪ್ರಾರಂಭ.
- ರೂ. 30 ಕೋಟಿಗಳ ವೆಚ್ಚದಲ್ಲಿ ಪರಿಶಿಷ್ಟ ಜಾತಿಯವರಿಗೆ 15,000 ಮನೆಗಳು ಮತ್ತು ರೂ. 10 ಕೋಟಿ ವೆಚ್ಚದಲ್ಲಿ ಪ. ವರ್ಗದವರಿಗೆ 5000 ಅಂಬೇಡ್ಕರ್ ಮನೆಗಳು ಹಾಗೂ ರೂ. 60 ಕೋಟಿ ವೆಚ್ಚದಲ್ಲಿ ಪ. ಜಾತಿಯವರಿಗೆ 60,000 ಆಶ್ರಯ ಮನೆಗಳು ಮತ್ತು ರೂ. 15 ಕೋಟಿ ವೆಚ್ಚದಲ್ಲಿ ಪ. ವರ್ಗದವರಿಗೆ 15,000 ಆಶ್ರಯ ಮನೆಗಳ ನಿರ್ಮಾಣ.
- ವಿಶೇಷ ಘಟಕ ಯೋಜನೆಯಡಿ ಪರಿಶಿಷ್ಟ ಜಾತಿಯ 1,75,000 ಜನರಿಗೆ, ಗಿರಿಜನ ಉಪಯೋಜನೆಯಡಿ ಪರಿಶಿಷ್ಟ ವರ್ಗ 30,000 ಜನರಿಗೆ ವಿವಿಧ ಸೌಲಭ್ಯ.
- ಪರಿಶಿಷ್ಟ ಜಾತಿಯ 4000 ಮತ್ತು ಪರಿಶಿಷ್ಟ ವರ್ಗದ 1000 ಮಹಿಳಾ ನಿರುದ್ಯೋಗಿ ಅಭ್ಯರ್ಥಿಗಳಿಗೆ ಕೌಶಲ್ಯ ಯೋಜನೆಯಡಿ ವಿವಿಧ ವೃತ್ತಿಗಳಲ್ಲಿ ತರಬೇತಿ.
- ಪರಿಶಿಷ್ಟ ಜಾತಿ ಮತ್ತು ವರ್ಗದ ನಿಗಮದಿಂದ ಪರಿಶಿಷ್ಟ ಜಾತಿಯ 12,344 ಮತ್ತು ಪರಿಶಿಷ್ಟ ವರ್ಗದ 3,562 ಜನರಿಗೆ ವಿವಿಧ ಸೌಲಭ್ಯಗಳನ್ನು ಕಲ್ಪಿಸಲಾಗುವುದು.
- ಪರಿಶಿಷ್ಟ ಜಾತಿಯ 4000 ಮತ್ತು ಪರಿಶಿಷ್ಟ ವರ್ಗದ 1000 ಫಲಾನುಭವಿಗಳಿಗೆ ಗಂಗಾ ಕಲ್ಯಾಣ ಯೋಜನೆ ಸೌಲಭ್ಯ


ಕರ್ನಾಟಕ ವಾರ್ತೆ

# ಸೋವಿಯತ್ ಒಕ್ಕೂಟ ಈಗ ಇದ್ದಿದ್ದರೆ ....

ಒಬ್ಬ ವ್ಯಕ್ತಿಗಾಗಲಿ, ಒಂದು ಸಂಸ್ಥೆಗಾಗಲಿ, ವ್ಯವಸ್ಥೆಗಾಗಲಿ ಕಣ್ಣ ಮುಂದಿದ್ದಾಗ ಸಿಗುವುದಕ್ಕಿಂತ ಹೆಚ್ಚಿನ ಪ್ರಾಮುಖ್ಯತೆ ಕಣ್ಮರೆಯಾದಾಗ ಸಿಗುತ್ತದೆ. ಗುಜರಾತ್ ಹತ್ಯಾಕಾಂಡ ನಡೆದಾಗ ಬಾಪೂಜಿ ಇಂದು ಇದ್ದಿದ್ದರೆ! ಎಂದು ಸಹಜವಾಗಿ ಉದ್ಗರಿಸುತ್ತೇವೆ. ಇನ್ನೊಬ್ಬ ಬುದ್ಧ, ಬಸವಣ್ಣ, ಅಂಬೇಡ್ಕರ್ ಮತ್ತೆ ಈ ನೆಲದಲ್ಲಿ ಉದಯಿಸುವುದಿಲ್ಲವೇ? ಎಂದು ಒಂದು ಕ್ಷಣ ಅಂದುಕೊಳ್ಳುತ್ತೇವೆ. ಆದರೆ ನಾವು ನೆನಪಿಸಿಕೊಳ್ಳುವ ಗಾಂಧೀಜಿ, ಬುದ್ಧ, ಬಸವಣ್ಣ, ಬದುಕಿದ್ದಾಗ ಅವರನ್ನು ನಾವು ಹೇಗೆ ಕಂಡೆವು ಎಂಬುದಕ್ಕೆ ಚರಿತ್ರೆ ಸಾಕ್ಷಿಯಾಗಿ ನಿಂತಿದೆ.

ಸಮಾಜವಾದಿ ಸೋವಿಯತ್ ಒಕ್ಕೂಟದ್ದೂ ಇದೇ ಕಥೆ. ಆ ದೇಶದಲ್ಲಿ ಕಮ್ಯೂನಿಸ್ಟ್ ಸರ್ಕಾರವಿದ್ದಾಗ ಜಗತ್ತಿನಲ್ಲಿ ಅದನ್ನು ದ್ವೇಷಿಸುವವರು ಸಾಕಷ್ಟಿದ್ದರು. ಮನುಷ್ಯ ಸಮಾಜದಲ್ಲೇ ವಿನೂತನವಾದ ಈ ವ್ಯವಸ್ಥೆಯನ್ನು ಧ್ವಂಸ ಮಾಡಲು ಅಮೆರಿಕನ್ ಸಾಮ್ರಾಜ್ಯಶಾಹಿ ನಿರಂತರವಾಗಿ ಮಸಲತ್ತು ನಡೆಸಿತು. ಭಾರತದಂಥ ಮೂರನೇ ಜಗತ್ತಿನ ದೇಶಗಳಲ್ಲೂ ಸೋಷಲಿಸ್ಟ್ ಎಂದು ಕರೆದುಕೊಳ್ಳುವ ಪಕ್ಷಗಳು ಆ ಸೋವಿಯತ್ ವ್ಯವಸ್ಥೆಯನ್ನು ವಿರೋಧಿಸುತ್ತಿದ್ದವು. ಜಯಪ್ರಕಾಶ್ ನಾರಾಯಣ, ರಾಮ ಮನೋಹರ ಲೋಹಿಯಾರಂಥವರೂ ಇದೇ ಮನೋಭಾವ ಹೊಂದಿದ್ದರು. ಆದರೆ ಇಲ್ಲಿನ ಕಮ್ಯೂನಿಸ್ಟ್ ಪಕ್ಷಗಳು ಹಾಗೂ ನೆಹರೂ ಮಾತ್ರ ಅದರ ಮಹತ್ವವನ್ನು ಅರಿತುಕೊಂಡಿದ್ದರು. ಅಂದು ದ್ವೇಷಿಸಿದ ಅದೇ ಜನ ಈಗ ಸೋವಿಯತ್ ರಷ್ಯ ಇದ್ದಿದ್ದರೆ ಹೀಗಾಗುತ್ತಿರಲಿಲ್ಲ ಎಂದು ಉದ್ಗರಿಸುವಂತಾಗಿದೆ. ಅದು ಈಗಿದ್ದಿದ್ದರೆ ಅಮೆರಿಕೆ ಈ ರೀತಿ ಇರಾಕಿನ ಮೇಲೆ ಪುಂಡಾಟಿಕೆ ಮಾಡಲು ಸಾಧ್ಯವಾಗುತ್ತಿರಲಿಲ್ಲ. ವಿಶ್ವಸಂಸ್ಥೆಯ ಗೊತ್ತುವಳಿಯನ್ನು ಕಸದಬುಟ್ಟಿಗೆ ಹಾಕಿ ಬಾಗದಾದ್ ಮೇಲೆ ಬಾಂಬ್ ದಾಳಿ ಮಾಡಲು ಆಗುತ್ತಿರಲಿಲ್ಲ. ಇನ್ನೊಂದು ದೇಶದ ಅಧ್ಯಕ್ಷನನ್ನು ನಲವತ್ತೆಂಟು ತಾಸುಗಳಲ್ಲಿ ದೇಶ ಬಿಟ್ಟು ಹೋಗದಿದ್ದರೆ ಹುಷಾರ್ ಎಂದು ಬೆದರಿಕೆ ಹಾಕುವುದು ಸುಲಭವಿರಲಿಲ್ಲ. ಜಾಗತೀಕರಣದ ವಂಚನೆಯ ಬಲೆಯನ್ನು ಪ್ರಪಂಚದ ಮೇಲೆ ಬೀಸುವುದು ಸುಲಭವಾಗುತ್ತಿರಲಿಲ್ಲ.

ಅರಬ್ ಜಗತ್ತಿನ ತೈಲ ಸಂಪತ್ತನ್ನು ಕಬಳಿಸಲು ಅಮೆರಿಕ ಹಲವಾರು ವರ್ಷಗಳಿಂದ ಹುನ್ನಾರ ನಡೆಸುತ್ತಲೇ ಬಂದಿದೆ. ಐವತ್ತರ ದಶಕದಲ್ಲಿ ಇರಾನಿನಲ್ಲಿ ಜನಪ್ರಿಯ ನಾಯಕ ಮೊಹ್ಮದ್ ಮುಸಾದಿಕ್ ಅಧಿಕಾರಕ್ಕೆ ಬಂದು ತೈಲ ಸಂಪತ್ತನ್ನು ರಾಷ್ಟ್ರೀಕರಣ ಮಾಡಿದಾಗ ಇಂಥದೇ ಸನ್ನಿವೇಶ ನಿರ್ಮಾಣವಾಗಿತ್ತು. ಆಗ ಇದೇ ಇಂಗ್ಲೆಂಡ್, ಅಮೆರಿಕೆಗಳು ಸೇರಿ ಮೊಸಾದಿಕ್‌ರನ್ನು ಕೊಲೆ ಮಾಡಿಸಿ ತಮ್ಮ ಚೇಲಾ ಶಹಾ ಎಂಬುವವನನ್ನು ಗದ್ದುಗೆ ಮೇಲೆ ಕೂರಿಸಿ ತಮ್ಮ ದರೋಡೆಗೆ ಉಂಟಾಗಿದ್ದ ಅಡ್ಡಿಯನ್ನು ನಿವಾರಿಸಿಕೊಂಡಿದ್ದವು.

ಪ್ರಜಾಪ್ರಭುತ್ವದ ಬಗ್ಗೆ ಮಾನವ ಹಕ್ಕುಗಳ ಬಗ್ಗೆ ಅಮೆರಿಕೆ ಜಗತ್ತಿಗೆಲ್ಲ ಧಾರಾಳವಾಗಿ ಉಪದೇಶ ನೀಡುತ್ತ ಬಂದಿದೆ. ಆದರೆ ವಸಾಹತುಶಾಹಿಯ ಸಂಕೋಲೆಯನ್ನು ಕತ್ತರಿಸಿ ಮುಕ್ತಗೊಂಡ ದೇಶಗಳಲ್ಲೆಲ್ಲ ಜನಸತ್ತೆಯನ್ನು ಧ್ವಂಸಗೊಳಿಸಿ ನಿರಂಕುಶ ಸರ್ವಾಧಿಕಾರಿಗಳನ್ನು ಪಟ್ಟಕ್ಕೆ ತಂದ ಕುಖ್ಯಾತಿ ಅದರದು. ೧೯೬೦ರಲ್ಲಿ ಕಾಂಗೋದಲ್ಲಿ ಲುಮುಂಬಾರನ್ನು ಮುಗಿಸಿದ ಕಳಂಕವನ್ನು ಅದು ಅಂಟಿಸಿಕೊಂಡಿದೆ. ಅಯಂಡೆಯನ್ನು ಹತ್ಯೆ ಮಾಡಿದ ರಕ್ತದ ಕಲೆ ಇನ್ನೂ ಮಾಸಿಲ್ಲ. ಇಂಡೋನೇಷಿಯಾದಲ್ಲಿ ಸುಕರ್ನೊ, ಬಾಂಗ್ಲಾದೇಶದಲ್ಲಿ ಮುಜಿಬರ್ ರೆಹ್ಮಾನ ಈ ಸಂಚಿಗೆ ಬಲಿಯಾದವರ ಪಟ್ಟಿಗೆ ಸೇರಿದ್ದಾರೆ.

ಆದರೆ ಶೀತಲ ಸಮರದ ಆ ಕಾಲಘಟ್ಟದಲ್ಲಿ ಅನೇಕ ದೇಶಗಳು ಅಮೆರಿಕದ ದೌರ್ಜನ್ಯದ ವಿರುದ್ಧ ಎದೆ ಸೆಟೆಸಿ ನಿಲ್ಲಲು ಸಾಧ್ಯವಾಗಿದ್ದು ಸೋವಿಯತ್ ರಷ್ಯ ಹಾಗೂ ಪೂರ್ವ ಯೂರೋಪಿನ ಸಮಾಜವಾದಿ ದೇಶಗಳು ನೀಡಿದ ನೈತಿಕ ಬೆಂಬಲದಿಂದ. ಸಾಮ್ರಾಜ್ಯಶಾಹಿ ಯಜಮಾನಿಕೆಯನ್ನು ಎದುರಿಸಲು ಅಲಿಪ್ತ ಆಂದೋಲನ ನಾಲ್ಕು ದಶಕಗಳ ಹಿಂದೆಯೇ ಜನ್ಮ ತಾಳಿತು. ಅಂದಿನ ಭಾರತದ ಪ್ರಧಾನಿಯಾಗಿದ್ದ ಪಂಡಿತ ಜವಾಹರಲಾಲ್ ನೆಹರೂ, ಇಜಿಪ್ತ ಅಧ್ಯಕ್ಷ ಅಬ್ದುಲ್ ಗಮಾಲ್ ನಾಸೇರ್, ಯುಗೋಸ್ಲಾವಿಯಾದ ಮಾರ್ಷಲ್ ಟೀಟೊ ಜೊತೆಗೂಡಿ ಕಟ್ಟಿದ ಅಲಿಪ್ತ ಆಂದೋಲನಕ್ಕೆ ಒತ್ತಾಸೆಯಾಗಿ ನಿಂತಿದ್ದು ಸೋವಿಯತ್ ರಷ್ಯ. ಹೊಸದಾಗಿ ಸ್ವಾತಂತ್ರ್ಯ ಪಡೆದ ಭಾರತದಂಥ ದೇಶಗಳಿಗೆ ಯುದ್ಧ ಕಾಲದಲ್ಲಿ ಮಾತ್ರವಲ್ಲದೆ ಈ ದೇಶಗಳ ಸಮಗ್ರ ಆರ್ಥಿಕಾಭಿವೃದ್ಧಿಗೆ ಕೂಡ ಸೋವಿಯತ್ ರಷ್ಯ ಆಸರೆಯಾಗಿ ನಿಂತಿತ್ತು. ತೃತೀಯ ವಿಶ್ವದಲ್ಲಿ ಸಾರ್ವಜನಿಕ ಉದ್ಯಮರಂಗ ಎಂಬುದೊಂದು ಜನ್ಮ ತಳೆಯುವುದು ಸಾಮ್ರಾಜ್ಯಶಾಹಿಗೆ ಇಷ್ಟವಿರಲಿಲ್ಲ. ಈ ದೇಶಗಳನ್ನು ಮಾರುಕಟ್ಟೆಗಳ ವಸಾಹತುಗಳನ್ನಾಗಿ ಮಾಡಿಕೊಳ್ಳಲು ಹೊರಟವರಿಗೆ ಸರ್ಕಾರಿ ಉದ್ಯಮರಂಗ ಅಡಚಣೆಯಾಗುತ್ತದೆ. ಆದರೆ ಸಾರ್ವಜನಿಕ ಕ್ಷೇತ್ರದಲ್ಲಿ ಬಿಲಾಯ್‌ನಂಥ ಉಕ್ಕಿನ ಕಾರ್ಖಾನೆಯ ಸ್ಥಾಪನೆಗೆ ನೆರವಾದ ರಷ್ಯ ಭಾರತದ ಆರ್ಥಿಕ ಸ್ವಾವಲಂಬನೆಗೆ ಬೆಂಬಲ ನೀಡಿತು.

ವಿಯೆಟ್ನಾಂನಂಥ ಪುಟ್ಟ ದೇಶ ಇಪ್ಪತ್ತು ವರ್ಷ ಕಾಲ ಅಮೆರಿಕನ್ ಸಾಮ್ರಾಜ್ಯಶಾಹಿಯ ವಿರುದ್ಧ ಸೆಣಸಿತು. ಆಗಲೂ ಈ ವಿಯೆಟ್ನಾಂ ಸಮರದ ವಿರುದ್ಧ ಅಮೆರಿಕದಲ್ಲಿ ಜನ ಪ್ರತಿಭಟಿಸಿ ಬೀದಿಗಿಳಿದಿದ್ದರು. ಬಾಂಬಿನ ಸುರಿಮಳೆಯ ನಡುವೆ ಬದುಕಿದ ವಿಯೆಟ್ನಾಂ ಜನತೆಯ ತ್ಯಾಗ ಬಲಿದಾನಗಳ ಎದುರು ಶ್ವೇತ ಭವನದ ಪ್ರೇತಗಳ ಆಟ ನಡೆಯಲಿಲ್ಲ. ಆ ವಿಯೆಟ್ನಾಂನ ಯುದ್ಧದಲ್ಲಿ ಪಾಲ್ಗೊಂಡ ಅನೇಕ ಅಮೆರಿಕನ್ ಯೋಧರು ರಕ್ತಪಾತ ಕಂಡು ನೊಂದು ಮನೋವ್ಯಾಧಿಗೆ ಒಳಗಾದರು. ಅವರಿಗೆ ಅಂದು ನಾನಾ ಸವಲತ್ತುಗಳ ಆಸೆಯೊಡ್ಡಿದ್ದ ಅಲ್ಲಿನ ಸರ್ಕಾರ,ಈಗ ಅವರನ್ನು ಬೀದಿಪಾಲು ಮಾಡಿದೆ.

ಈ ವಿಯೆಟ್ನಾಮಿಗಳ ದಿಟ್ಟ ಹೋರಾಟಕ್ಕೆ ಸ್ವಾಭಿಮಾನದ ಪ್ರತಿರೋಧಕ್ಕೆ ಸ್ಫೂರ್ತಿಯ ಸೆಲೆಯಾಗಿ ನಿಂತಿದ್ದು ಅಂದಿನ ಸೋವಿಯತ್ ರಷ್ಯ. ಆರ್ಥಿಕ ನೆರವು, ಆಹಾರ ಸಾಮಗ್ರಿ ಪೂರೈಕೆ ಹಾಗೂ ಶಸ್ತ್ರಾಸ್ತ್ರಗಳನ್ನು ಕೂಡ ಅವರಿಗೆ ನೀಡಿದ ಸೋವಿಯತ್ ರಷ್ಯಕ್ಕೆ ಯಾವ ಸ್ವಾರ್ಥವೂ ಇರಲಿಲ್ಲ. ಜಗತ್ತಿನ ಯಾವ ದೇಶವೂ ಸಾಮ್ರಾಜ್ಯಶಾಹಿಯ ಯಮಪಾಶಕ್ಕೆ ಸಿಲುಕಬಾರದು, ಸಮಾಜವಾದ ಎಲ್ಲೆಡೆ ಬರಬೇಕೆಂಬುದೇ ಅದರ ಏಕೈಕ ಆಸಕ್ತಿಯಾಗಿತ್ತು.

ಅಮೆರಿಕದಿಂದ ಕೇವಲ ಎಂಬತ್ತು ಮೈಲಿ ಅಂತರದಲ್ಲಿರುವ ಕ್ಯೂಬಾ ಶ್ವೇತಭವನಕ್ಕೆ ಸವಾಲು ಹಾಕಿ ನಿಂತಿದೆ. ಚೆ ಗವೇರಾ ಅವರ ಅದಮ್ಯ ಸ್ಫೂರ್ತಿ ಅಲ್ಲಿನ ಮಣ್ಣಿನ ಕಣಕಣಗಳಲ್ಲಿದೆ. ಈ ಪುಟ್ಟ ದೇಶದ ಸಾರಥ್ಯವನ್ನು ಕಳೆದ ನಾಲ್ಕು ದಶಕಗಳಿಂದ ವಹಿಸಿಕೊಂಡು ಮುನ್ನಡೆಸಿಕೊಂಡು ಬಂದಿರುವ ಫಿಡಲ್ ಕ್ಯಾಸ್ಟ್ರೋ ಅವರನ್ನು ಕೊಲ್ಲಲು ಅಮೆರಿಕ ಹಲವಾರು ಬಾರಿ ಯತ್ನಿಸಿತು. ಆದರೂ ಕ್ಯಾಸ್ಟ್ರೊ ಮತ್ತು ಕ್ಯೂಬಾ ಮಣಿಯಲಿಲ್ಲ. ಈ ಕ್ಯೂಬಾಕ್ಕೆ ಜೀವದ ಗೆಳೆಯನಾಗಿ ನಿಂತಿದ್ದು ಸೋವಿಯತ್ ರಷ್ಯ.

ಭಾರತದ ವಿರುದ್ಧವೂ ಅಮೆರಿಕೆ ಹುನ್ನಾರ ನಡೆಸುತ್ತಲೇ ಬಂದಿದೆ. ಅದು ಪಾಕಿಸ್ತಾನಕ್ಕೆ ಮಾರಕಾಸ್ತ್ರಗಳನ್ನು ನೀಡಿ ಕೊಬ್ಬಿಸಿತು. ಕಾಶ್ಮೀರ ಪ್ರಶ್ನೆಯಲ್ಲಿ ಕಿತಾಪತಿ ಮಾಡುತ್ತ ಬಂತು. ಆದರೆ ಇಂಥ ಇಕ್ಕಟ್ಟಿನ ಸನ್ನಿವೇಶದಲ್ಲೆಲ್ಲ ಸೋವಿಯತ್ ರಷ್ಯ ಭಾರತದ ಪರವಾಗಿ ಗಟ್ಟಿಯಾಗಿ ನಿಂತಿತು. ಬಾಂಗ್ಲಾ ದೇಶದ ಯುದ್ಧದ ಸಂದರ್ಭದಲ್ಲಿ ಅಮೆರಿಕದ ಏಳನೇ ನೌಕಾಪಡೆ ಬಂಗಾಳ ಕೊಲ್ಲಿಗೆ ಬಂದಾಗ 'ಹುಷಾರ್ ನಮ್ಮ ಜಲಾಂತರ್ಗಾಮಿಗಳು ಅಲ್ಲಿ ಬರುತ್ತವೆ' ಎಂದು ಕ್ರೆಮ್ಲಿನ್ ಗರ್ಜಿಸಿದ ನಂತರವೇ ವಾಷಿಂಗ್ಟನ್ ಬಾಲ ಮುದುರಿ ತೆಪ್ಪಗಾಯಿತು.

ಸೋವಿಯತ್ ರಷ್ಯ ಎಂಬುದೊಂದು ಅಂದು ಇಲ್ಲದಿರುತ್ತಿದ್ದರೆ ವರ್ಣಭೇದದ ವಿರುದ್ಧ ದಕ್ಷಿಣ ಆಫ್ರಿಕದ ಜನತೆ ಧೀರೋದ್ದಾತ್ತ ಹೋರಾಟ ನಡೆಸಿ ಯಶಸ್ವಿಯಾಗಲು ಸಾಧ್ಯವಾಗುತ್ತಿರಲಿಲ್ಲ. ಈ ದೇಶ ಸಮಾಜವಾದಿ ದೇಶವಾಗಿ ಜಗತ್ತಿನ ಭೂಪಟದಿಂದ ಮಾಯವಾದ ನಂತರವೇ ಪ್ಯಾಲೆಸ್ಟೈನ್ ಚಳವಳಿಗೆ ಹಿನ್ನಡೆ ಉಂಟಾಗಿ ಇಸ್ರೇಲ್ ದುರಹಂಕಾರದಿಂದ ಹೂಂಕರಿಸುವಂತಾಗಿದೆ.

ಸೋವಿಯತ್ ವ್ಯವಸ್ಥೆಯಲ್ಲಿ ಎಷ್ಟೋ ಲೋಪದೋಷಗಳಿದ್ದಿರಬಹುದು. ಆದರೆ ಆಂಗ್ಲೋ ಅಮೆರಿಕನ್ ಸಾಮ್ರಾಜ್ಯಶಾಹಿಗೆ ಅಂಕುಶವಾಗಿ ಅದು ಕಾರ್ಯನಿರ್ವಹಿಸುತ್ತಿತ್ತು. ಹೀಗಾಗಿ ಹಿಂದಿನ ನಾಲ್ಕು ದಶಕಗಳ ಕಾಲ ಶೀತಲ ಸಮರದ ವಾತಾವರಣವಿದ್ದರೂ ಯಾವುದೇ ದೇಶ

ಸನತ್‌ಕುಮಾರ ಬೆಳಗಲಿ

ಸಂಯುಕ್ತ ರಾಷ್ಟ್ರಸಂಸ್ಥೆಯ ಲಕ್ಷ್ಮಣರೇಖೆಯನ್ನು ದಾಟಿ ಹೋಗಲು ಸಾಧ್ಯವಾಗುತ್ತಿರಲಿಲ್ಲ. ಎರಡು ವ್ಯವಸ್ಥೆಗಳ ನಡುವಿನ ಸಂಘರ್ಷ ಸಂವಾದದ ಗೆರೆ ದಾಟುತ್ತಿರಲಿಲ್ಲ.

ಸೋವಿಯತ್ ಸಮಾಜವಾದಿ ವ್ಯವಸ್ಥೆ ಕುಸಿದುಬಿದ್ದ ನಂತರ ಜಗತ್ತಿನ ಸಮತೋಲನವೇ ತಪ್ಪಿಹೋಯಿತು. ಅಮೆರಿಕನ್ ಸಾಮ್ರಾಜ್ಯಶಾಹಿ ಸೂಪರ್‌ಸ್ಟಾರ್ ಆಗಿ ಗೂಳಿಯಂತೆ ಎಲ್ಲರಿಗೂ ತಿವಿಯುತ್ತ ಹೊರಟಿತು ಈ ಏಕಧ್ರುವ ವ್ಯವಸ್ಥೆ ವಿಶ್ವದ ಶೋಷಕ ವರ್ಗ ಬಯಸುವ ವ್ಯವಸ್ಥೆಯಾಗಿ ಭಾರತದಂಥ ಹಿಂದುಳಿದ ದೇಶಗಳ ಮಾತಿಗೆ ಈಗ ಬೆಲೆ ಇಲ್ಲ. ಜೋರಾಗಿ ಕೆಮ್ಮಿದರೆ ಶ್ವೇತಭವನದ ಯಜಮಾನ ಕೋಪಿಸಿಕೊಳ್ಳುತ್ತಾನೇನೋ ಎಂಬ ಭೀತಿ ಈ ದೇಶಗಳ ಸ್ವಾಭಿಮಾನವನ್ನೇ ನಾಶಮಾಡಿದೆ.

ನಲವತ್ತರ ದಶಕದಲ್ಲಿ ಜರ್ಮನಿಯ ಅಡಾಲ್ಫ್ ಹಿಟ್ಲರ್ ಜಗತ್ತಿನ ಸರ್ವಾಧಿಕಾರಿಯಾಗಲು ಹೊರಟಿದ್ದ; ಆಗ ರಷ್ಯದ ಕೆಂಪುಸೇನೆ ಆತನ ಸೊಂಟ ಮುರಿಯಿತು. ಈಗ ಅದೇ ಹಿಟ್ಲರನ ದಾರಿಯಲ್ಲಿ ಅಮೆರಿಕೆ ಸಾಗಿದೆ. ಹಿಂದುಳಿದ ದೇಶಗಳಲ್ಲಿ ತನ್ನ ಕೈಗೊಂಬೆ ಸರ್ಕಾರಗಳನ್ನು ಹೇರಿ ಜಗತ್ತನ್ನೇ ಆಳಲು ಅದು ಮಸಲತ್ತು ನಡೆಸಿದೆ. ಅಶೋಕ ಸಿಂಘಾಲ, ಪ್ರವೀಣ್ ತೊಗಾಡಿಯಾಗಳು ಕಟ್ಟುತ್ತೇವೆಂದು ಹೇಳುವ ಸ್ವಾಭಿಮಾನಿ ಹಿಂದೂ ರಾಷ್ಟ್ರವೂ ಕೂಡ ಶ್ವೇತಭವನದ ದಾಸ್ಯದ ನೊಗಕ್ಕೆ ಹೆಗಲು ಕೊಡಲೇಬೇಕಾಗುತ್ತದೆ. ಕೆಲವರು ಭಾವಿಸಿದಂತೆ ಅಮೆರಿಕೆ ಇಸ್ಲಾಂ ವಿರುದ್ಧ ಮಾತ್ರವಲ್ಲ ಮಾನವತೆಯ ವಿರುದ್ಧವೇ ಈಗ ಸಮರ ಸಾರಿದೆ. ಮುಂದೊಂದು ದಿನ ಭಾರತ, ಪಾಕಿಸ್ತಾನ ಸೇರಿದಂತೆ ಅರಬ್ ದೇಶಗಳೂ ಸೇರಿದಂತೆ ಆಫ್ರಿಕ ಏಷ್ಯಾ ದೇಶಗಳು ಸಾಮ್ರಾಜ್ಯಶಾಹಿಯ ವಿರುದ್ಧ ಒಂದಾಗಿ ಹೋರಾಡಬೇಕಾಗುತ್ತದೆ.




ಅಮೆರಿಕೆಯ ಈ ದಂಡಯಾತ್ರೆಗೆ ಕಡಿವಾಣ ಹಾಕದಿದ್ದರೆ ಇಂದು ಇರಾಕಿಗಾದ ಗತಿ ನಾಳೆ ಭಾರತಕ್ಕೂ ಆಗುತ್ತದೆ. ಜಗತ್ತಿನ ಎಲ್ಲ ದೇಶಗಳಲ್ಲೂ ಜಾರ್ಜ್ ಬುಷ್‌ನಿಂದ ನೇಮಕಗೊಂಡ ಸರ್ಕಾರಗಳು ಅಸ್ತಿತ್ವಕ್ಕೆ ಬರುತ್ತವೆ. ಈ ಗಂಡಾಂತರವನ್ನು ತಪ್ಪಿಸಬೇಕಾದರೆ ಮತ್ತೆ ಅಂದಿನ ಸೋವಿಯತ್ ರಷ್ಯದಂಥ ಸರ್ವರಿಗೂ ಸಮಾನಾವಕಾಶವಿರುವ ಸಮಾಜವಾದದ ಸಮಾಜ ಕಟ್ಟಲು ಎಲ್ಲ ದೇಶಗಳ ಜನರೂ ಸಂಕಲ್ಪ ಮಾಡಬೇಕು. ಇದೊಂದೇ ಈಗ ಉಳಿದ ದಾರಿಯಾಗಿದೆ.

ಸೋವಿಯತ್ ಸಮಾಜವಾದಿ ವ್ಯವಸ್ಥೆ ಯಾಕೆ ವಿಫಲಗೊಂಡಿತು? ಪೂರ್ವ ಯೂರೋಪಿನ ಸಮಾಜವಾದಿ ದೇಶಗಳು ಯಾಕೆ ಒಂದೊಂದಾಗಿ ಅವನತಿಗೊಂಡವು? ಈ ವ್ಯವಸ್ಥೆ ಕುಸಿದು ಬಿದ್ದ ನಂತರ ಅಫ್ಘಾನಿಸ್ತಾನದಲ್ಲಿ ತಾಲಿಬಾನ್, ಭಾರತದಲ್ಲಿ ಸಂಘಪರಿವಾರಗಳು ಯಾಕೆ ಚಿಗಿತುಕೊಂಡವು? ಈ ವಿದ್ಯಮಾನಗಳಲ್ಲಿ ಅಮೆರಿಕದ ಕೈವಾಡವಿದೆಯೆ? ಆಂತರಿಕ ಲೋಪದೋಷಗಳೆಷ್ಟು? ಈ ಪ್ರಶ್ನೆಗಳಿಗೆಲ್ಲ ಮುಕ್ತ ಪರಾಮರ್ಶೆ ತುರ್ತು ಅಗತ್ಯವಾಗಿದೆ. ಈ ಪ್ರಶ್ನೆಗಳಿಗೆ ಉತ್ತರ ಕಂಡುಕೊಂಡು ಹೊಸ ದಾರಿಯತ್ತ ಸಾಗಬೇಕಾಗಿದೆ.

**ಸನತ್‌ಕುಮಾರ ಬೆಳಗಲಿ**
ಜನವಾಹಿನಿ, ಬೆಂಗಳೂರು

## ಸಾದರ ಸ್ವೀಕಾರ

**ಬಿಲ್ಲವರು – ಒಂದು ಅಧ್ಯಯನ**
ಬಾಬು ಶಿವ ಪೂಜಾರಿ
**ಪುಟ ೧೪೪** **ಬೆಲೆ : ರೂ. ೧೦೦**
**ಬಿಲ್ಲವ ಜಾಗೃತಿ ಬಳಗ,** ೧, ಮೋತಿಲಾಲ್ ಮ್ಯಾನ್ಷನ್, ನಾದಿರ್ ಷಾ ಸುಖ್ಯಾ ಸ್ಟ್ರೀಟ್, ಫೋರ್ಟ್, ಮುಂಬಯಿ - ೪೦೦ ೦೦೧

**ಶಿವಶರಣರ ಕ್ರಾಂತಿಕಾರಿ ಮೌಲಿಕ ವಚನಗಳು**
ಸಂ : ಪ್ರೊ|| ಜ್ಯೋತಿ ಹೊಸೂರ
**ಪುಟ : ೧೧೦** **ಬೆಲೆ ರೂ. ೭೨**
**ಕಾಲಗತಿ ಪ್ರಕಾಶನ,** 'ನೀಲು' ಪ್ಲಾಟ್ ನಂ. ೩೩, ಸೆಕ್ಟರ್ ನಂ.೧೦, ಮಾಳಮಾರುತಿ ಗುಡಿರಸ್ತೆ, ಆಂಜನೇಯನಗರ, ಬೆಳಗಾವಿ - ೫೯೦ ೦೧೬

**ಸೂಕ್ತಿಗಳಲ್ಲಿ ಸ್ತ್ರೀ**
ಸಂ : ಟಿ. ವಿ. ವೆಂಕಟರಮಣಯ್ಯ
**ಪುಟ : ೧೮೦** **ಬೆಲೆ : ರೂ. ೬೦**
**ಟಿ. ವಿ. ವೆಂಕಟರಮಣಯ್ಯ**
ಇ ಡಬ್ಲ್ಯೂ ಎಸ್-೨೧೮, ಕೆ.ಹೆಚ್.ಬಿ. ಕಾಲೋನಿ, ೨ನೇ ಹಂತ, ೫ನೇ ಕ್ರಾಸ್, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

**ಯಾರಿವರು ?** (ಕವನ ಸಂಕಲನ)
ಎಂ. ಬಿ. ಪಾಟೀಲರ
**ಪುಟ : ೬೦** **ಬೆಲೆ : ರೂ. ೨೦**
**ಚೌರಿ ಪ್ರಕಾಶನ,** ರ. ನಂ. ೩೦೬, ಅಡಿಹುಡಿ, ತಾಲ್ಲೂಕು ಜಮಖಂಡಿ

**ಅಂತರ ಜಾತೀಯ ಪ್ರೇಮ ವಿವಾಹಗಳು ಗೆಲ್ಲುವವೇ ?**
(ಲೇಖನ ಸಂಗ್ರಹ) ಎಸ್. ಬಿ. ಜೋಗುರ
**ಪುಟ : ೧೧೪** **ಬೆಲೆ : ರೂ. ೫೦**
**ಉದಯ ಪ್ರಭಾ ಪ್ರಕಾಶನ,** ಕಾರವಾರ

**ಕರ್ನಾಟಕ ಸಂಘ ಭವನ-೬೦** (ನೆನಪಿನ ಸಂಪುಟ)
**ಪುಟ : ೧೧೦** **ಬೆಲೆ : ರೂ. ೫೦**
**ಕರ್ನಾಟಕ ಸಂಘ (ರಿ)**
ಬಿ. ಹೆಚ್. ರಸ್ತೆ, ಶಿವಮೊಗ್ಗ - ೫೭೭ ೨೦೧

**ಅಂತರಿಕ್ಷ**
**ಪುಟ : ೭೬** **ಬೆಲೆ : ರೂ. ೨೦**

**ಪ್ರಯೋಗಗಳು**
**ಪುಟ : ೫೬** **ಬೆಲೆ : ರೂ. ೧೫**

**ನೀರು... ನೀರು...**
ಎಂ. ಜಿ. ಗಂಗನಹಳ್ಳಿ
**ಪುಟ : ೩೬** **ಬೆಲೆ : ರೂ. ೮**

**ತಕ್ಕಡಿ**
ಪ್ರೊ|| ಜಿ. ಎಸ್. ಗುರುಮೂರ್ತಿ
**ಪುಟ : ೩೬** **ಬೆಲೆ : ರೂ. ೮**

**ಚಕ್ಕಡಿಗೊಂದು ಮೋಟಾರು**
ಪ್ರೊ|| ವಿರುಪಾಕ್ಷ ಕೋರಗಲ್
**ಪುಟ : ೩೬** **ಬೆಲೆ : ರೂ. ೮**

**ಮೋಜಣಿಯ ಮೋಜು**
ಶೇಖರ್ ಗೌಳೇರ್
**ಪುಟ : ೩೬** **ಬೆಲೆ : ರೂ. ೮**

**ನಮ್ಮ ವಿಶ್ವದ ಕಥೆ**
ಅಬ್ದುಲ್ ಲತೀಫ್
**ಪುಟ : ೩೬** **ಬೆಲೆ: ರೂ. ೧೫**

**ಸುಂದರ ಶಾಲೆ**
ಅನು : ಜಿ. ಎನ್. ರಮೇಶ್ ಬೊಂಗಾಳೆ
**ಪುಟ : ೩೬** **ಬೆಲೆ : ರೂ. ೧೫**
ಮೇಲಿನ ಎಂಟು ಪುಸ್ತಕಗಳ ಪ್ರಕಾಶಕರು :
**ಭಾರತ ಜ್ಞಾನ ವಿಜ್ಞಾನ ಸಮಿತಿ**
ಭಾರತೀಯ ವಿಜ್ಞಾನ ಮಂದಿರ ಆವರಣ, ಬೆಂಗಳೂರು - ೫೬೦ ೦೧೨

**ಬಹುಧಾನ್ಯದಿಂದ ಬಹುಧಾನ್ಯಕ್ಕೆ** (ಆತ್ಮಕಥೆ)
ಪರಮೇಶ್ವರಿ ಲೋಕೇಶ್ವರ್
**ಪುಟ : ೧೪೦** **ಬೆಲೆ : ರೂ. ೬೦**

**ಅಮೇರಿಕದಲ್ಲಿ ಅರವತ್ತು ದಿನಗಳು** (ಪ್ರವಾಸ ಕಥನ)
ಪರಮೇಶ್ವರಿ ಲೋಕೇಶ್ವರ್
**ಪುಟ : ೧೦೮** **ಬೆಲೆ : ರೂ. ೪೫**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಪುಸ್ತಕ ನಿಧಿ,** ಗಾವಳಿ, ಕುಂದಾಪುರ ತಾಲ್ಲೂಕು

**ನಗು ಮಲ್ಲಿಗೆ** (ಪ್ರಹಸನಗಳು)
ಶ್ರೀಲತ ವಿ. ಮೂರ್ತಿ
**ಪುಟ: ೮೦** **ಬೆಲೆ : ರೂ. ೫೦**
**ಪ್ರಜ್ವಲ್ ಪ್ರಕಾಶನ,** ನಂ. ೨೯೯, ಅಭಿಜ್ಞಾನ ೨ನೇ ಅಡ್ಡರಸ್ತೆ, ೫ನೇ ಮುಖ್ಯರಸ್ತೆ ಕಾಫಿ ಮಂಡಳಿ ಬಡಾವಣೆ ಬೆಂಗಳೂರು - ೫೬೦ ೦೨೪



# ಮಹಿಳೆಯರು ಜೀವನದಿಗಳಾಗಿ ತುಂಬಿ ಹರಿಯಲಿ

**ಮಹಿಳೆಯರು ಇಡೀ ಕುಟುಂಬದ ಆಧಾರಸ್ತಂಭ. ಹೊರುವ, ಹೆರುವ, ಸಾಕುವ, ಸಲಹುವ ಪಾತ್ರ. ಆಕಸ್ಮಿಕವಾಗಿ ಏನೋ ಕಾರಣದಿಂದ ಎಷ್ಟೋ ಸಲ ಗಂಡಸರ ಭಿನ್ನಾಭಿಪ್ರಾಯದಿಂದ ಕುಟುಂಬ ಒಡೆದರೆ ಸಮಾಜ ಹೀಗಳೆಯವುದು ಮಾತ್ರ ಹೆಣ್ಣನ್ನೇ. ಅಮರ್ತ್ಯಸೇನ್‌ರ ಪ್ರಕಾರ ''ಕುಟುಂಬದ ಆರ್ಥಿಕ ಸ್ಥಿತಿ ಸುಧಾರಿಸಿದ್ದರೂ ಗಂಡು - ಹೆಣ್ಣನ್ನು ನಡೆಸಿಕೊಳ್ಳುವ ರೀತಿಯಲ್ಲಿ ಏನೂ ಬದಲಾವಣೆಯಾಗಿಲ್ಲ. ಅವರ ನಡುವಿನ ತಾರತಮ್ಯ ಹೆಚ್ಚೇ ಆಗಿದೆ.''**

### ಡಾ॥ ಜಯಪ್ರಕಾಶ ಮಾವಿನಕುಳಿ

**ಭಾ**ರತೀಯ ಸಮಾಜ ವ್ಯವಸ್ಥೆಯನ್ನು 'ಕುಟುಂಬ'ದ ಪರಿಕಲ್ಪನೆಯಿಲ್ಲದೆ ಊಹಿಸಿಕೊಳ್ಳುವುದು ಸಾಧ್ಯವಿಲ್ಲ. ಭಾರತೀಯರಿಗೆ ಕುಟುಂಬ ಎನ್ನುವುದು ನಾಲ್ಕು ಗೋಡೆಯ ಮಿತಿಯದಲ್ಲ. ಭಾವನೆಯ, ಆತ್ಮೀಯತೆಯ, ಮಧುರತೆಯ ಸಂಕುಲ ಅದು. ಕುಟುಂಬವೆಂಬುದು ಮಹಿಳೆಯರಿಗೆ ಭದ್ರತೆ ನೀಡುವ, ಅವರ ಯೋಗಕ್ಷೇಮ ನೋಡಿಕೊಳ್ಳುವ ಒಂದು ಕಟ್ಟುಪಾಡು. ಆದರೆ ವಾಸ್ತವದಲ್ಲಿ ಅನೇಕ ಕುಟುಂಬಗಳ ಮಹಿಳೆಯರಿಗೆ ಅದು ಶೋಷಣೆಯ ತಾಣ - ಇಲ್ಲ ವಧಾಸ್ಥಾನವಾಗಿ ಬಿಟ್ಟಿದೆ. ಇಲ್ಲಿ ಘರ್ಷಣೆಯೂ ಏಮ್ಮುಖವಾಗಿದೆ. ಕಾರಣ ಹೆಣ್ಣು ಈ ಕುಟುಂಬದಲ್ಲಿ ಪೂರ್ಣ ಶರಣಾಗತಳು ಹಾಗೂ ಇಲ್ಲಿ ಇರುವುದು ಬರಿಯ ಸುಲಿಗೆ ಮಾತ್ರ. ಆದುದರಿಂದ ಈ ಕುಟುಂಬ ಅಮರ್ತ್ಯಸೇನ್ ಹೇಳುವಂತೆ – ''ಸಹಮತ ಮತ್ತು ಸಂಘರ್ಷದ ಸಹಬಾಳ್ವೆಯ ಸ್ಥಳ''ವಾಗಿಬಿಟ್ಟಿದೆ.

ಕುಟುಂಬದಲ್ಲಿನ ಮಹಿಳೆಯರ ಸ್ಥಾನಮಾನಗಳು ಅದು ಅಂಗವಾಗಿರುವ ವ್ಯವಸ್ಥೆಯ ಮೇಲೆ ಅವಲಂಬಿಸಿರುತ್ತದೆ. ಕುಟುಂಬ ಎನ್ನುವುದು ಕಾಲಕಾಲಕ್ಕೆ, ಪೀಳಿಗೆ ಪೀಳಿಗೆಗಳಲ್ಲಿ ಬೇರೆ ಬೇರೆ ವ್ಯಾಖ್ಯಾನಗಳನ್ನು ಪಡೆದುಕೊಂಡಿದೆ. ಹಿಂದೆ ಇದ್ದ ಅವಿಭಕ್ತ ಕುಟುಂಬಗಳಲ್ಲಿ ದೊಡ್ಡಪ್ಪ - ತಂದೆ - ಚಿಕ್ಕಪ್ಪ - ಅಮ್ಮ - ದೊಡ್ಡಮ್ಮ - ಚಿಕ್ಕಮ್ಮ - ಎಲ್ಲರ ಮಕ್ಕಳು ಒಟ್ಟಿಗೆ ಇರುತ್ತಿದ್ದರು. ಭಾರತೀಯ ಕುಟುಂಬಗಳು ಆಧುನಿಕತೆಯ ಪ್ರಭಾವಕ್ಕೆ ಸಿಕ್ಕು ವಿಘಟಿಸಿ ಅವಿಭಕ್ತ ಕುಟುಂಬದ ಪರಿಕಲ್ಪನೆಯೇ ಸಿಗುವುದು ಕಷ್ಟವಾಗಿದೆ. ಈಗ ಕುಟುಂಬ ಎಂದರೆ ಹೆಂಡತಿ - ಮಕ್ಕಳು ಮಾತ್ರ. ಇನ್ನು ಮುಂದೆ ಇದೂ ವಿಘಟನೆಯಾದರೆ ಆಶ್ಚರ್ಯವಿಲ್ಲ.

ಪಿತೃಪ್ರಧಾನ ಕುಟುಂಬದಲ್ಲಿ ಮಗನೇ ಮುಖ್ಯನಾಗುತ್ತಾನೆ. ಮಗಳಿಗೆ ಜನ್ಮ ಕೊಟ್ಟ ಕುಟುಂಬ ಒಂದು ತಂಗುದಾಣ ಮಾತ್ರ. ಇದು ತಾತ್ಕಾಲಿಕ ವ್ಯವಸ್ಥೆಯಷ್ಟೆ. ಇದರ ಪರಿಣಾಮ ಆಕೆ ಆ ಕುಟುಂಬದಲ್ಲಿ ಎರಡನೇ ದರ್ಜೆಯ ಪ್ರಜೆಯಾಗಿಬಿಡುತ್ತಾಳೆ. ಮದುವೆಯಾದ ಮೇಲೆ ಅವಳು ಅಲ್ಲಿ ಇರುವಂತಿಲ್ಲ. ತಂದೆಯ ಆಸ್ತಿಯ ಹಕ್ಕುದಾರಳಲ್ಲ, ಧಾರ್ಮಿಕ ಸಂಸ್ಕಾರದ ಅಧಿಕಾರವಿಲ್ಲ. ನೆಂಟರ ಮನೆಗೆ ಹೋಗಿಬರುವವರ ತರಹ ಬಂದು ಹೋಗಬಹುದೇ ವಿನಃ ಅಲ್ಲಿ ಗಟ್ಟಿಯಾಗಿ ಕಾಲೂರಿ ನಿಲ್ಲುವಂತಿಲ್ಲ. ಬಾಲ್ಯದ ಮನೆಯನ್ನು ಕಳೆದುಕೊಳ್ಳುವ ಸಂಕಟ ಅವಳಿಗೆ. ಶಿಕ್ಷಣ, ಆರೋಗ್ಯ, ಆಟ-ಪಾಠಗಳಲ್ಲಿಯೂ ಸರಿಯಾದ ಸಮಾನತೆ ಸಿಗದೆ ಆಕೆ ಮದುವೆಗೆ ಸಿದ್ಧವಾಗುತ್ತಾಳೆ. ಆದುದರಿಂದ ಮದುವೆಯ ಮೂಲಕ ಒಂದು ಸಾಂಸ್ಕೃತಿಕ ಬಂಧನವನ್ನು ಬಿಚ್ಚಿಕೊಂಡು ಇನ್ನೊಂದು ನಡವಳಿಕೆಯ ಸಂಸ್ಕೃತಿಯ, ಆಚಾರ-ವಿಚಾರದ ಬಂಧನದ ಕುಟುಂಬಕ್ಕೆ ಹೋಗುವ ಮೂಲಕ ಪ್ರಾರಂಭವಾಗುತ್ತದೆ ಈ ಮಹಿಳಾ ಯಾತ್ರೆ...

ಹೀಗೆ ಹೊರಟ ಮಹಿಳೆಗೆ ಮೊದಲೇ ಹೇಳಿದಂತೆ ತನ್ನ ತಂದೆಯ ಮನೆಯಲ್ಲಿ ಆಸ್ತಿಯ ಹಕ್ಕು ಇರುವುದಿಲ್ಲ. ಆಯಾ ಕಾಲಕ್ಕೆ, ಋತುಮಾನಗಳನ್ನು ಅವಲಂಬಿಸಿ, ಒಲುಮೆ ನಿಲುಮೆಗಳನ್ನು ಹೊಂದಿಕೊಂಡು ಒಂದಿಷ್ಟು ಕೊಡುಗೆಗಳು ಸಿಕ್ಕರೆ ಅದೇ ಮಹಾಪ್ರಸಾದ. ಅದಕ್ಕೆ ಸೋದರರು ಬಿಡಬೇಕು – ಜೊತೆಗೆ ಅತ್ತೆ, ಅತ್ತಿಗೆಯರೆಂಬ ಮಹಿಳೆಯರೂ ಒಪ್ಪಬೇಕು. ಇತ್ತೀಚಿನ ದಿನಗಳಲ್ಲಿ ಕಾನೂನು ಆಸ್ತಿ ಹಕ್ಕುದಾರಿಕೆಯನ್ನು ಮಹಿಳೆಗೆ ನೀಡಿದರೂ ಅದು ವಾಸ್ತವದಲ್ಲಿ ಇನ್ನೂ ಸಂಪ್ರದಾಯ, ಕಟ್ಟುಕಟ್ಟಳೆಯನ್ನು ಮೀರಿ ಜಾರಿಗೆ ಬಂದಿಲ್ಲ.

೧೯ನೇ ಶತಮಾನದಲ್ಲಿ ಭಾರತದ ಸಾಮಾಜಿಕ ಪರಿವರ್ತನೆಯ ಚಿಂತಕರಿಗೆ 'ಮಹಿಳಾ ವಿಮೋಚನೆ' ಎಂಬುದು ಬಹುಮುಖ್ಯ ಆಂದೋಲನದ ವಿಷಯ. ಭಾರತದಲ್ಲಿ ತಮ್ಮ ಆಡಳಿತಕ್ಕೆ ರಾಜಕೀಯ ಸ್ಥಿರತೆಯನ್ನು ಕಂಡುಕೊಂಡ ಬ್ರಿಟಿಷರು ಇವರ ಒತ್ತಾಯದಿಂದ ಮಹಿಳಾ ಉನ್ನತಿಯ ಬಗ್ಗೆ ಸುದೀರ್ಘ ಪರಿಣಾಮ ಬೀರುವ ಅನೇಕ ಶಾಸನಗಳನ್ನು ತಂದರು – ಬಂಗಾಲ ಸತಿ ಕಾಯಿದೆ (೧೮೨೯), ಜಾತಿಪದ್ಧತಿ ವಿಮೋಚನಾ ಕಾಯಿದೆ (೧೮೫೦), ಹಿಂದೂ ವಿಧವಾ ಕಾಯಿದೆ (೧೮೫೬), ವಯಸ್ಸು ಸಮ್ಮತಿ ಶಾಸನ (೧೮೯೧) – ಮುಂತಾದುವು. ಈ ವಯಸ್ಸು ಸಮ್ಮತಿ ಕಾಯಿದೆಯ ಪ್ರಕಾರ ಹತ್ತು ವರುಷದ ಒಳಗಿನ ಹುಡುಗಿಯನ್ನು ಮದುವೆಯಾಗಬಾರದು. ಆಗಿನ ಕಾಲದಲ್ಲಿ ಖ್ಯಾತವಾಗಿದ್ದ ಪುಲುಮಾನಿದಾಸಿ ಪ್ರಕರಣ ಪುನಃ ಈ ಬಗ್ಗೆ ವಿಚಾರ ಮಾಡಲು ಪ್ರೇರೇಪಿಸಿತು. ಪುಲುಮಾನಿದಾಸಿ ಹನ್ನೊಂದು ವರುಷಕ್ಕೆ ಮದುವೆಯಾದಳು. ಆಕೆಗಿಂತ ಎಷ್ಟೋ ವರುಷ ದೊಡ್ಡವನಾದ ಆಕೆಯ ಗಂಡನ ಲೈಂಗಿಕ ಆಕ್ರಮಣದಿಂದ ಇನ್ನೂ ಮೈನೆರೆಯದ ಪುಲುಮಾನಿದಾಸಿ ರಕ್ತಸ್ರಾವದಿಂದ ಸತ್ತು ಹೋದಾಗ ಸಮಾಜ ಚಿಂತಕರು ಈ ಬಗ್ಗೆ ದೊಡ್ಡ ಆಂದೋಲನವನ್ನೇ ನಡೆಸಿದರು. ಸಂಪ್ರದಾಯಸ್ಥರ ವಿರೋಧದ ನಡುವೆಯೂ ಬ್ರಿಟಿಷ್ ಸರ್ಕಾರ ಹುಡುಗಿಯರ ಮದುವೆಯ ವಯಸ್ಸನ್ನು ಹನ್ನೆರಡು ವಯಸ್ಸಿಗೆ ಏರಿಸಿತು. ಆದರೆ ಅದೆಷ್ಟರ ಮಟ್ಟಿಗೆ ಜಾರಿಗೆ ಬಂದಿತೋ ನಾನರಿಯೆ.

ನಂತರ ರುಕುಮಾಬಾಯಿ ಮತ್ತು ದಾದೋಜಿಯವರ ಮೊಕದ್ದಮೆ ಹಿಂದೂ ಸಮಾಜ ಬೆಚ್ಚಿಬೀಳುವಂತೆ ಮಾಡಿತು. ರುಕುಮಾಬಾಯಿ ೧೧ ವರುಷಕ್ಕೆ ಮದುವೆಯಾಗಿದ್ದರೂ ದೊಡ್ಡವಳಾದ ಮೇಲೆ ಗಂಡ ದಾದೋಜಿಯ ಜೊತೆಗಿರಲು ನಿರಾಕರಿಸಿದಳು. ಈ ಸಂಬಂಧದ ಮೊಕದ್ದಮೆಯ ತೀರ್ಪಿನ ಪರಿಣಾಮವಾಗಿ ಹಿಂದೂ ವಿವಾಹ ಶಾಸನ (೧೯೫೫), ಹಿಂದೂ ದತ್ತು ಶಾಸನ (೧೯೫೬), ಹಿಂದೂ ಉತ್ತರಾಧಿಕಾರಿ ಶಾಸನ (೧೯೫೬) ಹೀಗೆ ಶಾಸನಗಳು ಬಂದು ಜನಜಾಗೃತಿಗೆ ಕಾರಣವಾದವು. ಈಗಿನ ಕಾಯಿದೆಯ (೧೯೭೮) ಪ್ರಕಾರ ಗಂಡು ಇಪ್ಪತ್ತೊಂದು ವರುಷಕ್ಕೂ, ಹೆಣ್ಣು ಹದಿನೆಂಟು ವರುಷಕ್ಕೂ ಕಡಿಮೆ ಇದ್ದರೆ ವಿವಾಹವಾಗುವಂತಿಲ್ಲ. ಹೆಣ್ಣು ಮತ್ತೊಂದು ಕುಟುಂಬಕ್ಕೆ ಯಾತ್ರೆ ಹೋಗುವ ಮದುವೆಯ ಈ ಯಾತ್ರೆಯಲ್ಲಿನ ಬದಲಾವಣೆಗಳಿಂದೇನೂ ಅವಳ ಸಮಸ್ಯೆ ಮೂಲತಃ ಬದಲಾಯಿಸಿಲ್ಲ. ಹೀಗಾಗಿ ಈಗಲೂ ಅನ್ಯ ಕುಟುಂಬಕ್ಕೆ ಹೋದ ಮಹಿಳೆ ಅಲ್ಲೂ ಅನ್ಯಳಾಗುತ್ತಾಳೆ. ಗರ್ಭ ಧರಿಸದಿದ್ದರೆ, ಬರೇ ಹೆಣ್ಣು ಶಿಶುವಿಗೆ ಜನ್ಮ ನೀಡಿದರೆ ಆಕೆಯ ಘೋರ ಸಂಕಟಗಳ ಬಾಗಿಲು ತೆಗೆದಂತೆ. ಅವಳ ಭಾಗ್ಯದ ಬೆಳಕು ತುಸು ತೆರೆಯುವುದು ಅವಳು ಗಂಡು ಮಗುವಿಗೆ ಜನ್ಮವಿತ್ತಾಗ ಮಾತ್ರ. ಯಾಕೆಂದರೆ ಗಂಡು ಮಗು ವಂಶದ ಉದ್ಧಾರಕ. ಹೀಗಾದರೆ ಮಾತ್ರ ಆಕೆ ಕಾಲ ಕ್ರಮೇಣ ಅತ್ತೆಯಾಗಿ ರೂಪಾಂತರಗೊಳ್ಳುವುದು. ಅತ್ತೆಯ ಸ್ಥಾನವನ್ನು ಆಕ್ರಮಿಸಿ ಆಕೆ ಅಧಿಕಾರದಿಂದ ವಿಜೃಂಭಿಸುವುದು, ದರ್ಪ ತೋರುವುದು ಒಂದು ಸೋಜಿಗ. ಸೊಸೆಯಂದಿರಲ್ಲೇ ಹಿರಿಯ ಸೊಸೆ

ಸ್ಥಾನಮಾನ ಬೇರೆ.... ಕಿರಿ ಸೊಸೆ ಸ್ಥಾನಮಾನ ಬೇರೆ... ಕೆರೆಗೆ ನೀರು ಬರಲಿಲ್ಲ ಎಂದು ಬಲಿ ಕೊಟ್ಟಿದ್ದು ಮಹಿಳೆಯನ್ನು, ಅದರಲ್ಲೂ ಕಿರಿ ಸೊಸೆಯನ್ನು... ಸ್ಥಳೀಯ ಸಾಹಿತ್ಯ, ಜಾನಪದದ ಹಾಡು, ಚಲನಚಿತ್ರ, ದೂರದರ್ಶನ ಧಾರಾವಾಹಿಗಳು ಇವುಗಳನ್ನೇ ವಿಜೃಂಭಿಸುತ್ತಾ ಮಹಿಳೆಯರ ಮತ್ತಷ್ಟು ಶೋಷಣೆಗೆ ಪರೋಕ್ಷವಾಗಿ ಕಾರಣವಾಗುವುದು... ಆಸ್ತಿ ಹರಿದು ಹಂಚಿಹೋಗದಿರಲೆಂದು ಬಹುಶಃ ತಮ್ಮ ತಮ್ಮೊಳಗೆ ಮದುವೆಯಾಗುವ ಪದ್ಧತಿ ಜಾರಿಗೆ ಬಂದಿರಬೇಕು. ಈ ಎಲ್ಲಾ ಕಾರಣಗಳಿಂದ ಕನ್ಯೆಯ ತಂದೆ ಗಂಡಿನ ತಂದೆಯ ಮುಂದೆ ಯಾವತ್ತೂ ಅಂಜಲೀಬದ್ಧನಾಗಿರುತ್ತಿದ್ದ... ತಂದೆಯೇ ಹೀಗೆ ಬಗ್ಗಿ ನಿಂತ ನಂತರ ಯಾವ ವಧುವಿಗೆ ತಾನೇ ಮಾವನನ್ನು ಎದುರಿಸುವ ಶಕ್ತಿ, ಸಾಮರ್ಥ್ಯ ಬರಲು ಸಾಧ್ಯ?

ಮಹಿಳೆಯರು ಇಡೀ ಕುಟುಂಬದ ಆಧಾರಸ್ತಂಭ. ಹೊರುವ, ಹೆರುವ, ಸಾಕುವ, ಸಲಹುವ ಪಾತ್ರ. ಆಕಸ್ಮಿಕವಾಗಿ ಏನೋ ಕಾರಣದಿಂದ ಎಷ್ಟೋ ಸಲ ಗಂಡಸರ ಭಿನ್ನಾಭಿಪ್ರಾಯದಿಂದ ಕುಟುಂಬ ಒಡೆದರೆ ಸಮಾಜ ಹೀಗಳೆಯುವುದು ಮಾತ್ರ ಹೆಣ್ಣನ್ನೇ. 'ನೂರು ಜುಟ್ಟು ಒಂದಾದರೆ, ಎರಡು ಜಡೆ ಒಂದಾಗುವುದಿಲ್ಲ' ಎಂಬ ಗಾದೆ ಮಾತು ಮಹಿಳೆಯರನ್ನು ಕಲಹಪ್ರಿಯರೆಂದು ಪ್ರತಿಬಿಂಬಿಸುತ್ತದೆ. ನೊಬೆಲ್ ಪ್ರಶಸ್ತಿ ಪುರಸ್ಕೃತ ಅಮರ್ತ್ಯಸೇನ್‌ರ ಪ್ರಕಾರ ''ಕುಟುಂಬದ ಆರ್ಥಿಕ ಸ್ಥಿತಿ ಸುಧಾರಿಸಿದ್ದರೂ ಗಂಡು ಹೆಣ್ಣನ್ನು ನಡೆಸಿಕೊಳ್ಳುವ ರೀತಿಯಲ್ಲಿ ಏನೂ ಬದಲಾವಣೆಯಾಗಿಲ್ಲ. ಅವರ ನಡುವಿನ ತಾರತಮ್ಯ ಹೆಚ್ಚೇ ಆಗಿದೆ.'' ಶಿಕ್ಷಣ ಕೊಡುವಲ್ಲಿ, ಆರೋಗ್ಯದ ರಕ್ಷಣೆಯಲ್ಲಿ, ಇನ್ನಿತರ ಕ್ಷೇತ್ರಗಳಲ್ಲಿ ಈ ತಾರತಮ್ಯ ನಿರಂತರವಾಗಿದೆ.

ಹೊರಗಡೆ ಯಾವುದಾದರೂ ಸಂಘ ಸಂಸ್ಥೆ, ಕಛೇರಿಗಳಲ್ಲಿ ಕೆಲಸ ಮಾಡುವ ಮಹಿಳೆಯರಿಗೆ ಕುಟುಂಬದ ಭಾರವೂ ಇದ್ದೇ ಇರುತ್ತದೆ. ಅವರು ಅಲ್ಲೂ ಸಲ್ಲಬೇಕಾಗುತ್ತದೆ, ಇಲ್ಲೂ ಸಲ್ಲಬೇಕಾಗುತ್ತದೆ. ತಮ್ಮ ಸೇವಾವಧಿಯಲ್ಲಿ ಸಿಗುವ ಉನ್ನತಿಯನ್ನೇ ಅವರು ನಿರಾಕರಿಸುವುದು ಬಹಳ ಸಲ ಅನಿವಾರ್ಯವಾಗುತ್ತದೆ. ಕಚೇರಿ ಮತ್ತು ಮನೆಗಳೆರಡರಲ್ಲೂ ಶ್ರಮಿಸುವ ಮಹಿಳೆಗೆ ಮತ್ತೊಂದು ಮಹಿಳೆ ಕುಟುಂಬದಲ್ಲಿ (ಅತ್ತೆ, ಅಜ್ಜಿ) ಇದ್ದರೆ ತುಂಬಾ ಸಹಾಯವಾಗುತ್ತದೆ ಎಂದೇ ಭಾವಿಸುತ್ತಾಳೆ. ಆದರೆ ಮತ್ತೊಂದು ಮಹಿಳೆ ಕುಟುಂಬದೊಳಗೆ ಇದ್ದಾಗ ಪುನಃ ಕುಟುಂಬದ ಸಂಬಂಧಗಳಲ್ಲಿ ಬೇರೆ ರೀತಿಯ ಪರಿಣಾಮ ಬೀರುತ್ತದೆ.

ಕುಟುಂಬದ ಎಲ್ಲ ದುಃಖಗಳನ್ನು, ದುಮ್ಮಾನಗಳನ್ನು, ಹಿಂಸೆಯನ್ನು, ಅವಮಾನಗಳನ್ನು ಮಹಿಳೆ ತನ್ನಲ್ಲಿಯೇ ನುಂಗಿಕೊಂಡು ನೀರು ಕುಡಿಯುತ್ತಾಳೆ. ಕುಟುಂಬ ಎಂಬುದು ಆಕೆಗೆ ಕೆಡವಲಾರದ ಪವಿತ್ರತೆಯ ಗೂಡು. ಆದುದರಿಂದ ತನ್ನ ಗಂಡ ಹೊಡೆದಾಗ, ಉಳಿದವರಿಂದ ಅಸಹನೀಯ ಹಿಂಸೆಯಾದಾಗ, ಕೊನೆಗೆ ಗಂಡ 'ನಪುಂಸಕ'ನಾದಾಗಲೂ 'ಬಂಜೆ ಎಂಬ ಪಟ್ಟವನ್ನು ತಾನೇ ಕಟ್ಟಿಕೊಳ್ಳುತ್ತಾಳೆಯೇ ವಿನಃ ಕುಟುಂಬದ ರಹಸ್ಯವನ್ನು ಬಹಳ ಜತನದಿಂದ ಕಾಯ್ದುಕೊಳ್ಳಲು ನಿರಂತರ ಹೆಣಗುತ್ತಾಳೆ ; ಮೌನವಾಗಿ ಕುಟುಂಬವನ್ನು ಸಂರಕ್ಷಿಸುತ್ತಾಳೆ. ಆದರೆ ಈ ಮೌನ ಸಂಸ್ಕೃತಿಯನ್ನು ಮಹಿಳೆ ಒಡೆದು ಹೊರಬಂದು ಜೀವನದಿಯಾಗಬೇಕು.

ವಿಶ್ವಸಂಸ್ಥೆಯು ೧೯೯೪ನೇ ವರ್ಷವನ್ನು 'ಅಂತಾರಾಷ್ಟ್ರೀಯ ಕುಟುಂಬ ವರುಷ' ವೆಂದು ಪರಿಗಣಿಸಿ ''ಸಮಾಜದ ಹೃನ್ಮಧ್ಯದಲ್ಲಿ ಒಂದು ಪುಟ್ಟ ಪ್ರಜಾಪ್ರಭುತ್ವವನ್ನು ಕಟ್ಟುವುದು'' ಎಂಬ ಘೋಷಣೆಯನ್ನು ಹೊರಡಿಸಿತು. ಕುಟುಂಬದ ನಾಶ ಸಮಾಜದ ನಾಶವೆಂದು ಪರಿಗಣಿಸಿ ಕುಟುಂಬದ ಅಂತರಾಳದ ಶಕ್ತಿಯನ್ನು ಪ್ರೋತ್ಸಾಹಿಸಲು ಕ್ರಮ ತೆಗೆದುಕೊಳ್ಳಬೇಕೆಂದು ಕರೆ ಇತ್ತಿತು.

ಕಲ್ಯಾಣ ರಾಜ್ಯದ ಪರಿಕಲ್ಪನೆಗಳು ಆರಂಭವಾದಾಗ, ತನ್ಮೂಲಕ ಸರ್ಕಾರ ಸಮಾಜದ ಹಿತರಕ್ಷಣೆಗೆ ಬದ್ಧವಾದಾಗ ಕುಟುಂಬಕ್ಕೂ ಸರ್ಕಾರಕ್ಕೂ ಒಂದು ಅವಿನಾಭಾವ ಸಂಬಂಧ ಏರ್ಪಟ್ಟಿತು. ಈಗ ಸರ್ಕಾರದ ಕೆಲಸ ಬಹುಮುಖಿಯಾಗಿದೆ. ವ್ಯಕ್ತಿಗಳಿಗೆ ಶಿಕ್ಷಣ, ಆರೋಗ್ಯ, ಸಂಪರ್ಕ, ರಕ್ಷಣೆ ಮುಂತಾದ ಸೌಲಭ್ಯ ನೀಡುವ ಜವಾಬ್ದಾರಿ ಸರ್ಕಾರಕ್ಕೆ ಬಂದಿದೆ. ಈ ಎಲ್ಲಾ ಕ್ಷೇತ್ರಗಳಲ್ಲೂ ಕುಟುಂಬ ಸರ್ಕಾರವನ್ನು ಅವಲಂಬಿಸಿರುತ್ತದೆ. ನಮ್ಮ ಸರಾಸರಿ ಆಯುಷ್ಯ ಹೆಚ್ಚಾಗಿರುವುದರಿಂದ, ಇನ್ನು ಮುಂದೆ ವೃದ್ಧಾಪ್ಯದ ಸಮಸ್ಯೆ - ವೃದ್ಧ ಮಹಿಳೆಯರ - ಸಮಸ್ಯೆ ಭೀಕರ ರೂಪು ತಾಳಬಹುದು. ಹೀಗಾಗಿ ಬರಿಯ 'ಜೀವನ, ಸ್ವಾತಂತ್ರ್ಯ, ಆಸ್ತಿಯ ಪೋಷಣೆ'ಗಾಗಿ ಅವತರಿಸಿದ ಸರ್ಕಾರದ ಕಲ್ಪನೆ ಈಗ ಸಾಲದಾಗಿದೆ. ಗುಜರಾತಿನಲ್ಲಿ ನಡೆಸಿದ ಸಮೀಕ್ಷೆಯ ಪ್ರಕಾರ ಶೇಕಡಾ ೬೧ ರಿಂದ ೭೫ ವೃದ್ಧ ಮಹಿಳೆಯರು ತಮ್ಮ ಮಗ ತಮ್ಮನ್ನು ಸಾಕಬೇಕೆಂದು, ಶೇಕಡಾ ೮ ರಿಂದ ೧೫ ವೃದ್ಧ ಮಹಿಳೆಯರು ತಮ್ಮ



ಕಾಲ ಕೆಟ್ಟೇ ಹೋಯ್ತು ಸ್ವಾಮಿ..
ಇಷ್ಟೊತ್ತು ತಪಸ್ಸು ಮಾಡಿದರೂ
ದೇವ್ರು ಬರಲಿಲ್ಲ.. ರಂಭೆಯೂ ಇಲ್ಲ?

ಮಗಳು ಸಾಕಬೇಕೆಂದು ಬಯಸುತ್ತಾರೆ. ವೃದ್ಧಾಶ್ರಮದಲ್ಲಿ ಬದುಕುತ್ತೇವೆ ಎಂಬುವವರು ತೀರಾ ಕಡಿಮೆ. ಆ ಮಟ್ಟಿಗಾದರೂ ನಾವು ಪರದೇಶಾನುಕರಣೆಗಳಾಗಿಲ್ಲ. ಕುಟುಂಬ ವ್ಯವಸ್ಥೆಯ ಜೀವಾಳ ಇದು. ಹಿಂದಿನ ಕಾಲದಲ್ಲಿ ಮದುವೆಯಾಗುವಾಗ, ಗಂಡು-ಹೆಣ್ಣಿನ ಅಂತರ ತುಂಬಾ ದೂರ ಇದ್ದಾಗ, ಬಾಲ್ಯವಿವಾಹ ಇದ್ದ ಕಾಲದಲ್ಲಿ ಗಂಡ ಸತ್ತು ಹೋದ ನಂತರವೂ ನಾಲ್ಕು-ಐದು ದಶಕಗಳು ಅನಾಥರಾಗಿ, ವೃದ್ಧಾಪ್ಯವಾದರೂ ಪರಾವಲಂಬಿಯಾಗಿ, ಅಭದ್ರತೆಯಿಂದ ನರಳಿದ ವಿಧವೆಯರ ಲೋಕ ನಮ್ಮ ನೆನಪಿನ ಕಣ್ಣ ಮುಂದೆ ಇನ್ನೂ ಮಾಸಿಲ್ಲ. ಕಲ್ಯಾಣ ರಾಜ್ಯದ ಪರಿಕಲ್ಪನೆಯಲ್ಲಿ 'ವೃದ್ಧಾಪ್ಯ ಭತ್ಯೆ'ಯನ್ನು ಅಸಹಾಯಕರಿಗೆ ನೀಡುತ್ತಿದ್ದರೂ ಇದು ವ್ಯಾಪಕ ಪರಿಹಾರವನ್ನು ತಂದುಕೊಟ್ಟಿಲ್ಲ.

ಒಂದು ಕಾಲದಲ್ಲಿ 'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ' ಎಂದು ಇದ್ದುದು ಕೊನೆಗೆ ಮನು ಮಹಾರಾಯನ ಕಾಲದಲ್ಲಿ 'ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ! ಪುತ್ರೋ ರಕ್ಷತಿ ವಾರ್ಧಕ್ಯೇ, ನ ಸ್ತ್ರೀ ಸ್ವಾತಂತ್ರ್ಯಮರ್ಹತಿ॥' ಎಂದು ಮಹಿಳೆಯರು ಸ್ವಾತಂತ್ರ್ಯಕ್ಕೆ ಅರ್ಹರಲ್ಲ ಎಂಬ ಪರಿಪಾಠ ಬಂದುಬಿಟ್ಟಿತು. ಇನ್ನೂ ಮುಂದೆ ಹೋಗಿ '೩೦ ವರುಷದ ಗಂಡಸು ೧೨ ವರ್ಷದವಳನ್ನು, ೨೪ ವರ್ಷದವನು ೮ ವರ್ಷದಾಕೆಯನ್ನು ವರಿಸಬೇಕೆಂದು' ಮನು ಮಹಾಶಯ ಹೇಳಿ ಮಹಿಳೆಯರನ್ನು ಶೋಷಣೆಯ ಜಗತ್ತಿಗೆ ತಲುಪಿಸಿಬಿಟ್ಟ.

ಮದುವೆಯಾದ ಹೆಣ್ಣು 'ಗಂಡನಿಗೆ ತಾಯಿಯಂತೆ, ಮಂತ್ರಿಯಂತೆ, ದಾಸಿಯಂತೆ, ಸೂಳೆಯಂತೆ ಇರಬೇಕು' ಎಂದು ಶ್ಲೋಕ ಸಾರಿಬಿಟ್ಟಿದೆ. ಒಂದು ಅರ್ಥದಲ್ಲಿ ಇದಕ್ಕೆ ವಿಶಾಲ ಅರ್ಥವಿದೆ. ಸಮಾನತೆಯ ಛಾಯೆ ಇದೆ. ಬುದ್ಧಿಮತ್ತೆಗೆ ಅರ್ಥವಿದೆ. ಆದರೆ ಇದು ಗಂಡಿಗೂ ಅನ್ವಯವಾದಾಗ ಇದರ ಹೊಳಪು ಹೆಚ್ಚಾಗುತ್ತದೆ.

ಹೆಣ್ಣನ್ನು ಹಿಂಸಿಸುವುದು ಒಂದು ಕಾಲದ ಸಂಸ್ಕೃತಿಯಾಗಿಬಿಟ್ಟಿರಬೇಕು. ಪ್ರವಾಹದ ಜೊತೆಗೇ ಹೋಗುವ ಪರಿಪಾಠವನ್ನು ಅನೇಕರು ಬೆಳೆಸಿಕೊಂಡಿರಬೇಕು. ನಮ್ಮಲ್ಲಿ ದಾಸರ ಪದಗಳು ಹೇಳುತ್ತವೆ : ''ಹೆಂಡತಿ, ಪ್ರಾಣ ಹಿಂಡುತಿ'', ''ಮಡದಿ ಮಕ್ಕಳ ಮರೆಯೆ ಮಹಾದೇವ ಮೆಚ್ಚುವನು''. ಕ್ರೈಸ್ತ ಧರ್ಮದ ಭಕ್ತ ಸಾಧುಗಳೂ ''ನಾರಿ ನರಕಕ್ಕೆ ದಾರಿ, ನಾರಿ ಮಹಾಮಾರಿ'' ಎಂದು ಹಾಡಿದ್ದಾರೆ ! ಅಷ್ಟೇ ಏಕೆ ''ಹೆಂಗಸು ದೇವರ ಸೃಷ್ಟಿಯೋ, ಸೈತಾನನ ಸೃಷ್ಟಿಯೋ'' ಎಂಬ ವಿಷಯದ ಮೇಲೆ ಈ ಮತಾನುಯಾಯಿಗಳಲ್ಲಿ ಒಮ್ಮೆ ನಿರಂತರ ವಾದ-ವಿವಾದ ನಡೆಯಿತಂತೆ !!

ರಾಮ ಭಕ್ತರಾದ ತುಳಸಿದಾಸರೂ ಸಹ,

*ಢೋಲ ಗಂವಾರ ಶೂದರ ಶಿಶು ನಾರಿ ॥*

*ಯಃ ಸಬ ತಾಡನ ಕೇ ಅಧಿಕಾರಿ ॥*

ಎಂದು ಬರೆದಿದ್ದಾರೆ. ಡೋಲು, ಹಳ್ಳಿಗಾರ, ಶೂದ್ರ, ಶಿಶು, ನಾರಿ - ಇವರೆಲ್ಲರೂ ತಾಡನ ಮಾತ್ರಕ್ಕೇ ಅಧಿಕಾರಿಗಳಂತೆ. ಡೋಲನ್ನು ಬಡಿದು ನಡೆಸಬೇಕು, ಹಾಗೇ ಇವರನ್ನೆಲ್ಲ ಹೊಡೆದು ನಡೆಸಬೇಕು – ಎಂದೀ ಮಹಾಸುಭಾವನ ಮತ !

ಡಾ॥ ರಾಮಮನೋಹರ ಲೋಹಿಯಾ ಬರೆಯುತ್ತಾರೆ: ''ಒಮ್ಮೆ ಕಾಫಿ ಹೌಸ್ ಒಂದರಲ್ಲಿ ಕೂತು ಕೆಲವರ ಜೊತೆ ಹರಟುತ್ತಿದ್ದೆ. ಇಂಥ ಕಾಫಿ ಟೇಬಲ್ ಮಾತುಗಳೇ ಫ್ರೆಂಚ್ ಕ್ರಾಂತಿಯನ್ನು ಬೆಳೆಸಿದವೆಂದು ಅವರಲ್ಲೊಬ್ಬ ಹೇಳಿದ. ನನಗೆ ಸಿಟ್ಟಿನಿಂದ ಮೈ ಉರಿಯತೊಡಗಿತು. ಅಲ್ಲಿ ನೋಡಿದರೆ ನಮ್ಮ ಜೊತೆ ಒಬ್ಬ ಶೂದ್ರನಾಗಲಿ, ಹೆಣ್ಣು ಮಗಳಾಗಲಿ ಇರಲಿಲ್ಲ. ಇಂಥ ನಿರ್ಜೀವ ಗುಂಪಿನಲ್ಲಿದ್ದ ನಮ್ಮಂಥ ಗೊಡ್ಡು ಜನರೆಲ್ಲ ನಿನ್ನೆಯ ಮೇವನ್ನು ಸುಮ್ಮನೆ ಮೆಲಕು ಹಾಕುತ್ತಿದ್ದ ದನಗಳಂತಿದ್ದೆವು.

ದಿನವಿಡೀ, ವರ್ಷವಿಡೀ ನಿರಂತರವಾಗಿ ದುಡಿಯುವ ಎಲ್ಲಾ ಮಹಿಳೆಯರ 'ಪ್ರೀತಿ'ಯ ಗಂಡಂದಿರನ್ನು ಕಂಡು 'ನಿಮ್ಮ ಹೆಂಡತಿಗೆ ಏನು ಕೆಲಸ' ಎಂದು ಕೇಳಿ, ಥಟ್ಟನೆ ಉತ್ತರ ಬರುತ್ತದೆ. – ''ಅವಳು ಕೆಲಸ ಏನೂ ಮಾಡಲ್ಲ ಮನೆಯಲ್ಲಿದ್ದಾಳೆ.''

ನಮ್ಮ ಸಮಾಜದಲ್ಲಿರುವ ಕೆಸರು ರಾಡಿಯನ್ನೆಲ್ಲ ತೆಗೆದು ನೀರು ಸರಾಗವಾಗಿ ಹರಿದು ಸಮಾಜ ನಿರ್ಮಲವಾಗಬೇಕಾದರೆ ಮಹಿಳೆಯರು ಜೀವನದಿಗಳಾಗಿ ತುಂಬಿ ಹರಿಯುವಂತಾಗಬೇಕು.

**ಡಾ॥ ಜಯಪ್ರಕಾಶ ಮಾವಿನಕುಳಿ**
'ಮಾವಿನಕುಳಿ ಮನೆ', ಮೂಡುಬಿದಿರೆ - ೫೭೪೨೨೭, ದಕ್ಷಿಣ ಕನ್ನಡ ಜಿಲ್ಲೆ

**ಸೂ**ರ್ಯ ಪಶ್ಚಿಮಕ್ಕೆ ಹೊರಟಾಗಲೆಲ್ಲ ನಿನ್ನ ನೆನಪು ಕಾಡುತ್ತದೆ!

ಸುರರೇ ನಾಚುವಂತೆ ನಿನ್ನ ಕೀರ್ತಿ ಮೂರು ಲೋಕಗಳಲ್ಲೂ ಹರಡಿ ನೀನು ನಡೆದ ಸ್ಥಳದಲ್ಲೆಲ್ಲ ಹೂಮಳೆ ಸುರಿಯುತ್ತಿತ್ತು. ನಿನ್ನ ತುಂಬುಗೆನ್ನೆಯ ಮೇಲಿನ ಹೊಳೆವ ಕಣ್ಣುಗಳು ಇರುಳು ತಾರೆಗಳನ್ನು ನೆನಪಿಸುತ್ತಿದ್ದವು. ನೆಪ ಮಾತ್ರಕ್ಕೆ ನಿನ್ನೆದೆ ಏರಿದ್ದ ಆಭರಣಗಳು ನಡೆಯುತ್ತಿದ್ದರೆ ಹೆಜ್ಜೆಗಳ ಲಯಕ್ಕೆ ತಕ್ಕಂತೆ ನಾದ ಹೊರಡಿಸುತ್ತಿತ್ತು. ನಿನ್ನ ಮೋಹಕ ಮಂದಹಾಸದ ನಗೆ ಕಂಡವರ ಎದೆಯಲ್ಲಿ ಮದನನ ಬಾಣದಂತೆ ನಾಟಿ ಕಚಗುಳಿ ಇಡುತ್ತಿತ್ತು. ರಾಜಲಕ್ಷಣದಂತೆ ನಿನ್ನ ನಡು ಬಳಸಿ ಬೆಳಕಿಗೆ ಪಳ ಪಳನೆ ಹೊಳೆವ, ಕಂಡವರ ತೊಡೆ ನಡುಗಿಸುವಂತಿದ್ದ ಖಡ್ಗ ನಿನ್ನ ಮಡಿಲೇರಿದ್ದಕ್ಕೆ ತನಗೆ ತಾನೆ ಹೆಮ್ಮೆ ಪಟ್ಟುಕೊಳ್ಳುತ್ತಿತ್ತು.

ನಿನಗೆ ನೆನಪಿದೆಯಾ ಯಶೋಧರ..........ಆ ರಾತ್ರಿ!

ಹೂಗಳು ಚೆಲ್ಲಿದ ಮಂಚದ ಮೇಲೆ ಕಣ್ಣರಳಿಸಿ ನಿನ್ನ ಬರುವಿಕೆಗಾಗಿ ಎದುರು ನೋಡುತ್ತಿದ್ದೆ. ಆ ಮಂದ ಬೆಳಕಿನ ಮೋಹಕ ಕೋಣೆಯಲ್ಲಿ ಪ್ರತಿ ದಿನವೂ ಹೀಗೆಯೇ ಕಾಯುತ್ತಿದ್ದೆ. ಆದರೆ ಅಂದೇಕೊ ರವಿಯ ದರ್ಶನಕ್ಕೆ ಕಾತರಗೊಳ್ಳುವ ತಾವರೆಯಂತೆ ಚಡಪಡಿಸಿತು ನಿನ್ನ ಕಾಣಲು ನನ್ನ ಮನ.

ಅಷ್ಟರಲ್ಲಿ ಆ ಮಾದಕ ಕೋಣೆಯಲ್ಲಿ ಬೆಳದಿಂಗಳಂತೆ ಬೆಳಕು ಚೆಲ್ಲಿ ಕಂಗೊಳಿಸಿ ನಿನ್ನ ಆಗಮನವನ್ನು ಸೂಚಿಸಿತು. ಆಗ ನಮ್ಮ ಮಿಲನದ ಸುಳಿವು ಸಿಕ್ಕಂತೆ ಕೋಣೆಯಲ್ಲಿ ಚೆಲ್ಲಿದ್ದ ಚಂದನ ಪರದೆಗಳನ್ನು ದಾಟಿ ಬಂದ ತಂಗಾಳಿಯೊಡನೆ ಸರಸವಾಡುತ್ತಿತ್ತು. ಎದುರುಗೊಂಡ ನಾನು ನನ್ನೆರಡು ಕೈಗಳಿಂದ ನಿನ್ನ ಕೊರಳ ಬಳಸಿದೆ. ನಿನ್ನ ಕೈಗಳಿಂದ ನನ್ನ ನಡು ಬಳಸಿ ಹೊಳೆವ ನಿನ್ನ ಕಣ್ಗಳಿಂದ ನನ್ನ ಸೆಳೆದುಕೊಂಡೆ. ಪಳಗಿದ ತೋಳುಗಳಿಂದಪ್ಪಿ ನನ್ನೊಳಗೆ ಕಾವೇರಿಸಿದೆ. ತುಟಿಗೆ ತುಟಿ ಬೆರೆತು ಕಣ್ಣು ಮುಚ್ಚಿದ ನನಗೆ ಯಾವುದೋ ಮಾಯಾಲೋಕದಲ್ಲಿ ವಿಹರಿಸಿದಂತೆ ನನ್ನ ನೆತ್ತರು ಲಾವಾರಸವಾಗಿ ಕುದಿಯಲಾರಂಭಿಸಿತು. ರತಿ ವೀಣೆಯನ್ನು ಮೀಟಿದಾಗ ಎದೆಯುಬ್ಬಿ ಬಿಸಿಯುಸಿರು ಹೊರ ಬರತೊಡಗಿತು. ಎಷ್ಟೋ ಭವಗಳ ಸುಖವನ್ನು ಒಂದೇ ಬಾರಿ ಪಡೆದಂತೆ ದೇಹವೆಲ್ಲಾ ಬೆವರಿತು. ಎಂತಹ ಅದ್ಭುತ ಆ ಕ್ಷಣಗಳು! ಆ ಮಧುರ ಕ್ಷಣದಲ್ಲಿ ನನ್ನ ದೇಹವೆಲ್ಲ ನಿನಗೆ ಅರ್ಪಿಸಿಬಿಟ್ಟೆ..!

ಸಂಭೋಗದ ಗತ್ತಿಗೆ ಪರವಶತೆಗೊಂಡು ಪರಸ್ಪರ ಅಚ್ಚಳಿಯದಂತೆ ನಮ್ಮಿಬ್ಬರ ತೋಳುಗಳು ಹೆಣೆದುಕೊಂಡಿದ್ದವು. ಆಗಲೇ....ಯಶೋಧರ.... ನನ್ನನ್ನು ಬಡಿದೆಬ್ಬಿಸಿತು ಆ ರಾಗ.... ಅವನು ಹೊರಡಿಸಿದ್ದ ಅದು ಅಪರೂಪದ ಮಾಳವ ಶ್ರೀರಾಗ.... ಅವನು ಹಾಡುತ್ತಿದ್ದ ಹಾಡು ನನ್ನನ್ನು ಮಾದಕ ವಸ್ತುವಿನಂತೆ ಆವರಿಸಿಬಿಟ್ಟಿತು. ಶತ್ರುಗಳ ಫಿರಂಗಿ ದಾಳಿಗೆ ಸಿಕ್ಕ ಕೋಟೆಯಂತೆ ಜರ್ಜರಿತವಾಯಿತು ನನ್ನ ಮನಸ್ಸು, ಚಡಪಡಿಸಿದೆ ಬಲೆಗೆ ಸಿಕ್ಕ ಹಕ್ಕಿಯಂತೆ. ಬೆಳಗಾಗುವುದನ್ನೆ ಕಾಯುತ್ತಿದ್ದೆ ಅವನನ್ನು ಕಾಣಲು ಬೆಳದಿಂಗಳಿಗಾಗಿ ಕಾಯುವ ಚಕೋರಿಯಂತೆ.... ಹಾತೊರೆದೆ, ಅವನನ್ನು ಕೂಡಲು ಕಡಲು ಸೇರಲು ಹಾತೊರೆಯುವ ನದಿಯಂತೆ....

ಅಷ್ಟೇ ಯಶೋಧರ....! ನನ್ನ ಮನಸ್ಸನ್ನು ಅವನಿಗೆ ಅರ್ಪಿಸಿಬಿಟ್ಟೆ...!

ಹಳೆಯ ದೊಡ್ಡ ಬಂಗಲೆಯಲ್ಲಿ ಚಿಕ್ಕ ಚಿಕ್ಕ ಕೋಣೆಯಲ್ಲಿ ದೀಪಗಳು ಚೆಲ್ಲುವ ಮಂದ ಬೆಳಕು ನಾವು ಜೀವಂತವಾಗಿರುವ ಸಂಕೇತದಂತೆ ತೋರುತ್ತಿರುತ್ತದೆ. ಬಂದು ಹೋಗುವ ಗಿರಾಕಿಗಳನ್ನು ಅವನ ಮನೋಇಚ್ಛೆಯಂತೆ ತಣಿಸಿ ಅವನು ಎಸೆದು ಹೋಗುವ ಒಂದಿಷ್ಟು ಹಣದಿಂದಲೇ ಸಾಗಬೇಕು ಜೀವನ. ನಮ್ಮ ಕನಸು ಬರೀ ಅಡ್ಡೆಯಲ್ಲೆ ಅಲ್ಲಾ! ಒಮ್ಮೊಮ್ಮೆ ಜುಗಾರಿ ನಡೆಯುವ ಅಡ್ಡೆಗಳಿಗೂ ನಡೆಯುತ್ತದೆ ನಮ್ಮ ಸವಾರಿ.

ಇರುಳು ಕಳೆದರೆ ಸಾಕು! ದಾಪುಗಾಲಿನಲ್ಲಿ ಮನೆಯಕಡೆ ಓಡುತ್ತೇನೆ. ತಡವಾದರೆ ಮೈ ಚರ್ಮ ಹರಿಯುವಂತೆ ಹೊಡೆಯುತ್ತಾನೆ.

ಓ.... ನನ್ನ ಮನೆ ಎಲ್ಲಿದೆಯೆಂದು ಹೇಳಲಿಲ್ಲ ಅಲ್ಲವೆ!

ಹೊಡೆದ ಜಡಿಮಳೆಗೆ ಕಾಲಿಟ್ಟರೆ ಸಾಕು ಬೆರಳ ಸಂದಿಗಳಿಂದ ಪಚಕ್ಕನೆ ಎರಗುವ ಕೆಸರು. ಅರ್ಧ ದೇಹವನ್ನು ಕೆಸರಿನಲ್ಲಿ ಎಸೆದು ಮಕ್ಕಳೂ, ದೊಡ್ಡವರೂ ಮಾಡುವ ಪಾಯಿಖಾನೆಗೆ ಅರೆ ನಿದ್ರೆಯಲ್ಲಿ ಹೊಂಚು ಹಾಕುತ ಮಲಗಿರುವ ನಾಯಿಗಳ ಗುಂಪು. ಮಾಡಲು ಕೆಲಸವಿಲ್ಲದೆ ಮಾಸಲು ಬೀಡಿಯನ್ನೂ, ಗಾಂಜಾವನ್ನೂ ಸೇದುತ್ತ ಹೆಂಡಿರ ಎಂಜಲಿಗೆ ಕಾದ ಸೋಮಾರಿ ಗಂಡಸರ ತಾಣದ, ಹಂದಿಗಳ ಗೂರ್....ಗೂರ್.... ಸದ್ದಿನಿಂದ.... ಕ್ಷಮಿಸು....ನಿನಗೆ ಹಂದಿ ಎಂದರೆ ಕೋಪ ಬರುವುದೇನೋ.... ಇವುಗಳ ನಡುವೆ ಸಾಲುಸಾಲಾಗಿ ಗೋಪುರಗಳಂತೆಯೊ, ಗೋರಿಗಳಂತೆಯೊ ಎದ್ದು ನಿಂತ ಜೋಪಡಿಗಳಲ್ಲಿ ನಮ್ಮದು ಒಂದು. ನಾವು ಅದನ್ನು ಮನೆಯೆಂದೆ ಕರೆದುಕೊಳ್ಳುತ್ತೇವೆ. ಇಲ್ಲಿಯೇ ಗಾಂಜಾವನ್ನೊ, ಸೇಂದಿಯನ್ನೊ ಕುಡಿಯುತ್ತಾ ಮಲಗಿರುವ ಅಲ್ಲಲ್ಲಿ ಕೂದಲು ಕಿತ್ತು, ತೊನ್ನು ಹತ್ತಿದ ಚರ್ಮ, ಹಕ್ಕಿ ರೋಗ ಬಂದ ಕೈಕಾಲುಗಳ, ಗೂನು ಬೆನ್ನಿನವನು ಎದುರು ನೋಡುತ್ತಿರುತ್ತಾನೆ. ತಡವಾದರೆ ಹೇಳಿದೆನಲ್ಲಾ ಹಾಗೆ ಹೊಡೆಯುತ್ತಾನೆ. ಆದರೆ... ಕಂಠಮಾತ್ರ ಇಲ್ಲ. ಅದೇ ಸಿಟ್ಟು... ಕ್ರೂರತನ ಮಾತ್ರವಿದೆ.

ಹ್ಞಾಂ.... ಮರೆತಿದ್ದೆ! ಇಲ್ಲಿ ಯಾರೋ ಮಹಾಕವಿ ಜನ್ನನಂತೆ. ನಾವು ಕೂಡಿ ಬಾಳಿದ ಬದುಕನ್ನು ಬಣ್ಣಿಸಿ ಬರೆದಿದ್ದಾನೆ. ನಿನ್ನನ್ನು ಹೀರೋ ಮಾಡಿ, ವಿಕೃತ ಕಾಮಿಯಂತೆ ನನ್ನನ್ನು ಚಿತ್ರಿಸಿದ್ದಾನೆ. ಇರಲಿ ಬಿಡು! ಯಾವತ್ತು ತಾನೆ ಈ ಭೂಮಿಯ ಮೇಲೆ ಹೆಣ್ಣಿಗೆ ಬೆಲೆ ಸಿಕ್ಕಿದೆ ಹೇಳು! ಪಾಪ ಆ ಅಹಲ್ಯೆಯನ್ನೇ ನೋಡು. ಆ ಕೇಡಿ ಇಂದ್ರ ವೇಷ ಮರೆಸಿ ಅವಳನ್ನು ಸಂಭೋಗಿಸಿ ಪರಾರಿಯಾದ ಹೇಡಿಯಂತೆ. ವಿಷಯ ತಿಳಿದ ನರಪೇತಲ ಗೌತಮ ಆಲೋಚಿಸದೆ ಅವಳ ಬಾಳನ್ನು ಕಲ್ಲಾಗಿಸಿದ. ಇದರಲ್ಲಿ ಅವಳ ತಪ್ಪೇನಿದೆ ಹೇಳು! ನೀವೆಲ್ಲ ಹೀಗೆಯೇ... ಕೊನೆಗೆ ಕಲ್ಲಾಗಿ ಮುದಿಯಾದವಳಿಗೆ ಪತಿವ್ರತೆಯ ಪಟ್ಟ ಕಟ್ಟಿ ಮೂಲೆಗೆ ನೂಕಿದಿರಿ.... ಯಾಕೆ? ನಿಮ್ಮ ತಪ್ಪನ್ನು ಮುಚ್ಚಿಕೊಳ್ಳಲು.... ಅಥವಾ ಮುಂದಿನವರು ಉಗಿತಾರೆ ಅಂತಲೂ....

ಏನೇ ಹೇಳು....! ಮುಳ್ಳು ಬಟ್ಟೆ ಮೇಲೆ ಬಿದ್ದರೂ, ಬಟ್ಟೆ ಮುಳ್ಳ ಮೇಲೆ ಬಿದ್ದರೂ ನಷ್ಟ ಬಟ್ಟೆಗೆ ತಾನೆ....? ಹಾಗೆಯೇ ನಮ್ಮ ಬದುಕು.

* * *

ಏನೇ ಆಗಲಿ....! ನಾವು ಕೂಡಿ ಕಳೆದ ಆ ದಿನಗಳನ್ನು ಬಿಡುವು ಸಿಕ್ಕಾಗಲೆಲ್ಲಾ ನೆನೆಸಿಕೊಳ್ಳುತ್ತೇನೆ.... ನಿನ್ನ ತೋಳ ತೆಕ್ಕೆಯಲ್ಲಿ ನನ್ನ ತಲೆಯಿದ್ದು, ನಿನ್ನೆದೆಯ ರೋಮಗಳನ್ನು ಸುರಳಿ ಸುತ್ತಿ ಆಡಿದ್ದು, ಹೂವು ದುಂಬಿಯನ್ನು ಆಕರ್ಷಿಸುವಂತೆ ನನ್ನನ್ನು ಸೆಳೆದದ್ದು, ತುಟಿಗೆ ತುಟಿ ಬೆರೆತು ನನ್ನೊಳಗಿನ ಸವಿ ಜೇನನ್ನು ಹೀರಿದ್ದು....

...ಆ ..ಅರಮನೆ... ನಿನ್ನ ಠೀವಿ, ದರ್ಬಾರು.. ಕೀರ್ತಿ ಅಬ್ಬಬ್ಬಾ! ಹೇಳಲಾರೆ, ನೆನೆದರೇನೆ ಕಚಗುಳಿ ಇಟ್ಟಂತಾಗಿ ನನ್ನ ಕೆನ್ನೆ ಕೆಂಪೇರುತ್ತದೆ...

ಇನ್ನೊಂದು ವಿಷಯ... ಗಾಳಿಯಂತೆ ನಾನು



ಎಲ್ಲೆಲ್ಲೋ ಹರಿದಾಡುತ್ತಿರುತ್ತೇನೆ. ನನ್ನ ಸುಳಿವು ಸಿಕ್ಕಿ ನನ್ನನ್ನು ಹಿಂಬಾಲಿಸಲು ಪ್ರಯತ್ನಿಸಬೇಡ ಅಥವಾ ದಾರಿಯಲ್ಲೊ ಜುಗಾರಿ ತಾಣದಲ್ಲೊ ನನ್ನನ್ನು ನೋಡಿ ಮಾತನಾಡಿಸಬೇಡ. ನನ್ನ ಮೇಲೆ ಕರುಣೆ, ಅನುಕಂಪಗಳು ಹುಟ್ಟಿತೆಂದು ಬಂದು ದಡ್ಡನಂತೆ ಎದುರಿಗೆ ನಿಲ್ಲಬೇಡ! ನಿನ್ನ ಹೊಳೆವ ಕಣ್ಣುಗಳನ್ನು ನಾನು ಎದುರಿಸಲಾರೆ, ಭವ ಭವಗಳಲ್ಲಿ ಶುದ್ಧಗೊಂಡ ನಿನ್ನ ದೇಹದ ತೇಜಸ್ಸನ್ನು ಎದುರಿಸಲಾಗದೆ ದೀಪದ ಬೆಂಕಿಗೆ ಸಿಕ್ಕ ಹುಳುವಿನಂತೆ ಸುಟ್ಟು ಹೋಗುತ್ತೇನೆ.

ಹಾಂ... ಆಕಸ್ಮಿಕವಾಗಿ ನಾವು ಕೂಡಿದ್ದೂ, ಮಾತನಾಡಿದ್ದೂ ವಿಷಯ ನನ್ನ ಗಂಡ ಎನ್ನಿಸಿಕೊಂಡಿರುವವನಿಗೆ ತಿಳಿದರೆ... ಮುಗಿಯಿತು ನಿನ್ನ ಕಥೆ! ಕಾಲಿಗೆ ಸಿಕ್ಕಿ ಪುಡಿಯಾಗುವ ತರಗೆಲೆಯಂತೆ, ನನ್ನ ದೇಹವನ್ನು ಹರಿದು ಚೂರು ಮಾಡುತ್ತಾನೆ... ಅವನಿಗೆ ಏನೂ ಇಲ್ಲದಿದ್ದರೂ ಕ್ರೂರತನ... ಸಿಟ್ಟು... ದೌಲತ್ತು ಮಲೇರಿಯದಂತೆ ಅಂಟಿಕೊಂಡಿವೆ.

....ಮತ್ತೆ ನನ್ನನ್ನು ಬಯಸಬೇಡ, ಪೆದ್ದನಂತೆ ತಿದ್ದಲು ಪ್ರಯತ್ನಿಸಬೇಡ.... ನಾನು ಎಂದಿಗೂ ನಿನ್ನವಳಾಗಲಾರೆ....

ಇರುಳು ತಾರೆಗಳನ್ನು ನೋಡಿ ನಿನ್ನ ನೆನಪಿಸಿಕೊಳ್ಳುತ್ತೇನೆ.... ಯಾರ ತೆಕ್ಕೆಯಲ್ಲೊ ಮಲಗಿ ಆ ಕ್ಷಣಗಳನ್ನು .... ಸವಿಯುತ್ತೇನೆ....

ಕ್ಷಮಿಸು. ನಿನ್ನ... ಅಮೃತಮತಿ.

ಕೆ. ಪಿ. ಶ್ರೀಧರ್
ನಂ. ೨೬೮೮, ಪ್ರಶಾಂತನಗರ, ಎಂ. ಜಿ. ರೋಡ್, ಚಿಕ್ಕಬಳ್ಳಾಪುರ -೫೬೨ ೧೦೧, ಕೋಲಾರ ಜಿಲ್ಲೆ

# ನಮ್ಮನೆಯೊಳಗೊಬ್ಬ ರಾಮಣ್ಣ



■ ಹಂಝು ಮಲಾರ್

**ರಾ**ಮಣ್ಣ ಸತ್ತರಂತೆ, ಹಾಗಂತ ಪಕ್ಕದ ಮನೆಯ ಝುಬೈರ್ ಬಂದು ಹೇಳಿದಾಗ ನಾನು ಹೌಹಾರಿದ್ದೆ. ವಿಷಯ ತಿಳಿದುಕೊಂಡ ಉಮ್ಮ ಅಡುಗೆ ಕೋಣೆಯೊಳಗಿನಿಂದಲೇ ಏನು, ಏನು ಎಂದು ಕೇಳಿಕೊಳ್ಳುತ್ತಾ ಓಡಿಬಂದರು. ರಾಮಣ್ಣ ಗಾಡಿಕಂಡದ ಬಳಿ ಇರುವ ಪಾದೆಕಲ್ಲಿನಲ್ಲಿ ನಡೆದುಕೊಂಡು ಹೋಗುತ್ತಿದ್ದರಂತೆ. ಕುಡಿದ ಮತ್ತಿನಲ್ಲಿ ಬಿದ್ದ ಪೆಟ್ಟಿಗೆ ತಲೆ ಎರಡಾಗಿದೆ. ಕೈಯಲ್ಲಿ ಗಂಗಸರದ ತೊಟ್ಟೆ ಹಾಗೇ ಇತ್ತಂತೆ. ಯಾರೋ ಕಂಡವರು ಹೋಗಿ ನೋಡುವಾಗ ರಾಮಣ್ಣ ಕಣ್ಣು ಮುಚ್ಚಿದ್ದರಂತೆ ಎಂದು ಝುಬೈರ್ ಹೇಳುತ್ತಿದ್ದ.

'ಏ ಮೋನೇ, ನಿನ್ನ ಅಬ್ಬ ಎಲ್ಲಿ? ತೋಟದಲ್ಲಿರಬೇಕು. ಒಮ್ಮೆ ಹೋಗಿ ವಿಷಯ ತಿಳಿಸು' ಎಂದು ಗಡಿಬಿಡಿಯಲ್ಲಿ ಅರ್ಧಾರ್ಧ ಹೇಳಿದ ಉಮ್ಮ, 'ಈಗ ಶವ ಎಲ್ಲುಂಟು?' ಎಂದು ಕೇಳುತ್ತಾ 'ಕುಡಿಯಬೇಡ, ಕುಡಿಯಬೇಡ ಎಂದು ಸಾಕಷ್ಟು ಸಲ ಹೇಳಿದೆ. ಕೇಳಿದರಾ ಅವರು ? ಈಗ ಕುಡಿದುಬಿದ್ದೇ ಸತ್ತರು' ಎಂದೂ ಹೇಳಿಕೊಂಡರು. ನಾನು ಹೋಗಿ ತೋಟದಲ್ಲಿದ್ದ ಅಬ್ಬನಲ್ಲಿ ವಿಷಯ ಹೇಳಿದೆ. ಅವರಿಗೆ ನನ್ನ ಮಾತು ನಂಬಲಿಕ್ಕೆ ಆಗಲಿಲ್ಲ. ನನ್ನ ಮುಖವನ್ನೇ ನೋಡಿದರು. ಒಂದು ಕ್ಷಣ ಏನು ಮಾಡಬೇಕೆಂದು ತೋಚದಾದ ಅಬ್ಬ ನಂತರ ಸಾವರಿಸಿಕೊಳ್ಳುತ್ತಾ 'ನಡಿ ಹೋಗೋಣ' ಎಂದರು. ಬುರ್ಖ ತೊಟ್ಟುಕೊಂಡಿದ್ದ ಉಮ್ಮ ನೇರ ತೋಟಕ್ಕೇ ಬಂದಿದ್ದರು. ಹಾಕಿದ ಬಟ್ಟೆ ಬರೆಯೇ ಸಾಕು. ಬೇಗ ಹೋಗೋಣ ಎಂದು ಅವರು ಹೇಳುತ್ತಾ ನಮಗಿಂತ ಮುಂಚೆಯೇ ಹೆಜ್ಜೆ ಹಾಕತೊಡಗಿದರು. ಬನಿಯನ್‌ನಲ್ಲಿದ್ದ ಅಬ್ಬ ತಾನು ಹಾಕಿದ ಬಟ್ಟೆ ಬರೆ ಯಾವುದು ಎಂದೂ ನೋಡದೆ ರಾಮಣ್ಣನ ಮನೆಯತ್ತ ರಪರಪ ನಡೆದರು. ನಾನೂ ಅವರ ಹಿಂದೆ ಕಾಲೆಳೆದೆ.

ನಮಗೆಲ್ಲಾ ಗೊತ್ತು. ಶವವನ್ನು ರಾಮಣ್ಣನ ಮನೆಯಲ್ಲಿಡಲಿಕ್ಕಿಲ್ಲ ಅಂತ. ಹಾಗಾಗಿ ರಾಮಣ್ಣನ ಮನೆ ಪಕ್ಕದಲ್ಲೇ ಇರುವ ಅವರ ತಮ್ಮನ ಮನೆಗೆ ಹೋದೆವು. ಅಲ್ಲಿ ಹೆಚ್ಚೇನೂ ಜನರಿರಲಿಲ್ಲ. ಪುಟ್ಟದಾದ ಆ ಮನೆಯೊಳಗೆ ನಾವು ಕಾಲಿಟ್ಟಾಗ ಒಳಗಿದ್ದ ಸ್ವಲ್ಪ ಮಂದಿ ನಮಗೆ ದಾರಿ ಮಾಡಿಕೊಟ್ಟರು. ರಾಮಣ್ಣನ ಶವವನ್ನು ಹಳೆಯ ಚಾಪೆಯಲ್ಲಿ ಅಂಗಾತ ಮಲಗಿಸಲಾಗಿತ್ತು. ಲೋಬಾನ, ಅಗರಬತ್ತಿ ಅಲ್ಲೇ ತಲೆಪಕ್ಕದಲ್ಲಿತ್ತು. ಅದೆಷ್ಟೋ ವರ್ಷದಿಂದ ಗಂಡನನ್ನು ಏಕವಚನದಲ್ಲಿ ಕರೆಯುತ್ತಾ ಅವಮಾನಿಸುತ್ತಿದ್ದ, ಮಾತನ್ನೂ ಕೂಡಾ ಬಿಟ್ಟಿದ್ದ ರಾಮಣ್ಣನ ಹೆಂಡತಿ ಅಲ್ಲೇ ಪಕ್ಕದಲ್ಲಿ ಕೂತುಕೊಂಡು ಅಳುತ್ತಿದ್ದರು. ನಮ್ಮನ್ನು ಕಂಡು ನಾಚಿ ನೀರಿನಂತಾದ ಅವರು ಏನೋ ಹೇಳಲು ಬಾಯ್ತೆರೆದರು. ತಾಯಿಯ ಮಾತನ್ನೇ ನಂಬಿ ತಂದೆಯನ್ನು ಕಡೆಗಣಿಸಿದ್ದ ಇಬ್ಬರು ಹೆಣ್ಣು ಮತ್ತು ಇಬ್ಬರು ಗಂಡು ಮಕ್ಕಳೂ ಕೂಡಾ ಪಕ್ಕದಲ್ಲೇ ಕೂತು ಕಣ್ಣೀರಿಳಿಸುತ್ತಿದ್ದರು.

ನಾವು ರಾಮಣ್ಣನನ್ನು ನೋಡಿದೆವು. ಸತ್ತ ನಂತರ ಅದು ರಾಮಣ್ಣ ಅಲ್ಲ, ಶವ ಎಂದು ಎಲ್ಲರಿಗೂ ಗೊತ್ತು. ಆದರೆ ನನಗೆ ಅದು ಶವ ಎಂದು ಕರೆಯಲು ಮನಸ್ಸಾಗಲಿಲ್ಲ. ರಾಮಣ್ಣ ಶವದ ಹಾಗೆ ಕಾಣಲೂ ಇಲ್ಲ. ಅರ್ಧ ಇಂಚು ಉದ್ದದ ಗಡ್ಡವನ್ನು ನೋಡಿದ ಮೇಲಂತೂ ನನ್ನ ಹೊಟ್ಟೆಗೆ ಕತ್ತಿ ಹಾಕಿದಂತಾಯಿತು. ಯಾಕೆಂದರೆ ನಿನ್ನೆ ತಾನೇ ಈ ರಾಮಣ್ಣ ಗಡ್ಡ ತೆಗೆಯಲು ಹತ್ತು ರೂಪಾಯಿ ಕೊಡು ಎಂದು ಕೇಳಿದ್ದರು. ಕಿಸೆಯಲ್ಲಿ ಕಾಸಿದ್ದರೂ ಕೂಡಾ ಅದನ್ನು ಗಡಂಗ್‌ಗೆ ಹಾಕಿದರೆ... ಎಂದು ಭಾವಿಸಿ ನಾಳೆ ಕೊಡುತ್ತೇನೆ ಎಂದಿದ್ದೆ. ನಿನ್ನೆ ಹಣ ಕೊಟ್ಟಿದ್ದರೆ ರಾಮಣ್ಣ ಗಡ್ಡ ತೆಗೆಯುತ್ತಿದ್ದರೋ ? ಗೊತ್ತಿಲ್ಲ. ಆದರೆ ನಾನಂತೂ ತಪ್ಪು ಮಾಡಿಬಿಟ್ಟೆ ಎಂದು ನನ್ನಲ್ಲೇ ಹೇಳಿ ಹಲುಬತೊಡಗಿದೆ.

ಉಮ್ಮನ ಕಣ್ಣಲ್ಲಿ ನೀರು ಇಳಿಯುತ್ತಿತ್ತು. ಅಬ್ಬ ಮೌನವಾಗಿದ್ದರು. ನಮ್ಮ ಹಿಂದೆ ಮನೆಯ ಇತರರು, ಅಕ್ಕಪಕ್ಕದ ಮನೆಯವರು, ರಾಮಣ್ಣನ ಸಂಬಂಧಿಕರು, ಊರವರು ಹೀಗೆ ಎಲ್ಲರೂ ಬರತೊಡಗಿದರು.

'ಕುಡಿಯುವುದನ್ನು ಬಿಡಿ ಅಂತ ಎಷ್ಟು ಸಲ ಹೇಳಿದೆ, ಕುಡಿತ ಬಿಟ್ಟಿದ್ದರೆ ಬದುಕುತ್ತಿದ್ದರೋ ಏನೋ ?' ಎಂದು ಉಮ್ಮ ಹೇಳಿದರು. ಇತರರೂ ಆ ಮಾತಿಗೆ ದನಿಗೂಡಿಸಿದರು.

'ಶವ ಸಂಸ್ಕಾರ ಎಲ್ಲಿ ಮಾಡುವುದು?' – ಅದುವರೆಗೂ ಮೌನವಾಗಿದ್ದ ಅಬ್ಬ ಬಾಯಿಬಿಟ್ಟರು. ಅವರ ಎದುರಲ್ಲೇ ರಾಮಣ್ಣನ ತಮ್ಮ ನಿಂತಿದ್ದರು. 'ಇಲ್ಲೇ ಮನೆ ಪಕ್ಕದಲ್ಲೇ' ಎಂದು ಅವರು ಹೇಳಿದಾಗ, 'ಸರಿ, ಇಲ್ಲೆಲ್ಲೋ ಮರ ಕಡಿಯಲು ಹೋಗಬೇಡ. ನಮ್ಮ ಮನೆ ಪಕ್ಕದಲ್ಲೊಂದು ಮಾವಿನ ಮರ ಉಂಟು. ಅದನ್ನು ಕಡಿಯಲು ಯಾರನ್ನಾದರೂ ಕಳುಹಿಸಿಕೊಡು' ಎಂದು ಅಬ್ಬ ಹೇಳಿದರು. ನಾನು ಮತ್ತೊಮ್ಮೆ ರಾಮಣ್ಣನನ್ನು ನೋಡಿದೆ. ಮುಂಜಾವಿನ ನಿದ್ದೆಯಲ್ಲಿರುವಂತೆ ಭಾಸವಾಯಿತು. ಮತ್ತೊಮ್ಮೆ ಕಣ್ಣು ಬಿಟ್ಟು ನೋಡಿದೆ. ತಲೆ ಎರಡು ತುಂಡಾದಂತಿತ್ತು. ಬಟ್ಟೆ ಕಟ್ಟಿದ್ದರೂ ಕೂಡಾ ಸ್ವಲ್ಪ ರಕ್ತ ಬರುತ್ತಿತ್ತು. ಈವರೆಗೂ ಜೀವಿಯಾಗಿದ್ದ ಈ ರಾಮಣ್ಣ ಇನ್ನು ಕೆಲವೇ ಕೆಲವು ಗಂಟೆಯ ನಂತರ ಬೂದಿಯಾಗುತ್ತಾರೆ. ಅಬ್ಬ ಎಂಥ ವಿಚಿತ್ರ !

* * *

ಅಷ್ಟಕ್ಕೂ ಅವರದ್ದು ಸಾಯುವ ವಯಸ್ಸಾ ? – ಹಾಗಂತಾ ಎಲ್ಲರೂ ಕೇಳುತ್ತಿದ್ದರು. ಯಾಕೆಂದರೆ ರಾಮಣ್ಣ ನೋಡಲು ಹಾಗೇ ಇದ್ದರು. ವಯಸ್ಸು ಅರವತ್ತು ಆಗಿದ್ದರೂ ಕೂಡಾ ಇನ್ನೂ ಐವತ್ತು ದಾಟದವರ ಹಾಗೆ ಇದ್ದರು. ಆದರೆ ದುಡಿದೂ ದುಡಿದೂ ಅವರ ಬೆನ್ನು ಬಾಗಿತ್ತು. ಕುಡಿದೂ ಕುಡಿದೂ ಅವರ ಕರುಳು ತೂತು ಬಿದ್ದಿತ್ತು. ಎರಡು ಬಾರಿ ಆಸ್ಪತ್ರೆಗೂ ಸೇರಿಸಲಾಗಿತ್ತು. ವೈದ್ಯರು ಎಚ್ಚರಿಕೆ ಕೊಟ್ಟ ನಂತರದ ಕೆಲವು ದಿನದವರೆಗೆ ರಾಮಣ್ಣ ಕುಡಿತ ಬಿಟ್ಟಿದ್ದರು. ಕುಡಿಯುವುದಿಲ್ಲ ಎಂದು ಶಪಥ ಹಾಕಿದ್ದರು. ಆದರೆ ಅದನ್ನು ಮತ್ತೆ ಮುರಿದಿದ್ದರು. ಅದೇ ಕುಡಿತ ಈಗ ಅವರ ಪ್ರಾಣವನ್ನೂ ಬಲಿ ತೆಗೆದುಕೊಂಡಿತ್ತು. ರಾಮಣ್ಣ ನಮ್ಮ ಮನೆ ಸೇರಿ ಸುಮಾರು ೪೦ ವರ್ಷ ಉರುಳಿದೆ. ಅಬ್ಬ ಮತ್ತು ಅವರು ಬಾಲ್ಯ ಸ್ನೇಹಿತರಂತೆ. ಇಬ್ಬರಿಗೂ ಒಂದೇ ತಿಂಗಳಲ್ಲಿ, ಆದರೆ ಬೇರೆ ಬೇರೆ ದಿನದಲ್ಲಿ ಮದುವೆಯಾಗಿತ್ತಂತೆ. ಮದುವೆಯಾದ ಬೆನ್ನಿಗೆ ಅಬ್ಬ ಹತ್ತು ಎಕರೆ ಜಾಗ ಖರೀದಿಸಿದ್ದರು. ಅದರಲ್ಲಿ ತೋಟ ಮಾಡುವ ಯೋಚನೆ ಮಾಡುತ್ತಲೇ ರಾಮಣ್ಣನನ್ನು ಕೆಲಸ ಮಾಡಲು ಕರೆಸಿದ್ದರು. ಅಂದರೆ ನಾವೆಲ್ಲ ಆ ಮನೆಯ ಕೂಸುಗಳಾಗುವ ಮುನ್ನವೇ ರಾಮಣ್ಣ ಮನೆಯ ಒಬ್ಬ ಸದಸ್ಯರಾಗಿ ಬಿಟ್ಟಿದ್ದರು. ಹಾಗೆ ಬಂದಿದ್ದ ರಾಮಣ್ಣ ಕೊನೆಯವರೆಗೂ ಮನೆ, ತೋಟದಲ್ಲೇ ಕೆಲಸ ಮಾಡಿದ್ದರು.

ರಾಮಣ್ಣ ಒಂದು ಮುಂಜಾನೆ ಎದ್ದು ಮನೆಗೆ ಕಾಲಿಡುತ್ತಾರೆ. ಒಂದು ಖಾಲಿ ಚಾ ಕುಡಿದ ಮೇಲೆ ಹಸುಗಳ ಹಾಲು ಕರೆಯುತ್ತಾರೆ. ನಂತರ ಎತ್ತಿಗೆ ಒಣಹುಲ್ಲು, ಕಲಗಚ್ಚು ಇಡುತ್ತಾರೆ. ಹಟ್ಟಿಯನ್ನೂ ಶುಚಿಗೊಳಿಸುತ್ತಾರೆ. ನಂತರ ತಿಂಡಿ ತಿನ್ನುತ್ತಾರೆ. ಮತ್ತೆ ಅಲ್ಲಿಂದ ತೋಟ, ಗದ್ದೆಯ ಕಡೆಗೆ ಹೋಗುತ್ತಾರೆ. ಅಲ್ಲಿ ಮೈತುಂಬ ಕೆಲಸ ಮಾಡುತ್ತಾ ಹತ್ತು ಗಂಟೆಗೆ ಚಾ ಕುಡಿಯಲು ಮತ್ತೆ ಮನೆಗೆ ಬರುತ್ತಾರೆ. ಒಂದರ್ಧ ಗಂಟೆಯ ನಂತರ ಮತ್ತೆ ತೋಟಕ್ಕೆ ಹೋಗುತ್ತಾರೆ. ಮಧ್ಯಾಹ್ನ ಊಟ ಮಾಡಲು ಪುನಃ ಬಂದವರು ಒಂದು ಗಂಟೆ ವಿರಾಮ ತೆಗೆಯುತ್ತಾರೆ. ನಂತರ ಮತ್ತೆ ತೋಟಕ್ಕೆ ಹೋಗುತ್ತಾರೆ. ಹಾಗೇ ಸಂಜೆ ಚಾ ಕುಡಿಯಲು ಬರುತ್ತಾರೆ. ಅಲ್ಲಿಂದ ತೋಟಕ್ಕೆ ಹೋದವರು ಆರು ಗಂಟೆಗೆ ಕೆಲಸ ಮುಗಿಸಿ ಮನೆಗೆ ಕಾಲಿಡುತ್ತಾರೆ. ಅಲ್ಲೇ ಪೈಪಲ್ಲಿ ಬರುವ ನೀರಲ್ಲಿ ಕೈ ಕಾಲು ತೊಳೆಯುತ್ತಾ ಮನೆಯ ಕಡೆಗೆ ಹೆಜ್ಜೆ ಹಾಕುತ್ತಾರೆ. ಹಾಗೇ ಹೋಗುವಾಗ ದಾರಿಯಲ್ಲಿ ಸಿಗುವ ಗಡಂಗ್‌ಗೆ ತೆರಳುತ್ತಾರೆ. ಒಂದು ತೊಟ್ಟೆ ಅಲ್ಲೇ ಬಾಯಿಗಿಡುತ್ತಾರೆ. ಇನ್ನೊಂದು ತೊಟ್ಟೆಯನ್ನು ಮನೆಗೆ ಕೊಂಡು ಹೋಗಿ ಊಟ ಮುಗಿಸಿ ಅದನ್ನು ಬಾಯಿಗಿಡುತ್ತಾರೆ. ಅಲ್ಲಿಂದ ಮುಂಜಾನೆ ಎದ್ದು ಮತ್ತೆ ಕೆಲಸ ಮಾಡಲು ಮನೆಗೆ ಬರುತ್ತಾರೆ. ಇದು ಅವರ ನಿತ್ಯ ದಿನಚರಿಯಾಗಿತ್ತು.

ಕೆಲವೊಮ್ಮೆ ಮನೆಯೊಳಗಿನ ಕೆಲಸವನ್ನೂ ಅವರು ಮಾಡುತ್ತಿದ್ದುದು ಉಂಟು. ನಾಲ್ಕು ಮಕ್ಕಳಾಗಿ, ಆ ಮಕ್ಕಳು ಒಂದು ಹಂತಕ್ಕೆ ಬೆಳೆಯುವವರೆಗೂ ರಾಮಣ್ಣ ಮನೆಯಿಂದ ಕೆಲಸ ಮುಗಿಸಿ ತನ್ನ ಮನೆಗೆ ಮಲಗಲು ಹೋಗುತ್ತಿದ್ದರು. ಆದರೆ ದಿನ ಕಳೆದಂತೆ ಅವರ ಕುಡಿತ ವಿಪರೀತವಾಗಿ ಹೆಚ್ಚಿದಾಗ ಮನೆಯಲ್ಲಿದ್ದ ಹೆಂಡತಿ, ಮಕ್ಕಳಿಗೆ ಕಿರಿಕಿರಿಯಾಗಿರಬೇಕು. ಅವರೇನೋ ಹೇಳಿದ್ದನ್ನು ಕೇಳಿದ ಮೇಲೆ ಬೇಸರಗೊಂಡ ರಾಮಣ್ಣ ಮತ್ತೆ ಆ ಮನೆಗೆ ಕಾಲಿಡಲಿಲ್ಲ. ಆದರೆ ಅದು ಉಮ್ಮ ಅಥವಾ ಅಬ್ಬರಿಗೆ ಗೊತ್ತೇ ಆಗಲಿಲ್ಲ. ಕೆಲವು ತಿಂಗಳ ನಂತರ ಈ ಸುದ್ದಿ ಅಬ್ಬನ ಕಿವಿಗೆ ಬಿದ್ದಾಗ ಅವರು ಆಶ್ಚರ್ಯಗೊಂಡಿದ್ದರು. ಹಾಗೇ ಒಂದುಗೂಡಿಸಲು ಪ್ರಯತ್ನಿಸಿದ್ದರೂ ಕೂಡಾ ಅದು ಸಾಧ್ಯವಾಗಲಿಲ್ಲ.

ರಾಮಣ್ಣ ತನ್ನ ಮನೆಗೆ ಹೋಗುವುದನ್ನು ನಿಲ್ಲಿಸಿದ ಮೇಲೆ ತೋಟದೊಳಗಿದ್ದ ಪಂಪ್ ಶೆಡ್ ಅಥವಾ ಅಂಗಡಿಯ ಜಗಲಿ ಇಲ್ಲವೇ ಮನೆ ಪಕ್ಕ ಇದ್ದ ಹಟ್ಟಿಯ ಒಂದು ಮೂಲೆಯಲ್ಲಿ ರಾತ್ರಿ ಕಳೆಯತೊಡಗಿದ್ದರು. ಬಟ್ಟೆ ಬರೆ ಕೂಡಾ ಈ ಮೂರೂ ಕಡೆ ಚದುರಿ ಬಿದ್ದಿತ್ತು.

ರಾಮಣ್ಣನ ಊಟ ತಿಂಡಿ ಎಲ್ಲ ಮನೆಯಲ್ಲೇ ಆಗಿತ್ತು. ಆರಂಭದಲ್ಲಿ ಕುಡಿತ ಹೆಚ್ಚಾದಾಗ ಉಮ್ಮ ಅವರ ಊಟ ತಿಂಡಿಯ ಪಾತ್ರೆ ಪಗಡೆಯನ್ನು ಪ್ರತ್ಯೇಕವಾಗಿಟ್ಟಿದ್ದರು. ಆದರೆ ಅದು ಅಬ್ಬನಿಗೆ ಗೊತ್ತಾಗುತ್ತಲೇ ಆ ಪ್ರತ್ಯೇಕತೆಯನ್ನು ಹೋಗಲಾಡಿಸಿದ್ದರು.

ನಾವು ಅಂದರೆ ಮಕ್ಕಳು ಒಂದು ಹಂತದವರೆಗೆ ಬೆಳೆದುಬಿಟ್ಟಿದ್ದೆವು. ರಾಮಣ್ಣ ಕುಡಿದು ರಂಪಾಟ ಮಾಡುವಾಗ ಅಥವಾ ಕುಡಿತದ ವಾಸನೆ ಅತಿಯಾದಾಗಲೆಲ್ಲಾ ಕೋಪದ ಭರದಲ್ಲಿ ನಾವು ಅವರಿಗೆ ಬಯ್ಯುತ್ತಿದ್ದೆವು. ಆದರೆ ಅವರು ಅದನ್ನು ಎಂದೂ ತಲೆಗೆ ಹಚ್ಚಿಕೊಂಡವರಲ್ಲ. ಹಾಗೆ ಹೇಳುವುದಿದ್ದರೆ ನಾವು, ಅಂದರೆ ಎಂಟೂ ಮಕ್ಕಳು, ಸಣ್ಣದಿರುವಾಗ ಅವರ ಬಳಿ ಕೂತು ಅವರದ್ದೇ ತಟ್ಟೆಗೆ ಕೈ ಹಾಕಿ ಊಟ ಮಾಡಿದವರಂತೆ. ಸಂಜೆ ಶಾಲೆ ಬಿಡುವ ವೇಳೆ ಮಳೆ ಬಂದರೆ, ಅವರು ಕೊಡೆ ಎಂದು ನಂಬಿದ್ದ ಬಿರೋಲಿ ಹಿಡಿದುಕೊಂಡು ಶಾಲೆಯವರೆಗೂ ಬರುತ್ತಿದ್ದರು. ಬಹಳ ಜಾಗ್ರತೆಯಿಂದ ತೋಡು ದಾಟಿಸಿ ಮನೆಗೆ ಮುಟ್ಟಿಸುತ್ತಿದ್ದರು. ಹಾಗೇ ಬರುವಾಗ ಸುಟ್ಟಿದ್ದ ಹುಳಿ ಬೀಜ ಅಥವಾ ಹಲಸಿನ ಹಣ್ಣಿನ ಬೀಜವನ್ನು ತಿನ್ನಲು ಕೊಡುತ್ತಿದ್ದರು. ಒಂದು ಶೀತವೋ, ಜ್ವರವೋ ಆದಾಗ ತನ್ನದೇ ಮಕ್ಕಳು ಎಂಬಂತೆ ನಮ್ಮನ್ನು ಉಪಚರಿಸುತ್ತಿದ್ದರು. ಗುಡ್ಡೆಕಾಡಲ್ಲಿರುವ ಹಳ್ಳಿ ಮದ್ದನ್ನು ಹುಡುಕಿ ತಂದು ಅರೆದು ಕೊಡುತ್ತಿದ್ದರು. ಬೇಕಾದ ಕಡೆ ಪೂಸುತ್ತಿದ್ದರು. ಅದು ನಮಗಷ್ಟೇ ಅಲ್ಲ ಅಬ್ಬರ ಆರೋಗ್ಯ ಸರಿ ಇಲ್ಲದಾದಾಗಲೂ ಕೂಡಾ ಅದೇ ರೀತಿ ಮಾಡುತ್ತಿದ್ದರು. ನಮ್ಮನ್ನೆಲ್ಲಾ ಪ್ರೀತಿಯಿಂದ 'ಜೋಕುಳು' ಎಂದೂ, ಅಬ್ಬರನ್ನು ಬಾಯಿತುಂಬ 'ಧಣಿಕುಳು' ಮತ್ತು ಉಮ್ಮನನ್ನು 'ಅಕ್ಕೆ' ಅಂತಲೂ ಕರೆಯುತ್ತಿದ್ದರು.

ಒಟ್ಟಿನಲ್ಲಿ ರಾಮಣ್ಣ ನಮ್ಮ ಮನೆಯ ಒಬ್ಬ ಪಕ್ಕಾ ಸದಸ್ಯರಂತೆಯೇ ಇದ್ದರು. ಮನೆಯ ಯಾವ ಮೂಲೆಗೂ ಹೋಗುವ, ಏನು ಬೇಕಿದ್ದರೂ ಕೈ ಹಾಕಿ ತೆಗೆಯುವ ಸ್ವಾತಂತ್ರ್ಯವಷ್ಟೇ ಅಲ್ಲ, ಅಧಿಕಾರವೂ ಇದ್ದವರ ಹಾಗೆ ವರ್ತಿಸುತ್ತಿದ್ದರು. ಅಂದರೆ ರಾಮಣ್ಣ ನಮಗೆಂದೂ ಹೊರಗಿನವರ ಹಾಗೆ ಕಾಣಲಿಲ್ಲ. ದುಡಿದ ಹಣವನ್ನು ಸ್ಥಳೀಯ ಅಂಚೆ ಕಛೇರಿಯಲ್ಲಿ ತುಂಬುತ್ತಿದ್ದರು. ಆ ಪುಸ್ತಕವನ್ನೂ ಕೂಡಾ ನನ್ನಲ್ಲೇ ಭದ್ರವಾಗಿಡುವಂತೆ ಸೂಚಿಸಿ ಕೊಟ್ಟಿದ್ದರು.

ರಾಮಣ್ಣ ಕೇವಲ ನಮ್ಮ ಮನೆ ಮಂದಿ ಮಾತ್ರವಾಗಿರಲಿಲ್ಲ. ಅವರು ಊರಿನವರ ಪ್ರೀತಿಗೂ ಪಾತ್ರರಾಗಿದ್ದರು. ಕುಡಿಯುತ್ತಿದ್ದರೂ ಕೂಡಾ ಯಾರಲ್ಲೂ ಬಾಯಿತಪ್ಪಿ ಮಾತನಾಡಿದವರಲ್ಲ. ಹಾಗಂತ ಯಾರಿಗೂ ದೊಗ್ಗು ಸಲಾಂ ಹಾಕಿದವರಲ್ಲ. ನಮ್ಮ ಮನೆಯವರ ಬಗ್ಗೆ ಯಾರಾದರೂ ಹೊಟ್ಟೆಕಿಚ್ಚಿನಿಂದ ಮಾತನಾಡಿದಾಗಲೆಲ್ಲಾ ಅವರು ಅಂಥವರನ್ನು ಎದುರಿಸುತ್ತಿದ್ದರು. ಬಲವಾಗಿ ಖಂಡಿಸಿ ಮಾತನಾಡುತ್ತಿದ್ದರು.

ಯಾರಿಗೂ ಎರಡು ಬಗೆದವರಲ್ಲ. ನಿಜ ಹೇಳಬೇಕೆಂದರೆ, ರಾಮಣ್ಣ ಕೇವಲ ನಮ್ಮ ಮನೆಗೆ ಮಾತ್ರವಲ್ಲ, ಅರಸ್ತಾನ ಎಂಬ ಈ ಊರಿಗೇ ವಿಶಿಷ್ಟ ವ್ಯಕ್ತಿಯಾಗಿದ್ದರು. ನಲ್ವತ್ತು ವರ್ಷಗಳ ಕಾಲ ಮನೆಯಲ್ಲಿದ್ದರೂ ಕೂಡಾ ಅವರೆಂದೂ ತುಳು ಭಾಷೆಯನ್ನು ಕೈ ಬಿಟ್ಟವರಲ್ಲ. ಕುಡಿದ ಮತ್ತಿನಲ್ಲಿ ಎಳೆಯ ಮಕ್ಕಳ ಜತೆ ಜೋಕಿಗಾಗಿ ಬ್ಯಾರಿ ಭಾಷೆಯಲ್ಲಿ ಮಾತನಾಡುತ್ತಿದ್ದರಾದರೂ ಮಿಕ್ಕೆಲ್ಲಾ ಸಮಯದಲ್ಲಿ ಅವರು ತುಳುವಿನಲ್ಲೇ ಮಾತನಾಡುತ್ತಿದ್ದರು.

ನಾವು ಮಾತನಾಡುತ್ತಿದ್ದಾಗ ಬಾಂಗ್ ಮೊಳಗಿದರೂ ಕೂಡ ಕೆಲವೊಮ್ಮೆ ಮಾತು ಮುಂದುವರಿಸುತ್ತೇವೆ. ಆವಾಗ ಇದೇ ರಾಮಣ್ಣ ಬಾಂಗ್ ಆಗುತ್ತಿದೆ, ಮಾತನಾಡಬೇಡಿ ಎಂದು ಎಚ್ಚರಿಸುತ್ತಿದ್ದರು. ಅಷ್ಟೇ ಅಲ್ಲ, ನೀರು ಖಾಲಿಯಾದಾಗ ಪಳ್ಳಿಯ ಹೌಲ್‌ಗೆ ನೀರು ತುಂಬಿಸುತ್ತಾ, ನಮಾಜು ಮಾಡಿ ಒಳ್ಳೆಯವರಾಗಿ, ಕೆಟ್ಟವರಾಗಬೇಡಿ ಎಂದು ಬಾಯಿ ತುಂಬ ಹೇಳುತ್ತಿದ್ದರು. ಮದ್ರಸದ ತರಗತಿ ಮುಗಿಸಿ ಸುಸ್ತಾಗಿ ಮನೆ ಪಕ್ಕ ಇರುವ ಬರುವ ಮಸೀದಿಗೆ ಕಾಲಿಡುವಾಗ ಉಸ್ತಾದರುಗಳ ಮಾತಿನ ಶಬ್ದ ಕೇಳಿದರೆ ಸಾಕು, ಅವರಿಗೆ ಒಂದು ಚೆಂಬು ಗಂಜಿನೀರು ಕುಡಿಯಲು ಕೊಟ್ಟು 'ನನಗೂ ಸ್ವಲ್ಪ ದುಆ ಮಾಡಿ' ಎಂದು ಹೇಳಿಕೊಳ್ಳುತ್ತಿದ್ದರು. ಪಳ್ಳಿಯಲ್ಲಿ ಮೌಲೂದೋ, ರಾತೀಬೋ ಆದಾಗ ಅಲ್ಲಿ ಸಿಗುವ ಸೀರಣಿ ಎಂಬ ಹೆಸರಲ್ಲಿ ಕರೆಯಲ್ಪಡುವ ರೊಟ್ಟಿ, ಮಾಂಸದ ಪದಾರ್ಥವನ್ನು ತಪ್ಪದೆ ಕೇಳಿ ಪಡೆದು ತಿನ್ನುತ್ತಾರೆ. ಈ ದಿನ ಗಂಗಸರವಾದರೂ ಕೈ ಬಿಟ್ಟೇನು, ಆದರೆ ಈ ಸೀರಣಿಯನ್ನು ತಿನ್ನದೆ ಇರಲಾರೆ ಎಂದು ಹೇಳುತ್ತಿದ್ದರು. ಅದ್ಯಾವುದೋ ಘಳಿಗೆಯಲ್ಲಿ ಅಯೋಧ್ಯೆಯಲ್ಲಿನ ಬಾಬರಿ ಮಸೀದಿ ಉರುಳಿದ್ದು ಸುದ್ದಿಯಾದ ತಕ್ಷಣ ಅವರೆಗೂ ಮಸೀದಿಗೆ ಎಷ್ಟು ಮೆಟ್ಟಲು ಗಳಿವೆ ಎಂದು ತಿಳಿದಿರದ ಕೆಲವು ಮಂದಿ ಕೈ ತೋಳು ಮಡಚಿ ಮಸೀದಿಯತ್ತ ಜಮಾಯಿಸಿ ಬರುವುದನ್ನು ಕಂಡ ಇದೇ ರಾಮಣ್ಣ 'ಪಳ್ಳಿಯನ್ನು ಕಾಯಲು ಕೈ ತೋಳು ಮಡಚಿ ಬರಬೇಕಾಗಿಲ್ಲ. ಈ ಮಸೀದಿಯನ್ನು ಹುಡಿ ಮಾಡಲು ಇಲ್ಲಿ ಯಾರೂ ಬರುವವರಿಲ್ಲ. ಒಂದು ವೇಳೆ ಯಾರಾದರೂ ಬಂದರೆ, ಅವರನ್ನು ನೋಡಿಕೊಳ್ಳಲು ನಾನೊಬ್ಬ ಸಾಕು' ಅಂತ ಹೇಳಿ ಇತರರನ್ನು ದಂಗುಗೊಳಿಸಿದ್ದರು.

ಅಬ್ಬ ತೆಗೆದಿದ್ದ ಹತ್ತು ಎಕ್ರೆ ಜಾಗದಲ್ಲಿ ಆರಂಭದಲ್ಲಿ ಭತ್ತ ಬೆಳೆಯಲಾಗುತ್ತಿತ್ತು. ಆದರೆ ಕೆಲವು ವರ್ಷದ ನಂತರ ಆ ಗದ್ದೆಯನ್ನೆಲ್ಲಾ ಅಳಿಸಿ ಹಾಕಿ ಅಲ್ಲಿ ಅಡಿಕೆ ತೋಟ ಮಾಡಲಾಗಿತ್ತು. ಆ ಅಡಿಕೆ ತೋಟದ ಸಂಪೂರ್ಣ ಉಸ್ತುವಾರಿ ರಾಮಣ್ಣನದ್ದೇ ಆಗಿತ್ತು.

ಬೇಸಾಯದ ಸಮಯದಲ್ಲೆಲ್ಲಾ ಭತ್ತವನ್ನು ಬೇಯಿಸುವ ಕೆಲಸವೂ ಅವರದ್ದೇ ಆಗಿತ್ತು. ಆವಾಗಲೆಲ್ಲಾ ನಾವು ಮೈತುಂಬ ಚಳಿ ಕಾಯುತ್ತಿದ್ದುದು, ರಾಮಣ್ಣ ಅದಕ್ಕೆ ಪೂರಕ ವ್ಯವಸ್ಥೆ ಮಾಡುತ್ತಿದ್ದುದು ನೆನಪಾಯಿತು. ತೋಟ ಮಾಡುವ ಮೊದಲು ಇತರ ಬೆಳೆಯನ್ನೂ ಕೂಡ ರಾಮಣ್ಣ ಆ ಗದ್ದೆಯಲ್ಲಿ ಬೆಳೆದಿದ್ದರು. ಅವರೆಂದೂ ತೋಟ, ಮನೆಯನ್ನು ನಿಮ್ಮದು ಎಂದವರಲ್ಲ, ಮಾತು ಮಾತಿಗೂ ನಮ್ಮದು ಎಂದೇ ಹೇಳುತ್ತಿದ್ದರು.

ನಾವು ದೊಡ್ಡವರಾಗಿ ದುಡಿಯಲು ಹೋದ ಮೇಲೆ, ವರ್ಷದಲ್ಲೆರಡು ಬಾರಿ ಸಿಗುತ್ತಿದ್ದ ಪೆರ್ನಾಳ್ ದಿವಸದಂದು ರಾಮಣ್ಣನ ಕೈಗೆ ಹತ್ತು ರೂಪಾಯಿ ಇಡಬೇಕು. ಇಲ್ಲದಿದ್ದರೆ ಒಂದು ರೀತಿಯ ಅಸಮಾಧಾನ ವ್ಯಕ್ತಪಡಿಸುತ್ತಾ ಏನೇನೋ ಹೇಳಲು ಪ್ರಯತ್ನಿಸುತ್ತಿದ್ದರು. ಅಷ್ಟೇ ಅಲ್ಲ, ತೋಟದಿಂದ ಬೊಂಡವನ್ನೋ, ಬಾಳೆಹಣ್ಣನ್ನೋ ಕೊಡುತ್ತಾ, ಸಂಜೆಗೆ ಒಂದ್ಹತ್ತು ರೂಪಾಯಿ ಕೊಡು ಎಂದು ಬಾಯಿಬಿಟ್ಟು ಕೇಳುತ್ತಿದ್ದರು.

ರಾಮಣ್ಣ ನಮ್ಮ ಮನೆಯವರಿಗೆ ಎಂದೂ ಅನ್ಯ ಜಾತಿಯ

## ಒಟ್ಟಿಗೆ ಬಂದಿದೆ

ಆ ದಿನ ಪೇಟೆಯಲ್ಲಿ
ಶ್ಮಶಾನ ಮೌನ
ನೋಡುವ ಕಣ್ಣುಗಳಲ್ಲಿ
ಶಂಕೆಯ ಜಿಂಕೆ
ಓಡುವ ಹೆಜ್ಜೆಗಳಲ್ಲಿ
ಭೀತಿಯ ಓತಿ
ನುಡಿಯು ಹೃದಯಗಳಲ್ಲಿ
ಕರ್ಫ್ಯೂ ಜಾರಿ
ವಿಶೇಷವೇನೆಂದು
ಮನೆಗೆ ಬಂದು
ಕ್ಯಾಲೆಂಡರ್ ನೋಡಿದೆ
ದೀಪಾವಳಿ - ಈದುಲ್ ಫಿತರ್
ಒಟ್ಟಿಗೆ ಬಂದಿದೆ

*— ರವಿಶಂಕರ ಒಡ್ಡಂಬೆಟ್ಟು, ಕನ್ನಾನ*

ವ್ಯಕ್ತಿಯಾಗಿ ಕಾಣಲಿಲ್ಲ. ನಾವೂ ಅಷ್ಟೇ, ಅವರಿಗೆ ಅನ್ಯರಾಗಿ ಕಾಣಲಿಲ್ಲ. ಪ್ರೀತಿ ಮತ್ತು ವಿಶ್ವಾಸ ಮಾತ್ರ ನಮ್ಮೊಳಗಿನ ಬಾಂಧವ್ಯವಾಗಿತ್ತು. ಅದನ್ನು ಯಾರಿಂದಲೂ ಕೊನೆಯವರೆಗೂ ಮುರಿಯಲು ಸಾಧ್ಯವಾಗಲಿಲ್ಲ. ಎಲ್ಲಾದರೂ ಜಾತಿ, ಧರ್ಮದ ಹೆಸರಲ್ಲಿ ಗಲಾಟೆಯಾದರೂ ಕೂಡಾ ಆ ಸೋಂಕು, ಆ ನೋವು, ಆ ಹತಾಶೆ, ಆ ಮತ್ಸರ ಇದ್ಯಾವುದೂ ಅವರಿಗೆ ಬಾಧಿಸಿಲ್ಲ, ನಮಗೂ ಬಾಧಿಸಿಲ್ಲ. ಯಾಕೆಂದರೆ ಅವರು ಮನುಷ್ಯರಾಗಿದ್ದರು, ನಾವು ಮೃಗಗಳಾಗಿರಲಿಲ್ಲ.

ದೇವರು ದೊಡ್ಡವ. ಒಮ್ಮೆ ಹೀಗೆ ಎಲ್ಲೋ ಒಂದು ಕಡೆ ಕೋಮುಗಲಭೆಯಾದಾಗ, ಯಾರೋ ಅಬ್ಬನ ಬಳಿ ಬಂದು 'ಇದು ಮುಸ್ಲಿಮರ ಏರಿಯಾ ಇಲ್ಲಿರುವವರಲ್ಲಿ ರಾಮಣ್ಣ ಮಾತ್ರ ಹಿಂದು. ಮೊದಲೇ ಈ ರಾಮಣ್ಣ ಕುಡಿಯುತ್ತಾರೆ. ನಾಳೆ ಏನಾದರೂ ಹೆಚ್ಚು ಕಮ್ಮಿಯಾಗಿ ರಾಮಣ್ಣ ಕಣ್ಣು ಮುಚ್ಚಿದರೆ ನಮಗೆ ಅಪಾಯ ಇದೆ. ಕೆಲವು ಕುಹಕಿಗಳು ರಾಮಣ್ಣನನ್ನು ಕೊಲ್ಲಲಾಗಿದೆ ಎಂದು ಗಲಾಟೆ ಎಬ್ಬಿಸಿಯಾರು. ಹಾಗೆಲ್ಲ ಆಗುವ ಮೊದಲು ರಾಮಣ್ಣನನ್ನು ಅವರ ಊರಿಗೆ ಕಳುಹಿಸಿಕೊಡುವುದು ಒಳ್ಳೆಯದಲ್ಲವಾ ? ಅಲ್ಲೇ ಅವರು ಏನಾದರೂ ಕೆಲಸಮಾಡಿ ದಿನದೂಡಬಹುದು' ಎಂದು ಹೇಳಿದಾಗ ಅಬ್ಬ ತುಂಬಾ ಕೋಪಗೊಂಡಿದ್ದರು.

'ಹಾಗೆಲ್ಲಾ ಆಗುವುದಿಲ್ಲ. ಅಂತ ನಾನು ಬರೆದು ಬೇಕಾದರೆ ಕೊಡಬಲ್ಲೆ. ಇಲ್ಲಿ ಏನೇ ಆದರೂ ನಾನು ರಾಮಣ್ಣನನ್ನು ಕಳುಹಿಸಿಕೊಡಲಾರೆ. ಅವ ಈ ಮನೆಯ ಕೆಲಸದಾಳು ಅಲ್ಲ. ಈ ಮನೆಯ ಒಬ್ಬ ಸದಸ್ಯ' ಎಂದೆಲ್ಲಾ ಹೇಳಿ ಅಬ್ಬ ಕೆಂಡ ಕಾರಿದ್ದರು. ಈ ವಿಷಯ ಒಂದೆರಡು ದಿನದ ನಂತರ ರಾಮಣ್ಣನ ಕಿವಿಗೆ ಬಿದ್ದಿರಬೇಕು. ಅವರು ತೀರಾ ಸಿಡಿಮಿಡಿಗೊಂಡರಲ್ಲದೆ, ನಾನು ಹೋಗುತ್ತೇನೆ ಎಂದೂ ಹಠ ಹಿಡಿದರು. ಅಬ್ಬ ಅದೇನೋ ಹೇಳಿದ ಮೇಲೆ ತಣ್ಣಗಾದ ರಾಮಣ್ಣ, ಇದ್ದಕ್ಕಿದ್ದ ಹಾಗೇ, 'ನಾನು ಸತ್ತರೆ ನನ್ನ ಶವ ಸಂಸ್ಕಾರದ ಖರ್ಚು ನೀವೇ ನೋಡಬೇಕು. ಅಷ್ಟೇ ಅಲ್ಲ, ಈ ಒಂದು ಮಾವಿನ ಮರವನ್ನೂ ಕೂಡ ನನಗೆ ಕೊಡಬೇಕು' ಎಂದು ಹೇಳಿದಾಗ ಅಬ್ಬ ಅದಕ್ಕೊಪ್ಪಿದ್ದರು.

ಅಂಥ ರಾಮಣ್ಣ ಈಗ ನಮಗೆಲ್ಲ ಒಂದು ನೆನಪು ಮಾತ್ರ. ಭಾಷೆ, ಜಾತಿ ಸಂಸ್ಕೃತಿಯನ್ನೂ ಮೀರಿದ ವ್ಯಕ್ತಿಯಾಗಿದ್ದ ಅವರು ಯಾರಿಗೂ ಯಾವತ್ತೂ ಕೂಡಾ ಅನ್ಯರಾಗಿ ಕಾಣಲಿಲ್ಲ.

* * *

ಜನ ಬರುತ್ತಲಿದ್ದರು. ಗುಣ ಮಾಡುತ್ತಿದ್ದರು. ನಾವೆಲ್ಲ ಅಲ್ಲೇ ನಿಂತಿದ್ದೆವು. ಮನೆ ಬಳಿ ಇದ್ದ ಮಾವಿನ ಮರವನ್ನು ಕಡಿದು ತಂದ ಕಟ್ಟಿಗೆಗಳನ್ನು ಪಕ್ಕದಲ್ಲೇ ಇರುವ ಸ್ಮಶಾನದ ಬಳಿ ರಾಶಿ ಹಾಕಲಾಗಿತ್ತು. ಹಾಗೇ ಸ್ವಲ್ಪ ಸಮಯದ ನಂತರ ರಾಮಣ್ಣನ ಮೃತದೇಹಕ್ಕೆ ಅಗ್ನಿಸ್ಪರ್ಶ ಮಾಡಲಾಯಿತು. ಈವರೆಗೂ ನಿರ್ಜೀವಿಯಾಗಿದ್ದರೂ ದೇಹವಾಗಿದ್ದ ರಾಮಣ್ಣ ಈಗ ಕೇವಲ ಬೂದಿ ಮಾತ್ರ. ರಾಮಣ್ಣನ ಹೆಂಡತಿ ಅಲ್ಲೇ ನಿಂತು ಅಳುತ್ತಿದ್ದರು. ಅವರ ಪಕ್ಕ ಮಕ್ಕಳೂ ಕೂಡಾ ಇದ್ದರು. ಉಮ್ಮ ಮತ್ತು ಅಬ್ಬರ ಕಣ್ಣಲ್ಲಿ ನೀರು ಇಳಿಯುತ್ತಿತ್ತು. ನನಗೆ ರಾಮಣ್ಣ ಶವವಾಗಿದ್ದಾರೆ ಎಂದು ನಂಬಲಿಕ್ಕೇ ಸಾಧ್ಯವಾಗದಷ್ಟು ನೋವು. ಅದ್ಯಾವುದೋ ಕಾರಣಕ್ಕೆ ಬೇರ್ಪಟ್ಟಿದ್ದ ಗಂಡ ಮತ್ತು ಹೆಂಡತಿಯನ್ನು ಒಂದುಗೂಡಿಸಲು ಸಾಧ್ಯವಾಗದ ನೋವು ನಮ್ಮ ಮನೆಯವರಿಗಿತ್ತು. ಆ ದುಃಖ ಈಗ ಅವರ ಹೆಂಡತಿ ಮತ್ತು ಮಕ್ಕಳಿಗೂ ಇದ್ದಂತೆ ಕಂಡಿತು. ಎಲ್ಲಾ ಕಾರ್ಯ ಮುಗಿದೊಡನೆ ಎಲ್ಲರೂ ತಮ್ಮ ತಮ್ಮ ದಾರಿ ನೋಡಲು ಮುಂದಾದರು. ನಾವು ರಾಮಣ್ಣನ ಹೆಂಡತಿ ಮಕ್ಕಳಿಗೆ ಸಾಂತ್ವನ ಹೇಳುತ್ತಾ ಮನೆಯತ್ತ ಹೆಜ್ಜೆ ಹಾಕಿದೆವು. ಒಂದ್ಹತ್ತು ಹೆಜ್ಜೆ ಹಾಕಿದಾಗ ಕಿಸೆಯಲ್ಲೇ ಉಳಿದಿದ್ದ ರಾಮಣ್ಣರ ಅಂಚೆ ಕಛೇರಿಯ ಪಾಸ್‌ಬುಕ್ ನೆನಪಾಯಿತು. ಈಗ ಬಂದೆ ಎಂದು ತಟ್ಟನೆ ಹಿಂದಿರುಗಿದ ನಾನು ನೇರವಾಗಿ ರಾಮಣ್ಣರ ಮನೆಗೆ ಕಾಲಿಟ್ಟು ಆ ಪಾಸ್‌ಬುಕ್ ಕೊಟ್ಟೆ. ಅದರಲ್ಲಿ ಎಷ್ಟಿತ್ತು ಎಂದು ನೋಡುವ ವ್ಯವಧಾನ ಇರಲಿಲ್ಲ. 'ಬ್ಯಾಡ ಮಗಾ, ಅವರನ್ನು ಉಪಚರಿಸುವ ಅವಕಾಶ ನಮಗ್ಯಾರಿಗೂ ಸಿಗಲಿಲ್ಲ. ಆದರೆ ನೀವು ಕೊನೆಯವರೆಗೂ ಅವರನ್ನು ನೋಡಿದಿರಿ. ಹಾಗಾಗಿ ಈಗ ಈ ಹಣವನ್ನು...'' ಎಂದು ಹೇಳುತ್ತಿದ್ದ ಅವರ ಮಾತನ್ನು ನಾನು ಅರ್ಧದಲ್ಲೇ ತಡೆಹಿಡಿಯುತ್ತಾ 'ಬರುತ್ತೇನೆ' ಎನ್ನುತ್ತಾ ಹೊರಬಂದೆ.

*ಪದಗಳ ಅರ್ಥ : ಅಬ್ಬ - ತಂದೆ, ದುಆ - ಪ್ರಾರ್ಥನೆ, ಜೋಕುಲು - ಮಕ್ಕಳು.*

**ಹಂಝ ಮಲಾರ್**
ಅರಸ್ತಾನ ಅಂಚೆ : ಪಾವೂರು, ಮಂಗಳೂರು ತಾಲ್ಲೂಕು - ೫೭೪೧೮೨

# ಅನುಭವ-ಅನುಭಾವ ಮತ್ತು ಬದುಕು

◆ ಅರವಿಂದ ಚೊಕ್ಕಾಡಿ ◆

ಮನುಷ್ಯ, ಈ ಬದುಕನ್ನು ಹಾಗೂ ಬದುಕಿನಾಚೆಯ ವಸ್ತುವನ್ನು ವಿಶ್ಲೇಷಿಸಲು ಕಂಡುಕೊಂಡ ಎರಡು ಮಾರ್ಗ, ಒಂದು ಅನುಭವದ ಹಿನ್ನೆಲೆ; ಇನ್ನೊಂದು ಅನುಭಾವದ ಹಿನ್ನೆಲೆ. ಅನುಭವದ ಮೂಲಕ ಬದುಕನ್ನು ವಿಶ್ಲೇಷಿಸಿದಾಗ ಸಿಗುವುದು ಐಹಿಕ ಬದುಕಿನ ವಾಸ್ತವವನ್ನು ಪ್ರೀತಿಸುವ, ಆಸ್ವಾದಿಸುವ, ಅದನ್ನು ಇನ್ನಷ್ಟು ಉತ್ತಮಪಡಿಸಿಕೊಳ್ಳುವ ಚಿಂತನೆ. ಉತ್ತಮಪಡಿಸಿಕೊಳ್ಳುವುದು ಎಂದಾಗ ಇಲ್ಲಿ ಏನೋ ಒಂದು ಉತ್ತಮವಾಗಿಲ್ಲ ಎನ್ನುವಂಥದ್ದು ಸ್ಪಷ್ಟವಾಗುತ್ತದೆ. ಹಾಗೆ ಉತ್ತಮವಾಗಿಲ್ಲದೆ ಇರುವುದು ಏನು ? ಅದನ್ನು ನಿರ್ಧರಿಸುವುದು ಆಯಾ ಕಾಲಮಾನದ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ದೃಷ್ಟಿ. ಉದಾಹರಣೆ ಹೇಳುವುದಾದರೆ ಒಂದು ಪಿತೃಪ್ರಧಾನ ವ್ಯವಸ್ಥೆಯಲ್ಲಿ ಒಬ್ಬ ಹೆಂಗಸು ಹಲವು ಮಂದಿ ಗಂಡಂದಿರನ್ನು ಹೊಂದಿರುವುದು ಉತ್ತಮವಲ್ಲ ಎನಿಸುತ್ತದೆ. ಅದೇ ಒಂದು ಮಾತೃಪ್ರಧಾನ ವ್ಯವಸ್ಥೆಯಲ್ಲಾದರೆ ಗಂಡಸು ಹಲವು ಹೆಂಡಿರನ್ನು ಹೊಂದಿರುವುದು ಉತ್ತಮವಲ್ಲ ಎನಿಸುವುದು ಸಹಜ. ಆಯಾ ಸಮಾಜ ಒಪ್ಪಿಕೊಂಡ ಜೀವನ ವಿಧಾನ ಒಳಿತು ಕೆಡುಕುಗಳನ್ನು ನಿರ್ಧರಿಸುತ್ತದೆ. ಆ ಜೀವನ ವಿಧಾನವೇ ಸಂಸ್ಕೃತಿ. ಲೈಂಗಿಕತೆಯಂಥ ಒಂದು ನಿದರ್ಶನವನ್ನು ತೆಗೆದುಕೊಂಡರೆ ವಿವಾಹಪೂರ್ವ ಲೈಂಗಿಕ ಸಂಬಂಧ ಕೆಡುಕು ಎನ್ನುವುದನ್ನು ಭಾರತೀಯ ಸಮಾಜ ಬಹುಮಟ್ಟಿಗೆ ಒಪ್ಪಿಕೊಂಡಿದೆ. ಆದರೆ ಪಾಶ್ಚಾತ್ಯ ಸಮಾಜ ಅದನ್ನು ಒಪ್ಪಲಾರದು. ನಿಜಕ್ಕೂ ಲೈಂಗಿಕ ಕ್ರಿಯೆಯಂಥ ಒಂದು ಕ್ರಿಯೆಯಲ್ಲಿ ಒಪ್ಪಲಾಗದಂಥ ವಸ್ತು ಏನಿದೆ ? ಬದುಕನ್ನು ಸಹಜವಾಗಿ ಸ್ವೀಕರಿಸುವ ಮನೋಭಾವವಿರಬೇಕು, ಅಷ್ಟೇ. ಇಲ್ಲಿ ನಾವು ಗಮನಿಸ ಬೇಕಾದ್ದು ಜೀವಿಗಳ ಸಹಜ ನಡವಳಿಕೆಗಳನ್ನು ಮೀರುವ, ತನ್ನ ಮೇಲೆ ತಾನು ನಿಯಂತ್ರಣ ಸಾಧಿಸಿಕೊಳ್ಳುವ, ಅದಾಗದಿದ್ದರೆ ಬಲವಂತದಿಂದಲಾದರೂ ಆ ನಿಯಂತ್ರಣವನ್ನು ಹೇರುವ ಪ್ರಕ್ರಿಯೆಯೇ ಸಂಸ್ಕೃತಿ ಎನಿಸಿಕೊಂಡಿದೆ ಎಂಬುದನ್ನು. ಬಲವಂತದ ನಿಯಂತ್ರಣಕ್ಕೆ ಮನುಷ್ಯ ಮಣಿಯುವುದು ಅನಿವಾರ್ಯವಾಗುತ್ತದೆ. ಏಕೆಂದರೆ ಆತ ಸಮುದಾಯದೊಂದಿಗೆ ಜೀವಿಸ ಬೇಕು. ಅಲ್ಲಿ ಆತ ಒತ್ತಡಕ್ಕೆ ಮಣಿಯದಿದ್ದರೂ ಕನಿಷ್ಠತಮ ರಾಜಿಯನ್ನಾದರೂ ಮಾಡಿ ಕೊಳ್ಳಲೇಬೇಕು. ಅದ್ಭುತ ಚೈತನ್ಯವನ್ನು ಹೊಂದಿದ ಒಬ್ಬ ವ್ಯಕ್ತಿ ರಾಜಿಗೂ ಸಿದ್ಧನಾಗದಿರ ಬಹುದು. ಅಂಥವನಿಗೆ ಕೊನೆಗೆ ಉಳಿಯುವ ಹೆಸರು ಅಷ್ಟೇನೂ ಉತ್ತಮವಾಗಿ ಇರುವು ದಿಲ್ಲ. ಏಕೆಂದರೆ ಆ ಹೆಸರನ್ನು ನಿರ್ಧರಿಸುವುದು ಸಮಾಜ. ಇಲ್ಲಿ ಮಹತ್ವಪೂರ್ಣ ಕಾರ್ಯನಿರ್ವಹಿಸುವುದು ಅಂಥ ವ್ಯಕ್ತಿಯ ಆರ್ಥಿಕ ಶಕ್ತಿ. ಜೀವನದ ಬಹುಪಾಲು ನಿರ್ಧಾರಕವಾಗಿರುವುದು ಆರ್ಥಿಕ ಶಕ್ತಿ ಎಂದಾಗ ಒಬ್ಬ ಧನಿಕ ಏನು ಮಾಡಿದರೂ ಸರಿ ಎನಿಸುತ್ತದೆ. ನಿರ್ಧನಿಕ ನಲ್ಲಿ ಸಮಾಜ ಯಾವತ್ತೂ ತಪ್ಪುಗಳನ್ನೇ ಹುಡುಕುತ್ತಿರುತ್ತದೆ. ಏಕೆಂದರೆ ಸಮಾಜ ಅವನನ್ನು ಅವಲಂಬಿಸಿರುವುದಿಲ್ಲ, ಬದಲು ಆತ ಸಮಾಜವನ್ನು ಅವಲಂಬಿಸಿರುತ್ತಾನೆ. ಅಂಥಲ್ಲಿ ಅವನ ಮೇಲೆ ಒತ್ತಡ ತರುವುದಕ್ಕೆ ವಿಪುಲ ಅವಕಾಶವಿರುತ್ತದೆ. ಇಂಥ ಪ್ರಬಲ ಶಕ್ತಿಯಾಗಿರುವ ಆರ್ಥಿಕ ಶಕ್ತಿಯನ್ನೂ ಮೀರಿದ ಇನ್ನೊಂದು ಶಕ್ತಿ ಇದೆ. ಅದೂ ಕೂಡ ಒಳಿತು-ಕೆಡುಕುಗಳನ್ನು ನಿರ್ಧರಿ ಸುತ್ತದೆ. ಆ ಶಕ್ತಿಯೇ ರಾಜಕೀಯ ಶಕ್ತಿ. ಒಂದು ಕಾಲದಲ್ಲಿ ಅಸ್ತಿತ್ವದಲ್ಲಿದ್ದ (ಈಗಲೂ ಅಂತರ್ವಾಹಿನಿಯಾಗಿ ಅಸ್ತಿತ್ವದಲ್ಲಿರುವ) ರಾಜ ಪ್ರಭುತ್ವ-ಸರ್ವಾಧಿಕಾರ, ಪ್ರಶ್ನಿಸುವ ಮನೋಭಾವವನ್ನು ತಪ್ಪು ಎಂದು ಪರಿಗಣಿ ಸಿತ್ತು. ಈವತ್ತು ಅಸ್ತಿತ್ವದಲ್ಲಿ ಇರುವ ಪ್ರಜಾಸತ್ತೆ ಪ್ರಶ್ನಾ ಮನೋಭಾವವನ್ನು ಎತ್ತಿ ಹಿಡಿಯು ತ್ತದೆ. ಆದರೆ ಅಂತರ್ವಾಹಿನಿಯಾಗಿ ಹರಿದುಬಂದಿರುವ ರಾಜಸತ್ತೆಯ ಗುಣಲಕ್ಷಣ ಗಳು, ನೌಕರ-ಅಧಿಕಾರಿಯನ್ನು, ಹೆಂಡತಿ-ಗಂಡನನ್ನು, ಮಕ್ಕಳು-ಹಿರಿಯರನ್ನು, ಪ್ರಜೆ ಸರಕಾರವನ್ನು ಪ್ರಶ್ನಿಸದೆ ಇರುವಂತೆ ತಡೆಯು ತ್ತದೆ. ಯಾವಾಗ ಆ ಅಂತರ್ವಾಹಿನಿ ಬತ್ತಿ ಹೋಗುತ್ತದೋ ಆಗ ಪ್ರಜಾಸತ್ತೆಯ ಉಚ್ಛ್ರಾಯ ಕಾಲ ಬರುತ್ತದೆ. ಅಂಥ ಕಾಲ ಬಂದಾಗ ಪ್ರಶ್ನಿಸದೆ ಇರುವ ವ್ಯಕ್ತಿ ನಿಷ್ಕ್ರಿಯನೆನಿಸಬಹುದು. ಆತ ತಿರಸ್ಕಾರಕ್ಕೆ ಯೋಗ್ಯನಾಗಬಹುದು. ಪ್ರಶ್ನಿಸುವ ವ್ಯಕ್ತಿಯ ಸ್ಥಾನ ಮೇಲ್ಮಟ್ಟದ್ದಾಗಬಹುದು. ಪ್ರಜಾಸತ್ತೆ ಆ ಹಂತಕ್ಕೆ ತಲುಪಬೇಕಾದರೆ ಆಗಬೇಕಾದ್ದೇನು ? ಪ್ರಭುತ್ವದ ಅಂತರ್ವಾಹಿನಿ ಮತ್ತು ಬಹಿರ್ವಾಹಿನಿಯ ನಡುವೆ ಸಂಘರ್ಷ ನಡೆಯಬೇಕು. ಹಾಗೆ ಸಂಘರ್ಷ ನಡೆದಾಗ ಹೊಸ ತತ್ವವೊಂದು ಉದಯಿಸುತ್ತದೆ. ತತ್ವ ಒಂದು ವ್ಯವಸ್ಥೆಯನ್ನು ರೂಪಿಸುತ್ತದೆ. ಈ ರೀತಿ ರೂಪುಗೊಂಡ ವ್ಯವಸ್ಥೆಯಾದರೂ ಒಳ್ಳೆಯದೇ ಆಗಿರುತ್ತದೆ ಎಂದೇನೂ ಇಲ್ಲ. ಹೇಗೆ ಗಂಡು-ಹೆಣ್ಣಿನ ದೈಹಿಕ ಸಂಘರ್ಷದಿಂದ ಜನಿಸುವ ಮಕ್ಕಳೆಲ್ಲರೂ ಒಳ್ಳೆಯವರೇ ಆಗಿರಬೇಕಾಗಿಲ್ಲವೋ ಅದೇ ರೀತಿ ತಾತ್ವಿಕ ಸಂಘರ್ಷದಿಂದ ಜನಿಸುವ ವ್ಯವಸ್ಥೆಯೂ ಕೂಡ. ಅಷ್ಟಕ್ಕೂ 'ಒಳ್ಳೆಯದು' ಎಂಬುದನ್ನು ನಿರ್ಧರಿಸುವವರಾರು ? ಅದು ಈಗಾಗಲೇ ಹೇಳಿದಂತೆ ಆ ಕಾಲದ ಸಮಾಜ. ಅದರಲ್ಲಿ ವಾಸಿಸುವ ಭಾವೀ ಜನಾಂಗ. ಎಲ್ಲವನ್ನೂ ಪ್ರಶ್ನಿಸುವಂಥ ವ್ಯವಸ್ಥೆ ಬಂದಾಗ ಅಲ್ಲಿಯೂ ಕೆಡುಕುಗಳು ಕಾಣಬಹುದು. ಕಾಣಲೇಬೇಕು. ಇಲ್ಲವಾದಲ್ಲಿ ಭಾವೀ ಜನಾಂಗಕ್ಕೆ ಮಾಡುವುದಕ್ಕೇನಿದೆ ಕೆಲಸ ? ಅದು ನಿಶ್ಚಲವಾಗಬೇಕಾಗುತ್ತದೆ. ನಿಶ್ಚಲತೆ ಯಾವತ್ತೂ ಪ್ರತಿಗಾಮಿ ಶಕ್ತಿಯನ್ನು ಪ್ರೋತ್ಸಾಹಿಸುತ್ತದೆ. ಅಂಥ ನಿಶ್ಚಲತೆ ಬಂದಾಗ ಯಾವನೋ ಒಬ್ಬ ವ್ಯಕ್ತಿ ಅದನ್ನು ಮೀರಲು ಪ್ರಯತ್ನಿಸುತ್ತಾನೆ. ಆದರೆ ಆ ವ್ಯಕ್ತಿ ಒಂದು ಚಿಂತನೆಯನ್ನು ಹುಟ್ಟುಹಾಕ ಬಲ್ಲನಷ್ಟೆ. ಅದು ಕಾರ್ಯರೂಪಕ್ಕಿಳಿಯಬೇಕಾದರೆ ರಾಜಕೀಯ ಇಚ್ಛಾಶಕ್ತಿಯೊಂದು ಅಲ್ಲಿರಲೇಬೇಕಾಗುತ್ತದೆ. ಸುಮಾರು ನೂರೈವತ್ತು ವರ್ಷಗಳ ಹಿಂದೆ ಕಾರ್ಲ್ ಮಾರ್ಕ್ಸ್ ಮಾಡಿದ್ದು ಇದನ್ನೇ. ಬಂಡವಾಳಶಾಹಿ ವ್ಯವಸ್ಥೆಯಿಂದ ಸಮಾಜ ಜಡ್ಡುಗಟ್ಟಿಹೋಗಿದ್ದಾಗ ಅದಕ್ಕೊಂದು ಚಾಲನೆ ಕೊಟ್ಟ. ಆತನ ಚಿಂತನೆ ಎಲ್ಲವೂ ಕೇವಲ ಚಿಂತನೆಯಷ್ಟೇ ಆಗಿದ್ದರೆ ಆತ ಗೌಣವಾಗಿ ಬಿಡುತ್ತಿದ್ದ. ಅಥವಾ ವ್ಯವಸ್ಥೆಯನ್ನು ಪ್ರಶ್ನಿಸಿದ್ದಕ್ಕಾಗಿ ಅತ್ಯಂತ ಕೆಟ್ಟ ವ್ಯಕ್ತಿ ಎನ್ನುವಂತೆಯೋ ರಾಕ್ಷಸನೆನ್ನುವಂತೆಯೋ ಭಾವಿಸಲ್ಪಡುತ್ತಿದ್ದ. ಇಂದಿಗೂ ಮಾರ್ಕ್ಸ್ ಎಂದಾಕ್ಷಣ ಬೆಚ್ಚಿ ಬೀಳುವ ಜನರಿದ್ದಾರೆ ಎನ್ನುವಲ್ಲಿ ಬಂಡವಾಳಶಾಹಿ ವ್ಯವಸ್ಥೆಗೆ ಸೋತು ತನ್ನತನವನ್ನೇ ಒಪ್ಪಿಸಿಕೊಂಡ ಮನಸ್ಸುಗಳನ್ನು ಕಾಣಬಹುದು. ಹೀಗಿರುವಾಗ ಮಾರ್ಕ್ಸ್‌ಗೆ ಒಂದು ಘನತೆ ಯನ್ನು ತಂದುಕೊಟ್ಟದ್ದು ಯಾರು ಎಂದರೆ, ಬಹುಪಾಲು ಅದರ ಕೀರ್ತಿ ರಷ್ಯಾದಲ್ಲಿದ್ದ ಕಮ್ಯುನಿಸ್ಟ್ ಸರಕಾರಕ್ಕೆ ಸಲ್ಲಬೇಕು. ಮಾರ್ಕ್ಸ್‌ನಂಥ ಒಬ್ಬ ವ್ಯಕ್ತಿಯನ್ನು ಉದಾಹರಣೆಗೆ ತೆಗೆದುಕೊಂಡ ಮೇಲೆ ಇನ್ನೂ ಒಂದು ಅಂಶ ವನ್ನು ಗಮನಿಸಬೇಕು. ಯಾವುದೇ ರಾಜಕೀಯ, ಆರ್ಥಿಕ ಶಕ್ತಿಯ ಬೆಂಬಲ ವಿಲ್ಲದೆ ಇದ್ದಾಗಲೂ ಶತಮಾನವನ್ನು ದಾಟಿ ಪ್ರಸ್ತುತವಾಗಬಲ್ಲಂಥ ಚಿಂತನೆಯೊಂದಕ್ಕೆ ಸ್ಪಷ್ಟ ರೂಪ ಕೊಡುವುದಕ್ಕೆ ಮಾರ್ಕ್ಸ್‌ನಿಂದ ಹೇಗೆ ಸಾಧ್ಯವಾಯಿತೆಂಬುದೇ ಪ್ರಶ್ನೆ. ಅದಕ್ಕೆ ಉತ್ತರ ಪಡೆಯಬೇಕಾದರೆ ಮಾರ್ಕ್ಸ್‌ನ ವ್ಯಕ್ತಿತ್ವವನ್ನು ಸಮಗ್ರವಾಗಿ ಅಧ್ಯಯನ ಮಾಡಬೇಕು. ಹೈಸ್ಕೂಲ್ ವಿದ್ಯಾರ್ಥಿಯ ಹಂತದಲ್ಲಿ ಆತ ಹೇಳಿದ ಈ ಮಾತುಗಳು ಅವನ ವ್ಯಕ್ತಿತ್ವವನ್ನು ಸೂಕ್ಷ್ಮವಾಗಿ ಪರಿಚಯಿಸಬಹುದೇನೋ :

– ''ನಾವು ಯಾವ ಒಂದು ಉದ್ಯೋಗ ವನ್ನು ಕೈಗೊಳ್ಳಲು ಅಪೇಕ್ಷೆ ಪಡುತ್ತೇವೋ ಅದನ್ನು ಪಡೆಯಲು ನಮಗೆ ಸಾಧ್ಯವಾಗದೆ ಹೋಗಬಹುದು. ಯಾಕೆಂದರೆ ಸಮಾಜ ದೊಳಗಿನ ನಮ್ಮ ಸಂಬಂಧಗಳು ನಾವು ಅವುಗಳನ್ನು ನಿರ್ಧರಿಸುವ ಸ್ಥಿತಿಗೆ ತಲುಪುವು ದಕ್ಕಿಂತ ಮೊದಲೇ ಒಂದು ಮಟ್ಟಿಗೆ ನಿರ್ಧಾರ ಹೊಂದಿರುತ್ತವೆ. ನಾವು ಕೇವಲ ಸ್ವಾರ್ಥಪರತೆಯ ಕರಟದೊಳಗೆ ಸೇರದೆ ಮಾನವ ಕುಲದ ಒಳಿತಿಗಾಗಿ ದುಡಿಯ ಬೇಕು. ಒಬ್ಬನು ತನಗಾಗಿಯೇ ಕೆಲಸ ಮಾಡುವವನಾದರೆ ಒಂದು ವೇಳೆ ಪ್ರಸಿದ್ಧ

**''ನಾವು ಯಾವ ಒಂದು ಉದ್ಯೋಗವನ್ನು ಕೈಗೊಳ್ಳಲು ಅಪೇಕ್ಷೆ ಪಡುತ್ತೇವೋ ಅದನ್ನು ಪಡೆಯಲು ನಮಗೆ ಸಾಧ್ಯವಾಗದೆ ಹೋಗಬಹುದು. ಯಾಕೆಂದರೆ ಸಮಾಜದೊಳಗಿನ ನಮ್ಮ ಸಂಬಂಧಗಳು ನಾವು ಅವುಗಳನ್ನು ನಿರ್ಧರಿಸುವ ಸ್ಥಿತಿಗೆ ತಲುಪುವುದಕ್ಕಿಂತ ಮೊದಲೇ ಒಂದು ಮಟ್ಟಿಗೆ ನಿರ್ಧಾರ ಹೊಂದಿರುತ್ತವೆ. ನಾವು ಕೇವಲ ಸ್ವಾರ್ಥ ಪರತೆಯ ಕರಟದೊಳಗೆ ಸೇರದೆ ಮಾನವ ಕುಲದ ಒಳಿತಿಗಾಗಿ ದುಡಿಯಬೇಕು. ಒಬ್ಬನು ತನಗಾಗಿಯೇ ಕೆಲಸ ಮಾಡುವವನಾದರೆ ಒಂದು ವೇಳೆ ಪ್ರಸಿದ್ಧ ಮೇಧಾವಿಯೆನಿಸಬಹುದು ಅಥವಾ ದೊಡ್ಡ ಸಂತನೆನಿಸಬಹುದು. ಅಲ್ಲವಾದರೆ ಶ್ರೇಷ್ಠ ಕವಿಯೆನಿಸಬಹುದು. ಆದರೆ ಅವನೆಂದಿಗೂ ಮಹಾಪುರುಷನಾಗಲಾರ...''** ಕಾರ್ಲ್ ಮಾರ್ಕ್ಸ್.

*– (ಮಾರ್ಕ್ಸ್‌ವಾದಿ ವಿಚಾರಧಾರೆ, ಸಂಪುಟ.೧ – ಬಿ. ವಿ. ಕಕ್ಕಿಲ್ಲಾಯ, ಪುಟ ಸಂಖ್ಯೆ ೧೮, ೧೯)*

ಮೇಧಾವಿಯೆನಿಸಬಹುದು ಅಥವಾ ದೊಡ್ಡ ಸಂತನೆನಿಸಬಹುದು. ಅಲ್ಲವಾದರೆ ಶ್ರೇಷ್ಠ ಕವಿಯೆನಿಸಬಹುದು. ಆದರೆ ಅವನೆಂದಿಗೂ ಮಹಾಪುರುಷನಾಗಲಾರ...'' – (ಮಾರ್ಕ್ಸ್‌ವಾದಿ ವಿಚಾರಧಾರೆ, ಸಂಪುಟ.೧ – ಬಿ. ವಿ. ಕಕ್ಕಿಲ್ಲಾಯ, ಪುಟ ಸಂಖ್ಯೆ ೧೮, ೧೯). ಬಾಲ್ಯದಲ್ಲಿ ಮಾರ್ಕ್ಸ್ ಆಡಿದ್ದ ಈ ಮಾತುಗಳು ಆತ ಗಳಿಸಿಕೊಂಡಿದ್ದ ನೈತಿಕ ಶಕ್ತಿಗೆ ಕನ್ನಡಿ ಹಿಡಿಯುವಂತಿವೆ. ಆ ಶಕ್ತಿ ಎಲ್ಲ ಅನನುಕೂಲತೆಗಳನ್ನೂ ಮೀರಿ ಸ್ಥಗಿತ ಸಮಾಜಕ್ಕೆ ಚಾಲನೆಯನ್ನು ಕೊಡಬಲ್ಲುದು. ಆದರೆ ಅಂಥ ಶಕ್ತಿಯ ವ್ಯಾಪಕತೆಯನ್ನು ರಾಜಕೀಯವು ನಿಯಂತ್ರಿಸುತ್ತದೆ ಎನ್ನುವುದನ್ನು ಒಪ್ಪಿಕೊಳ್ಳಬೇಕು. ಅದಕ್ಕೇ ಮಾರ್ಕ್ಸ್‌ನ ಆರ್ಥಿಕ ಚಿಂತನೆ ಪ್ರಚಲಿತವಿರುವಷ್ಟು, ಆತನ ಸಾಂಸ್ಕೃತಿಕ, ಸಾಮಾಜಿಕ ಚಿಂತನೆ ಪ್ರಚಲಿತವಿಲ್ಲದಿರುವುದೇ ಸಾಕ್ಷಿ. ಹಾಗಾಗುವುದಕ್ಕೆ ಕಾರಣವನ್ನು ಶೀತಲ ಸಮರದಲ್ಲಿ ಕಂಡುಕೊಳ್ಳಬಹುದು. ಬಂಡವಾಳಶಾಹಿ ಪ್ರಭುತ್ವಕ್ಕೆ ಮಾರ್ಕ್ಸ್‌ನ ರಾಜಕೀಯ ಚಿಂತನೆಗಳನ್ನು ದೂಷಿಸಿ ಜನ ಅದನ್ನು ಸ್ವೀಕರಿಸದಂತೆ ಮಾಡುವುದು ಮುಖ್ಯವಾಗಿದ್ದರೆ ಕಮ್ಯುನಿಸ್ಟ್ ಬಣಗಳಿಗೆ ಬಂಡವಾಳಶಾಹಿ ಪ್ರಭುತ್ವವನ್ನು ದೂರ ಇರಿಸುವುದಕ್ಕೆ ಮಾರ್ಕ್ಸ್‌ನ ಆರ್ಥಿಕ ಚಿಂತನೆಯನ್ನು ಮುಂದಿಡುವುದು ಅನಿವಾರ್ಯ ವಾಯಿತು. ಹಾಗೂ ಅದು ಕಮ್ಯುನಿಸ್ಟ್ ಬಣಗಳ ಹಿತಾಸಕ್ತಿಯನ್ನು ಪೋಷಿಸುವುದಕ್ಕೆ ಅನುಕೂಲಕರವೂ ಆಯಿತು. ಅಂಥಲ್ಲಿ ಬಂಡವಾಳಶಾಹಿ ವ್ಯವಸ್ಥೆ, 'ಮಾರ್ಕ್ಸ್ ಚಿಂತನೆ ಸಾಂಸ್ಕೃತಿಕ ಬದುಕನ್ನು ಸಾಯಿಸುತ್ತದೆ' ಎಂದೂ, ಕಮ್ಯುನಿಸ್ಟ್ ಬಣಗಳು ಮಾರ್ಕ್ಸ್ ಚಿಂತನೆ, 'ಬದುಕುವುದಕ್ಕೆ ಅವಶ್ಯ'ವೆಂದೂ ಬಿಂಬಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಆದರೆ ಈ ಕ್ರಿಯೆಯಿಂದ ಆದದ್ದು ಎರಡು ರೀತಿಯ ನಷ್ಟ. ಒಂದು, ಮಾರ್ಕ್ಸ್‌ನಂಥ ಅದ್ಭುತ ಚೇತನಕ್ಕೆ ಅವಮಾನ ವಾದರೆ ಇನ್ನೊಂದು ವಿಶ್ವದ ಜನತೆಗೆ ಅನ್ಯಾಯ. ಒಂದು ವೇಳೆ ಆತನ ಆರ್ಥಿಕ ಚಿಂತನೆ ಯಷ್ಟೇ ಪ್ರಭಾವಶಾಲಿಯಾಗಿ ಸಾಂಸ್ಕೃತಿಕ-ಸಾಮಾಜಿಕ ಚಿಂತನೆಗಳು ಪ್ರತಿಪಾದಿಸಲ್ಪಡುತ್ತಿದ್ದರೆ ಎಡಪಂಥ ಇನ್ನಷ್ಟು ಹುಲುಸಾಗಿ ಬೆಳೆಯುತ್ತಿತ್ತು. ಜಗತ್ತಿನ ಜನತೆಗೆ ಲಾಭವಾಗುತ್ತಿತ್ತು. ಆದರೂ ಮಾರ್ಕ್ಸ್ ಮುಖ್ಯನಾಗುತ್ತಾನೆ. ಬಂಡವಾಳಶಾಹಿ ಪ್ರಭುತ್ವ ಸಂಸ್ಕೃತಿಯ ದೃಷ್ಟಿಕೋನವನ್ನು ಬಿಂಬಿಸುತ್ತಾ ಸಾಮಾನ್ಯ ಜನತೆಯ ಆರ್ಥಿಕ ಅಧಃಪತನವನ್ನು ತಂದಾಗ ಸಾಮಾನ್ಯ ಜನತೆ ಮಾರ್ಕ್ಸ್‌ನ ಆರ್ಥಿಕ ಸಿದ್ಧಾಂತದತ್ತ ಒಲವು ತೋರಿಸಬೇಕಾಗುತ್ತದೆ. ಆದರೆ ಮತ್ತೆ ಆರ್ಥಿಕ ಸಿದ್ಧಾಂತದ ಅತಿರೇಕದ ಅಪಾಯಕಾರಿ ನಿಲುವುಗಳು ಪ್ರಚಾರಕ್ಕೆ ಬರಬಹುದು. ಅಂಥ ಸಂದರ್ಭದಲ್ಲಿ ಬಂಡವಾಳಶಾಹಿಯನ್ನು ಎದುರಿಸುವುದಕ್ಕೆ ಮಾರ್ಕ್ಸ್‌ನ ಸಾಂಸ್ಕೃತಿಕ ಚಿಂತನೆ ಒಂದು ಪ್ರಬಲ ಅಸ್ತ್ರವಾಗಬಹುದು. ಅದು ಇಂಡಿಯಾ ದೇಶಕ್ಕೆ ಸಂಬಂಧಿಸಿದಂತೆ ಹಲವು ಬದಲಾವಣೆಗೆ ಒಡ್ಡಿಕೊಳ್ಳಬೇಕಾಗಬಹುದು. ಹಾಗೆ ಎಡಪಂಥ ತನ್ನನ್ನು ತಾನು ಸಾಂಸ್ಕೃತಿಕ ಬದುಕಿನೊಂದಿಗೆ ಒಳಗೊಳ್ಳಿಸಿಕೊಳ್ಳುವುದಕ್ಕೆ ಸಿದ್ಧವಾದಾಗ ಮಾರ್ಕ್ಸ್ ಇನ್ನೊಮ್ಮೆ ಸಮಾಜಕ್ಕೆ ಚಲನಶೀಲತೆಯನ್ನು ತೋರಿಸಿಕೊಡಬಲ್ಲ.

ಅನುಭವ ಚಿಂತನೆಯ ಒಟ್ಟು ಉದ್ದೇಶವನ್ನು ಗ್ರಹಿಸಿದಾಗ ಅದು ಭೌತಿಕವಾದ ಎಲ್ಲವನ್ನೂ ಸಮಾನವಾಗಿ ಪಡೆದುಕೊಳ್ಳುವ ಮೂಲಕ ಸಮಾನತೆಯನ್ನು ತರಲು ಪ್ರಯತ್ನಿಸುತ್ತದೆ ಎಂಬುದನ್ನು ಮನಗಾಣಬಹುದು. ಹಾಗಿದ್ದರೆ ಅನುಭಾವಿಕ ಚಿಂತನೆಯ ಉದ್ದೇಶವೇನು ? ಅದು ಭೌತಿಕವಾದ ಎಲ್ಲವನ್ನೂ ಕಳೆದುಕೊಳ್ಳುವ ಮೂಲಕ ಸಮಾನತೆ ಯನ್ನು ತರಲು ಉದ್ದೇಶಿಸುತ್ತದೆ. ಅಲ್ಲಿ ಸೂಫಿ ಸಂತರು, ರಾಮಕೃಷ್ಣ ಪರಮಹಂಸರು, ಮಹಾವೀರ, ಗಾಂಧೀಜಿ ಮುಂತಾದವರು ಮಾರ್ಗದರ್ಶನ ಮಾಡುತ್ತಾರೆ. ಒಬ್ಬ ಸೂಫಿ ಸಂತನಿಗೆ ಏನೂ ಬೇಕೆನಿಸಲಿಲ್ಲ. ಕೊನೆಗೆ ಆಹಾರವೇ ಇಲ್ಲದೆ ಸಾಯುವ ಸ್ಥಿತಿಗೆ ಬಂದಾಗ ಆತನಿಗೆ ಯಾವ ಭಯವೂ ಆಗಲಿಲ್ಲ. ತನ್ನ ಇಡೀ ಬದುಕು ಅರ್ಥಹೀನ ಎನ್ನಿಸಿತು. ಅದು ಸತ್ಯವೇ ತಾನೇ? ಹೊಡೆದಾಟ-ಬಡಿದಾಟ-ಕಿತ್ತಾಟಗಳಿಂದ ನಾವು ಅಧಿಕಾರ ಪಡೆಯುತ್ತೇವೆ, ಹಣ ಸಂಪಾದಿಸುತ್ತೇವೆ, ಕೀರ್ತಿ ಗಳಿಸುತ್ತೇವೆ. ಕೊನೆಗೆ ಉಳಿಯುವುದಾದರೂ ಏನು ? ಹಣ-ಅಧಿಕಾರಗಳೆಲ್ಲವೂ ಅಲ್ಪಾಯುಷಿ. ಮನುಷ್ಯನ ಮರಣದೊಂದಿಗೆ ಅವಕ್ಕೆ ಯಾವ ಅರ್ಥವೂ ಉಳಿಯುವುದಿಲ್ಲ. ಇನ್ನು ಕೀರ್ತಿ, ಅದು ಉಳಿದವಕ್ಕೆ ಹೋಲಿಸಿದರೆ ದೀರ್ಘಾಯುಷಿ. ಆದರೆ ಅದೂ ಕೂಡ ಶಾಶ್ವತವಲ್ಲ. ಒಂದಲ್ಲ ಒಂದು ದಿನ ಈ ಭೂಮಿಯೇ ನಾಶವಾಗುತ್ತದೆ ಎಂದಾಗ ಕೀರ್ತಿ ಎಲ್ಲಿ ಉಳಿದೀತು ? ಇದೆಲ್ಲವನ್ನೂ ತಿಳಿದ ಅನುಭಾವಿಕರು ಭೌತಿಕವಾದ ಇವೆಲ್ಲವನ್ನೂ ಮೀರಿದ, ಸಾಮಾನ್ಯರ ತಿಳಿವಳಿಕೆಯ ಪರಿಧಿಯ ಆಚೆಗೆ ದೃಷ್ಟಿಸಿದರು. ಆ ಪ್ರಯತ್ನದಲ್ಲಿ ಅವರು ಯಶಸ್ವಿಯಾದರೋ ಇಲ್ಲವೋ ಗೊತ್ತಿಲ್ಲ. ಏಕೆಂದರೆ ಅದು ವೈಯಕ್ತಿಕ ಸಾಧನೆಯಾಗಿದ್ದು ಸಾಧಕ ಮಾತ್ರ ಅದನ್ನು ಅರಿಯಬಲ್ಲ. ಆ ಹಂತಕ್ಕೆ ಏರಿದವರಿಗೆ ಅದರ ಅರಿವಾಗಬಹುದು. ಆದರೆ ಸಾಮಾನ್ಯರ ಹಂತದಲ್ಲಿ ಅರಿವಿಗೆ ಬರಲಾರದು. ಹೀಗಿದ್ದರೂ ಅನುಭಾವಿಕರು ಮುಖ್ಯರಾಗುತ್ತಾರೆ. ಒಂದು - ಅವರ ಶಕ್ತಿಯ ಕಾರಣಕ್ಕಾಗಿ. ಇನ್ನೊಂದು - ಅವರು ಪ್ರತಿಪಾದಿಸಿದ ತತ್ವಗಳು ಭೌತಿಕ ಬದುಕಿನ ಮೇಲೆ ಬೀರುವ ಪರಿಣಾಮಕ್ಕಾಗಿ.

ಅನುಭಾವಿಕರಿಗೂ ನಿಶ್ಚಲ ಸಮಾಜವನ್ನು ಚಲನಶೀಲತೆಗೆ ಒಡ್ಡುವ ಸಾಮರ್ಥ್ಯವಿತ್ತು. ಬಹುಮಂದಿಯಿಂದ ಸಮ್ಮತಿಗೊಳಗಾದ ಸ್ಥಿತಿಯನ್ನು ಪ್ರತಿರೋಧಿಸುವ ಶಕ್ತಿ ಇತ್ತು. ಬುದ್ಧ, ಗಾಂಧೀಜಿ, ಮಹಾವೀರ ಎಲ್ಲರೂ ಅದನ್ನು ಮಾಡಿ ತೋರಿಸಿದರು. ರಾಜಕುಮಾರ ಅರಮನೆಯಲ್ಲಿ ಸುಖವಾಗಿ ಬದುಕಿರಬೇಕು ಎಂಬ ನಂಬಿಕೆಗೆ ಬುದ್ಧ ಬಲವಾದ ಹೊಡೆತ ಕೊಟ್ಟ. ಬಟ್ಟೆ ಧರಿಸುವುದು ನಾಗರಿಕತೆಯ ಲಕ್ಷಣವೆಂದು ನಂಬಿರುವಾಗ ಜಿನ ಆ ನಂಬಿಕೆ ಯನ್ನು ಕಿತ್ತೆಸೆದ. ಗಾಂಧೀಜಿ ಸತ್ಯಾಗ್ರಹ, ಅಹಿಂಸೆಯ ಮೂಲಕ ಹೋರಾಟದ ಬಗೆಗಿದ್ದ ಭಾವನೆಯನ್ನು ಹೊರದೂಡಿದರು. ಇವರೆಲ್ಲರಿಗೆ ತಮ್ಮ ಸಾಧನೆಗೆ ಅಡ್ಡಿಯಾಗುತ್ತದೆ ಎನಿಸಿದ ಯಾವ ನಂಬಿಕೆಯನ್ನೂ ಮೀರಿ ಹೋಗುವುದು ಅಸಾಧ್ಯವೆನ್ನಿಸಲಿಲ್ಲ. ಆದರೆ ಅವರ ಅನುಯಾಯಿಗಳಿಗೆ ಆ ಸಮಸ್ಯೆ ತಲೆದೋರಿತು. ಅದಕ್ಕೆ ಕಾರಣ ಅವರನ್ನು ನಿಯಂತ್ರಿಸಿದ ಸಂಪ್ರದಾಯ ಹಾಗೂ ದೌರ್ಬಲ್ಯ. ಇಂದಿಗೂ ಬಟ್ಟೆ ಧರಿಸದಿರುವುದು ನಾಗರಿಕತೆ ಎನ್ನಿಸಿಲ್ಲ. ಆದರೆ ಜೈನ ಗುರುಗಳು ದಿಗಂಬರರಾಗಿದ್ದಾರೆ. ಹಾಗೆಂದು ಅವರಾದರೂ ಮಹಾವೀರನ ಸ್ಥಾನವನ್ನು ಪಡೆಯುವುದಿಲ್ಲ. ಏಕೆಂದರೆ ಅವರೆಲ್ಲರೂ ಮಹಾವೀರ ಏನು ಹೇಳಿದನೋ ಆ ಸಂಪ್ರದಾಯವನ್ನು ಅನುಸರಿಸುತ್ತಾರೆಯೇ ಹೊರತು ಅವನಲ್ಲಿದ್ದ ಶಕ್ತಿಯನ್ನಲ್ಲ. ಆದರೂ ಅವರು ಗೌರವಾರ್ಹರಾಗುವುದಕ್ಕೆ ಕಾರಣ ಸಂಪ್ರದಾಯ. ಆ ಸಂಪ್ರದಾಯವನ್ನು ಒಪ್ಪಿಕೊಂಡ ಮನಸ್ಸು ನಗ್ನತೆಯನ್ನು ಅನಾಗರಿಕತೆ ಎಂದಾಗಲೂ ದಿಗಂಬರ ಗುರುಗಳನ್ನು ಗೌರವಿಸುತ್ತದೆ. ಗಾಂಧೀಜಿಯವರ ಅನುಯಾಯಿಗಳ ಸೋಲೂ ಇಲ್ಲೇ ಇದೆ. ಗಾಂಧೀಜಿಯವರ ವಿಚಾರ, ವೇಷ-ಭೂಷಣಗಳೆಲ್ಲವೂ ಪ್ರತಿಪಾದನೆಯಾದರೂ ಅವರ ಶಕ್ತಿಯನ್ನು ಪಡೆಯುವಲ್ಲಿ ಗಾಂಧೀಜಿ ಶಿಷ್ಯರು ಸೋಲುತ್ತಾರೆ. ಹೀಗಾಗಿ ಎಲ್ಲ ಅನುಭಾವಿಕರ ತಾತ್ವಿಕ ಶಕ್ತಿ ಮಾಯವಾಗಿ ಪ್ರತಿಪಾದನೆಗಳು ಮಾತ್ರ ಆಚರಣೆಗಳಾಗಿ ಉಳಿದುಕೊಂಡಿವೆ. ಅವನ್ನು ಸಂಸ್ಕೃತಿ ಎನ್ನಲಾಗುತ್ತದೆ. ಆಚರಣೆಗಳೇ ಯಾವತ್ತು ಸಂಸ್ಕೃತಿ ಎನಿಸಿಕೊಳ್ಳುತ್ತದೋ ಆಗ ಅದು ಸಮಾಜವನ್ನು ಜಡ್ಡು ಕಟ್ಟಿಸುತ್ತದೆ. ಆದರೆ ಅನುಭಾವಿಕ ಶಕ್ತಿ ಚಲನಶೀಲ ಪ್ರಕ್ರಿಯೆಯನ್ನು ಒದಗಿಸುತ್ತದೆ ಎಂಬ ಮಹತ್ವದ ಅಂಶವನ್ನು ಗಮನಿಸಬೇಕು.

ಇಂಥ ಅನುಭಾವಿಕರ ಜಾಡಿನಲ್ಲಿ ಸಾಗುವ ಆಚರಣೆಗಳಿಂದ ಹೊರಗಿಟ್ಟು ಅವರನ್ನು ಗಮನಿಸಿದರೆ ಅವರು ಬೀರುವ ಪ್ರಭಾವ ಗಾಢವಾದದ್ದು. ಅವರಿಗೆ ಐಹಿಕ ಸುಖಭೋಗ ಗಳಾವುವೂ ಬೇಕಾಗಿರಲಿಲ್ಲ. ಹೆಂಡತಿ-ಮಕ್ಕಳೂ ಬೇಕಾಗಿರಲಿಲ್ಲ. (ಹೆಂಡತಿ ಮಕ್ಕಳು ಯಜಮಾನನ ಸೊತ್ತು ಎಂಬ ನಂಬಿಕೆ ಆ ಕಾಲದಲ್ಲಿತ್ತು ಎಂಬುದನ್ನು ಗಮನಿಸಬೇಕು). ಅಧಿ ಕಾರ, ಅಂತಸ್ತು, ಹಣ ಯಾವುದೂ ಬೇಕಾಗಿರಲಿಲ್ಲ. ಹಾಗಿರುವಾಗ ಕೊಲೆ, ರಕ್ತಪಾತ, ಅಶಾಂತಿ, ಜಗಳ, ಹೊಡೆದಾಟಗಳೂ ಬೇಕಾಗುವುದಿಲ್ಲ. ಏಸು, ಮನುಷ್ಯ - ಮನುಷ್ಯನನ್ನು ಪ್ರೀತಿಸಬೇಕು ಎಂದ. ಬುದ್ಧ ಇನ್ನು ಒಂದು ಹೆಜ್ಜೆ ಮುಂದೆ ಹೋಗಿ ಸಕಲ ಜೀವರಾಶಿ ಗಳನ್ನೂ ಪ್ರೀತಿಸುವ ತತ್ವವನ್ನು ಸಾರಿದ. ಅದು ಅನುಭಾವದ ಪರಮೋನ್ನತ ಹಂತ.

ಈ ಸಾಲಿನಲ್ಲಿ ಬರುವ ಅನುಭಾವಿಕರಿಗಿಂತ ಭಿನ್ನವಾಗಿ ಬಸವೇಶ್ವರರು ಕಾಣಿಸುತ್ತಾರೆ. ಅವರು ಐಹಿಕ ಸುಖಗಳನ್ನು ಒಂದು ಹಂತದ ತನಕ ಅನುಭವಿಸುತ್ತಲೇ, ಹೆಂಡತಿ ಮಕ್ಕಳನ್ನು ತೊರೆಯದೆಯೇ ಅನುಭಾವಿಕ ನೆಲೆಯನ್ನು ಕಂಡುಕೊಳ್ಳುವುದಕ್ಕೆ ಪ್ರಯತ್ನಿಸಿದರು. (ಗಾಂಧೀಜಿ ಯವರು ಅಲ್ಪ ಸ್ವಲ್ಪ ಈ ಜಾಡಿನಲ್ಲಿ ಸಾಗಿದ್ದರೂ ಅವರು ಹೆಂಡತಿ ಮಕ್ಕಳಿಗೆ ಕೊಟ್ಟ ಆದ್ಯತೆ ಯನ್ನು ಗಮನಿಸಿದಾಗ ಅವರ ಅನುಭಾವಿಕ ಚಿಂತನೆ ಬುದ್ಧ ಮಹಾವೀರರತ್ತ ಸೆಳೆಯಲ್ಪಟ್ಟಿತ್ತು ಎನಿಸುತ್ತದೆ.) ಅವರು ಅನುಸರಿಸಿದ ಮಾರ್ಗ, ಪಾರಂಪರಿಕ ಅನುಭಾವಿಕ ನಡವಳಿಕೆಗೆ ಅಸಹಜವೆನಿಸಬಹುದು. ಆದರೆ ಅದೂ ಒಂದು ಪ್ರತಿರೋಧವೆನ್ನುವುದು ಮುಖ್ಯವಾಗುತ್ತದೆ.

ಈ ಹಿನ್ನೆಲೆಯಲ್ಲಿ ಬಸವೇಶ್ವರರು ಅನುಭವ ಮತ್ತು ಅನುಭಾವಿಕ ಚಿಂತನೆಗಳೆರಡನ್ನೂ ಒಟ್ಟು ಸೇರಿಸಿದವರಾಗಿ ಕಾಣಿಸುತ್ತಾರೆ. ಭಕ್ತಿಮಾರ್ಗ ಅನುಭಾವಿಕ ನೆಲೆಯನ್ನು ತಲುಪುವ ಅವರ ಪ್ರಯತ್ನವಾದರೆ ಅವರೇ ನಡೆಸಿದ ಅಂತರ್‌ಜಾತೀಯ ವಿವಾಹ, ಜಾತಿಯ ಅಂತರವನ್ನು ಕಿರಿದುಗೊಳಿಸುವ ಜೀವನಮಾರ್ಗವಾಗಿ ಗೋಚರಿಸುತ್ತದೆ. ಹೆಂಗಸರಿಗೂ ಶಿವದಾರವನ್ನು ತೊಡಿಸಿದ ಕಾರ್ಯ, ಇಂದು ನಾವು ಮಹಿಳಾ ಹಕ್ಕುಗಳ ಬಗ್ಗೆ ಏನೆಲ್ಲ ಪ್ರತಿಪಾದನೆ ಮಾಡುತ್ತೇವೆಯೋ ಅಂಥ ಪ್ರತಿಪಾದನೆಯ ಕಾರ್ಯಾಚರಣೆಯಾಗಿ ಕಾಣಿಸುತ್ತದೆ. ಹಜಾಮ, ಕೃಷಿಕ, ಮಲಹೊರುವ ದಲಿತ ಎಲ್ಲರನ್ನೂ ತಮ್ಮ ಶಿಷ್ಯವರ್ಗಕ್ಕೆ ಸೇರಿಸಿಕೊಂಡ ಅವರ ನಡವಳಿಕೆ ಮಾನವ ಘನತೆಯನ್ನು, ವೃತ್ತಿಗೌರವವನ್ನು ಎತ್ತಿ ಹಿಡಿಯುವ ಮಾನವ ಹಕ್ಕಿನ ಪ್ರತಿಪಾದನೆ ಎನ್ನುವುದಕ್ಕೆ ಯಾವ ಅಡ್ಡಿಯೂ ಇಲ್ಲ.

ಇಂದು ನಾವು ಗುರುತಿಸುವ ಕೆಡುಕುಗಳಾದರೂ ಇವೇ ಅಲ್ಲವೇ ? ಆ ಕೆಡುಕುಗಳನ್ನು ತೊಡೆದುಹಾಕಬೇಕಾದರೆ ಇವೆಲ್ಲವುಗಳಿಂದ ಏನು ಉಪಯೋಗ ಎನ್ನುವ ಅನುಭಾವಿಕ ಹಿನ್ನೆಲೆಯೂ ಬೇಕು. ಆದರೆ ಅದು ಅತಿಯಾದಾಗ, ಹಿಂದಿನ ಅನುಭಾವಿಕರು ಏರಿದ ಹಂತವನ್ನು ತಲುಪಲು ಸಾಧ್ಯವಾಗದೆ ಜೀವನೋತ್ಸಾಹವನ್ನು ಕಳೆದುಕೊಳ್ಳುವ ಅಪಾಯವಿದೆ. ಅಂಥಲ್ಲಿ ಆ ಉತ್ಸಾಹವನ್ನು ತುಂಬುವುದಕ್ಕೆ 'ಇದ್ದುದನ್ನು ಸಮಾನವಾಗಿ ಅನುಭವಿಸೋಣ' ಎನ್ನುವ ಅನುಭವದ ಹಿನ್ನೆಲೆಯೂ ಬೇಕು. ಇವೆರಡೂ ಜೊತೆಯಾಗಿ

ಸಾಗಿದಾಗ ಬದುಕು ಈಗ ಇರುವುದಕ್ಕಿಂತ ಉತ್ತಮವಾದೀತು. ಅಷ್ಟು ಆಗಬೇಕಾದರೆ ನಾವು ಗುರುತಿಸುವ ಕೆಡುಕುಗಳ ಮೂಲವನ್ನು ಸ್ಪಷ್ಟಪಡಿಸಿಕೊಳ್ಳಬೇಕು.

ಬಡತನ, ಜಾತೀಯ ಅಸಮಾನತೆ, ಮಹಿಳಾ ಸಮುದಾಯದ ಮೇಲೆ ನಡೆಯುವ ದಬ್ಬಾಳಿಕೆ, ವೃತ್ತಿ ತಾರತಮ್ಯ, ಮಕ್ಕಳ ಮೇಲೆ ಹೇರಲ್ಪಡುವ ಒತ್ತಡ, ಭ್ರಷ್ಟಾಚಾರ, ಕೋಮುಗಲಭೆ, ಕೊಲೆ, ರಕ್ತಪಾತ, ನಿರುದ್ಯೋಗ ಇಂಥ ಎಲ್ಲ ಕೆಡುಕುಗಳನ್ನೂ ಒಂದೇ ಮಾತಿನಲ್ಲಿ ಹೇಳಬಹುದಾದರೆ ಅದು ಶೋಷಣೆ. ಆಯಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಶೋಷಣೆಯ ಸ್ವರೂಪದಲ್ಲಿ ವ್ಯತ್ಯಾಸವಿರಬಹುದು. ಆದರೆ ಉದ್ದೇಶ ಒಂದೇ. ಅದು ಅತಿರೇಕದ ಸ್ವಾರ್ಥ. ಇತರರು ಬಡವರಾಗಿದ್ದರೆ ತಾನು ದೊಡ್ಡವನಾಗುತ್ತೇನೆ, ಆಗ ಬಡವರ ಮೇಲೆ ತನ್ನ ಅಧಿಕಾರ ಚಲಾಯಿಸಬಹುದು. ಜಾತೀಯ ತಾರತಮ್ಯವಿದ್ದಾಗ ಹುಟ್ಟಿನ ಶ್ರೇಷ್ಠತೆಯ ಮೂಲಕ ಅಧಿಕಾರ ಚಲಾಯಿಸಬಹುದು. ಮಹಿಳೆ ಎರಡನೆಯ ದರ್ಜೆಯ ಪ್ರಜೆಯಾಗಿರುವ ತನಕವೂ ಆಕೆಯ ಮೇಲೆ ಅಧಿಕಾರ ಚಲಾಯಿಸುವುದಕ್ಕೆ ಆತಂಕವಿಲ್ಲ. ಮಕ್ಕಳ ಮೇಲೆ ಹೇರಲ್ಪಡುವ ಒತ್ತಡದಲ್ಲಿ ಒಂದು ತನ್ನ ಅಧಿಕಾರ ಚಲಾವಣೆಗೆ ಮೂಲಗಳನ್ನು ಕಂಡುಕೊಳ್ಳುವುದಾದರೆ ಇನ್ನೊಂದು ಮಕ್ಕಳನ್ನು ಲಾಭದಾಯಕ ಸರಕುಗಳಾಗಿ ಮಾರ್ಪಡಿಸುವ ಉದ್ದೇಶವಾಗಿರುತ್ತದೆ. ವೃತ್ತಿ ತಾರತಮ್ಯದ ಮೂಲಕ ವೃತ್ತಿ ಶ್ರೇಷ್ಠತೆಯನ್ನು ಸಾರುವ ಪ್ರಯತ್ನ ನಡೆಯುತ್ತದೆ. ಇತ್ತೀಚೆಗೆ ನಿರುದ್ಯೋಗದ ಕಾವು ಹೆಚ್ಚಾದಂತೆ ಮೇಲು ವರ್ಗದವರೂ ಕೆಳವರ್ಗದ ವೃತ್ತಿಯನ್ನು ಕೈಗೊಳ್ಳುವುದು ಅನಿವಾರ್ಯವಾಗಿಬಿಟ್ಟಿದೆ. ಹಾಗೆ ವೃತ್ತಿ ಬದಲಾವಣೆ ನಡೆದಾಗಲೂ ವೃತ್ತಿ ನಡೆಸುವ ವಾತಾವರಣದಲ್ಲಿ ಬದಲಾವಣೆಯಾಗುತ್ತದೆ. ಅದು ಆ ವೃತ್ತಿಯ ಮೂಲ ವಾತಾವರಣಕ್ಕಿಂತ ವೈಭವಪೂರ್ಣವಾಗಿರುತ್ತದೆ. ಈ ವೈಭವವೆಂದರೇನು ? ಅದು ಮೇಲು ವರ್ಗದ ಸಂಸ್ಕೃತಿ. ಆ ಮೂಲಕ ಶ್ರೇಷ್ಠತೆಯನ್ನು ಉಳಿಸಿಕೊಳ್ಳುವ ಪ್ರಯತ್ನ ನಡೆಯುತ್ತದೆ. ಇನ್ನೊಂದು ಕಡೆ ಕೆಳವರ್ಗ ಎನ್ನಿಸಿಕೊಂಡವರೂ ವೃತ್ತಿ ವಾತಾವರಣಕ್ಕೆ ವೈಭವದ ಮೆರುಗು ಕೊಡುತ್ತಿರುತ್ತಾರೆ. ಆ ಮೂಲಕ ತಾವು ಮೇಲು ವರ್ಗಕ್ಕೆ ಸಮ ಎಂದು ಬಿಂಬಿಸುವುದು ಅವರ ಅಪೇಕ್ಷೆಯಾಗಿರುತ್ತದೆ. ಒಂದು ವೇಳೆ ಜನರನ್ನು ಆಕರ್ಷಿಸುವುದಕ್ಕಾಗಿ ಈ ಬದಲಾವಣೆ ಅನಿವಾರ್ಯವೆನ್ನುವುದಾದರೆ ಜನರೇಕೆ ವೈಭವೋಪೇತ ವಾತಾವರಣಕ್ಕೆ ಆಕರ್ಷಿತರಾಗಬೇಕು ? ಅದಕ್ಕೆ ಕಾರಣ ಈ ಸಮಾಜವನ್ನು ಬಲವಾಗಿ ಬಂಧಿಸಿರುವ ಮೇಲು ವರ್ಗದ ಹಿರಿಮೆಯ ಸೆಳಹು !

ಭ್ರಷ್ಟಾಚಾರ-ಲಂಚಕೋರತನದ ಮೂಲಕ ಲಾಭ ಗಳಿಸುವ ಉದ್ದೇಶವೂ ಇದೆ. ಗಟ್ಟಿಯಾದ ಆರ್ಥಿಕ ಶಕ್ತಿಯಾಗಿ ಇತರರನ್ನು ನಿಯಂತ್ರಣದಲ್ಲಿಡುವ ಹಂಬಲ ಅದು. ಅಂಥವರು ಮಾಡುವ ದಾನಧರ್ಮದಲ್ಲಿಯೂ ತನ್ನಿಂದ ಉಪಕೃತನಾದ ವ್ಯಕ್ತಿ ತನಗೆ ಎಂದೆಂದೂ ವಿಧೇಯನಾಗಿ ಇರಬೇಕೆಂಬ ಬಯಕೆ ಇರುತ್ತದೆ. ಕೋಮುಗಲಭೆ, ರಕ್ತಪಾತಗಳು ಒಂದು ಕೋಮನ್ನು ಪ್ರಬಲವಾಗಿಸುವಲ್ಲಿ ಪರ್ಯವಸಾನವಾಗುವುದಿಲ್ಲ. ಒಮ್ಮೆ ಕೋಮು ಶ್ರೇಷ್ಠತೆ ಕಂಡಿತೆಂದರೆ ನಂತರ ಆ ಕೋಮಿನಲ್ಲೇ ಶ್ರೇಷ್ಠತೆಗಾಗಿ ರಕ್ತಪಾತ ಸಂಭವಿಸುತ್ತದೆ. ಸ್ವಾರ್ಥಪರತೆ ಅತಿಯಾದಾಗ ಅದು ಅನಿವಾರ್ಯ. ಅಂಥ ಸ್ವಾರ್ಥಪರತೆ ಇಲ್ಲದಿದ್ದರೆ ಕೋಮುಗಲಭೆಯೇ ಸಂಭವಿಸಲಾರದು.

ಸ್ವಾರ್ಥಪರತೆಯು 'ಅತಿ' ಶೋಷಣೆಯ ಮೂಲವೆಂದಾಗ ಆ 'ಅತಿ'ಯನ್ನು ಕಡಿಮೆಗೊಳಿಸುವ ಕೆಲಸ ಆಗಬೇಕಾಗಿದೆ. ಅದು ಶೋಷಣಾ ಮುಕ್ತ ವಾತಾವರಣವನ್ನು ತರುವುದಕ್ಕೆ ಸಹಾಯವಾಗುತ್ತದೆ. ಶೋಷಣಾ ಮುಕ್ತ ಎನ್ನುವಾಗ, ಅದರ ಮಿತಿಗಳನ್ನು ತಿಳಿಯಬೇಕು. ಸಂಪೂರ್ಣ ಶೋಷಣಾ ಮುಕ್ತ ಸಮಾಜ ಎಂದಿಗೂ ನಿರ್ಮಾಣವಾಗಲಾರದು ಎಂಬುದನ್ನು ಗಮನಿಸಬೇಕು. ಶೋಷಣೆ ಎಂದು ಮಕ್ಕಳಿಗೆ ವಿದ್ಯಾಭ್ಯಾಸವನ್ನು ನಿಲ್ಲಿಸಿದರೆ? ಭೂಮಿಯನ್ನು ಉಳುಮೆ ಮಾಡುವುದರಿಂದ ಶೋಷಣೆಯಾಗುತ್ತದೆ ಎಂದುಕೊಂಡರೆ ? ಈ ಕಾಲಕ್ಕೆ ತಪ್ಪು ಎನಿಸುವ ಅಭಿಪ್ರಾಯಗಳನ್ನು ಬದಲಾಯಿಸದೇ ಹೋದರೆ? ಈ 'ರೆ'ಗಳಿಗೆಲ್ಲ ಉತ್ತರ ಹುಡುಕುತ್ತಾ ಹೋದರೆ ಬದುಕು ನಿಶ್ಚಲವಾಗಿಬಿಡುತ್ತದೆ. ಅಂದರೆ ಸಾರ್ವತ್ರಿಕ ಶೋಷಣಾ ಮುಕ್ತ ಸಮಾಜ ಸಾಧ್ಯವಿಲ್ಲವೆಂದು ಒಪ್ಪಿಕೊಳ್ಳಬೇಕಾಗುತ್ತದೆ. ನಮ್ಮ ರಾಜ್ಯಾಂಗವೂ ಕೂಡ ಸಂಪೂರ್ಣ ಶೋಷಣಾ ಮುಕ್ತತೆಯನ್ನೇನೂ ಪ್ರತಿಪಾದಿಸುವುದಿಲ್ಲ. ರಾಜ್ಯಾಂಗಕ್ಕೆ ಯಾವ ಅಗೌರವವನ್ನೂ ಸೂಚಿಸದೆ ಈ ಮಾತು ಹೇಳಬೇಕಾಗಿದೆ. ರಾಜ್ಯಾಂಗವು ಪ್ರಜೆಗಳಿಗೆ ಮೂಲಭೂತ ಹಕ್ಕುಗಳನ್ನು ಕೊಟ್ಟಿದೆ. ಆದರೆ ಅಗತ್ಯವೆಂದು ಕಂಡುಬಂದಾಗ ಆ ಹಕ್ಕುಗಳನ್ನು ಮೊಟಕುಗೊಳಿಸುವುದಕ್ಕೂ ಸರಕಾರಕ್ಕೆ ಅಧಿಕಾರ ಕೊಟ್ಟಿದೆ. ಅಂದರೆ ವ್ಯವಸ್ಥೆಯ ಒಳಿತಿಗಾಗಿ ಒಂದು ಹಂತದ ಶೋಷಣೆ ಅನಿವಾರ್ಯವೆಂದಾಯಿತು. ಆ ಕನಿಷ್ಠ ಹಂತವನ್ನು ತಲುಪುವುದೇ ಶೋಷಣೆಯ ವಿರುದ್ಧದ ಹೋರಾಟದ ಉದ್ದೇಶ ಎಂಬುದನ್ನು ಮನಗಾಣಬೇಕು.

**ಸುದ್ದಿ - ಸ್ವಾರ (ಹ)ಸ್ಯ**

ನಿಮಗೆ ಲಾಟರಿ ಬಂದಿಲ್ಲ ಅದಕ್ಕೆ ಮಾತಾಡ್ತೀರಿ. ಒಮ್ಮೆ ಲಾಟರಿ ಹಚ್ಚಿ ಟಿಟಿಕೆ ಹೊಡೆಯೋದ್ರಲ್ಲಿ ಕೋಟ್ಯಾದೀಶರಾಗ್ತೀರಿ.

- ಸಚಿವ ಬಾಬುರಾವ್ ಚಿಂಚನಸೂರು




-ಎಸ್. ಶಿವಾನಂದ್ ಯರಗಟ್ಟಿ

ಈ ಉದ್ದೇಶವನ್ನು ಕಾರ್ಯಗತಗೊಳಿಸಬೇಕಾದವರು ಯಾರು ? ಅನುಭಾವಿಕ ಹಿನ್ನೆಲೆಯಲ್ಲಿ ಹೇಳುವುದಾದರೆ ಧರ್ಮಗುರುಗಳು. ಸಮಾಜ ಯಾವಾಗ ಅವನತಿಯತ್ತ ಸಾಗುತ್ತದೋ ಆಗ ಅದಕ್ಕೆ ಮಾರ್ಗದರ್ಶನ ಮಾಡುವುದು ಧರ್ಮಗುರುಗಳ ಕರ್ತವ್ಯವೆಂದು ನಮ್ಮ ಪರಂಪರೆ ಒಪ್ಪಿಕೊಂಡಿದೆ. ಆದರೆ ಸದ್ಯ ಅಸ್ತಿತ್ವದಲ್ಲಿರುವ ಧರ್ಮ ಪೀಠಗಳು ಆ ಕರ್ತವ್ಯವನ್ನು ಮಾಡಬಲ್ಲವೇ ? ಆ ಸಾಧ್ಯತೆ ಬಹಳ ಕಡಿಮೆ ಎಂದೇ ಹೇಳಬೇಕು. ಏಕೆಂದರೆ ವಿವೇಕಾನಂದರಂಥ ಅನುಭಾವಿಕ ನಾಯಕರ ಕೊರತೆ ಈ ದೇಶಕ್ಕಿದೆ. ದೇಶ ಅಧಃಪತನದತ್ತ ಸಾಗಿದಾಗ ಅಂಥವರು ನಾಯಕತ್ವ ಒದಗಿಸಬಲ್ಲರು. ಈಗ ನಮ್ಮ ದೇಶ ಜಾಗತೀಕರಣದ ಬಿರುಸಿನಲ್ಲಿ ಸಾಂಸ್ಕೃತಿಕ-ಆರ್ಥಿಕ ಅವನತಿಯನ್ನು ಕಾಣುತ್ತಿದೆ. ಜಾತಿ, ಮತಗಳ ವಿದ್ವೇಷಗಳು ತಾಂಡವವಾಡುತ್ತಿವೆ. ಇಂಥಲ್ಲಿ ಇವನ್ನು ಪ್ರತಿರೋಧಿಸುವ ಒಂದು ಶಕ್ತಿ ತಕ್ಷಣ ಬೇಕಾಗಿದೆ. ಆದರೆ ನಮ್ಮ ಧರ್ಮಪೀಠಗಳಿಗೆ ಅಂಥ ಶಕ್ತಿ ಇದೆಯೇ ? ಒಬ್ಬ ನಾಯಕ ಸಮಾಜದ ಮುಖ್ಯವಾಹಿನಿಯ ಚಿಂತನೆಗೆ ಪೂರಕವಾಗಿ ಎಷ್ಟರಮಟ್ಟಿಗೆ ಕಾರ್ಯ ನಿರ್ವಹಿಸಬೇಕಾಗುತ್ತದೆಯೋ ಅದಕ್ಕಿಂತಲೂ ಹೆಚ್ಚಾಗಿ ಸಮಾಜಕ್ಕೆ ಮಾರಕವಾಗಬಲ್ಲ ಶಕ್ತಿಗಳನ್ನು ಪ್ರತಿರೋಧಿಸುವ ಶಕ್ತಿಯೂ ಇರಬೇಕಾಗುತ್ತದೆ. ಆತ ಕ್ರಿಯೆಯನ್ನು ಮುಂದುವರಿಸುವುದಕ್ಕಿಂತ ಮುಖ್ಯವಾಗಿ ಕ್ರಿಯೆಯನ್ನು ಸೃಷ್ಟಿಸಬಲ್ಲವನಾಗಿರಬೇಕಾಗುತ್ತದೆ. ನಾವು ಅನುಭಾವಿಕ ನಾಯಕರೆನ್ನಬಹುದಾದ ಬುದ್ಧ, ಮಹಾವೀರ, ಬಸವೇಶ್ವರ, ಗಾಂಧಿ ಮುಂತಾದವರಿಗೆ ಆ ಸಾಮರ್ಥ್ಯವಿತ್ತು. ಇಂದು ಕೆಲವು ಧರ್ಮಪೀಠಗಳ ಮುಖ್ಯಸ್ಥರೇ ಜನಾಂಗ ನಿರ್ಮೂಲನೆಗೆ, ಅಸಹನೆಗೆ ಪೋಷಕವಾಗುವ ಹೇಳಿಕೆ ನೀಡುತ್ತಿರುವಾಗ ಅಂಥ ನಾಯಕತ್ವ ಅಲ್ಲಿ ಸಿಗಲಾರದು. ಹಾಗಿದ್ದರೂ ತೀರಾ ಅಪವಾದವೆಂಬಂತೆ ಅಲ್ಲೊಬ್ಬರು, ಇಲ್ಲೊಬ್ಬರು ಅಂಥ ಗುರುಗಳು ಸಿಗುತ್ತಾರೆ. ಆದರೆ ಅಂಥ ಕ್ರಿಯಾಶೀಲ ಧರ್ಮಗುರುಗಳ ಸಂಖ್ಯೆ ಅಲ್ಪವಾಗಿದ್ದು ದುಷ್ಟ ಶಕ್ತಿಗಳ ಪ್ರವಾಹವನ್ನು ತಡೆಯುವುದು ಕಷ್ಟಸಾಧ್ಯವಾಗುತ್ತದೆ. ಮಿಕ್ಕುಳಿದವರಲ್ಲಿ ಕೆಲವೇ ಕೆಲವರು ದುಷ್ಟ ಶಕ್ತಿಗಳನ್ನು ಪ್ರೋತ್ಸಾಹಿಸುತ್ತಿದ್ದರೆ ಬಹುಮಟ್ಟಿನ ಗುರುಗಳು ದಿವ್ಯ ಮೌನಿಗಳಾಗಿರುವಂತೆ ಕಂಡುಬರುತ್ತಿದೆ. ತಕ್ಕಾಲದ ಮಟ್ಟಿಗಾದರೂ ಇವರೆಲ್ಲರೂ ತಮ್ಮ ದಿವ್ಯ ಮೌನವನ್ನು ಮುರಿದು ವ್ಯವಸ್ಥೆಯನ್ನು ತಹಬಂದಿಗೆ ತರುವುದಕ್ಕೆ ಸಿದ್ಧರಾಗಬೇಕಾಗಿದೆ.

ಇವರೆಲ್ಲರೂ ವಿಫಲರಾಗುವಾಗ ಒಂದು ಆಶಾಕಿರಣವಾಗಿ ಕಾಣಿಸುವುದು ಎಡಪಂಥೀಯ ಚಿಂತನೆ. ಆದರೆ ಅದನ್ನು ಜನ ಅಸಾಂಪ್ರದಾಯಿಕವಾಗಿ ಒಪ್ಪಿಕೊಂಡಿರುವುದರಿಂದ ಪಾರಂಪರಿಕ ನಂಬಿಕೆಯ ಬೆಂಬಲ ಅದಕ್ಕಿಲ್ಲ. ಅಂಥ ನಂಬಿಕೆಯನ್ನು ಗಳಿಸಿಕೊಳ್ಳಬೇಕಾದ್ದು ಎಡಪಂಥದ ಇಂದಿನ ಜರೂರಾಗಿದೆ. ಅದಕ್ಕಿರುವ ದಾರಿ ಎಂದರೆ ಜನರ ಸಾಂಸ್ಕೃತಿಕ ಜೀವನಕ್ಕೆ ಎಡಪಂಥ ಪ್ರವೇಶಿಸುವುದು. ಸಂಘಟಿತ ಕಾರ್ಮಿಕ ವರ್ಗದ ಪ್ರತಿನಿಧಿಯಾಗಿ ಅದು ಈ ತನಕ ಕಾರ್ಯ ನಿರ್ವಹಿಸಿದೆ. ಆದರೆ ಈಗ ಅಸಂಘಟಿತ ವರ್ಗದೊಳಕ್ಕೆ ಪ್ರವೇಶಿಸಬೇಕಾಗಿದೆ. ನಗರವನ್ನು ಕುರಿತಾದ ತನ್ನ ದೃಷ್ಟಿಯನ್ನು ಹಳ್ಳಿಯತ್ತ ಹೊರಳಿಸಬೇಕಾಗಿದೆ. ಅಸಂಘಟಿತ ಕಾರ್ಮಿಕ ವಲಯದ ಆಗುಹೋಗುಗಳನ್ನು ವಿಶ್ಲೇಷಿಸಬೇಕಾಗಿದೆ. ಜನರ ಸಾಂಸ್ಕೃತಿಕ ನಂಬಿಕೆಗೆ ತನ್ನಿಂದ ಯಾವ ತೊಡಕೂ ಸಂಭವಿಸಲಾರದೆಂಬುದನ್ನು ಮನವರಿಕೆ ಮಾಡಿಕೊಡಬೇಕಾಗಿದೆ. ಭಾವನಾತ್ಮಕವಾದ ನಂಬಿಕೆಗಳನ್ನು ಸಾರಾಸಗಟು ನಿರಾಕರಿಸುವ ಬದಲು ಆ ನಂಬಿಕೆಗಳಲ್ಲಿರುವ ಹುಳುಕುಗಳನ್ನು ಜನತೆ ತನಗೆ ತಾನೇ ಕಂಡುಕೊಳ್ಳುವಂಥ ಅರಿವನ್ನು ಮೂಡಿಸಬೇಕಾಗಿದೆ.

ಒಂದು ಸ್ವಸ್ಥ ಸಮಾಜದ ಕನಸು ಉಳ್ಳವರು ಜನರ ಮುಂದಿರಿಸಬೇಕಾದ ಎರಡು ಬಹು ಮುಖ್ಯ ಪ್ರಶ್ನೆಗಳಿವೆ : ಒಂದು ಅನುಭವದ ನೆಲೆಯದ್ದು. "ಇರುವುದನ್ನು ಹಂಚಿಕೊಂಡು ತಿನ್ನಬಾರದೇ ?" ಎಂಬ ಪ್ರಶ್ನೆ. ಇನ್ನೊಂದು ಅನುಭಾವಿಕ ನೆಲೆಯ, "ಏನೆಲ್ಲವನ್ನು ಮಾಡಿ ಉಪಯೋಗವೇನು ?" ಎಂಬ ಪ್ರಶ್ನೆ. ಈ ಎರಡು ಪ್ರಶ್ನೆಗಳು ಜನರ ಜೀವನವನ್ನು ಹಿಡಿದು ಅಲುಗಾಡಿಸುವಂತಾಗಬೇಕು. ಅವು ಸದಾಕಾಲವೂ ಸಮಾಜವನ್ನು ಕಾಡುತ್ತಲೇ ಇರಬೇಕು. ಈ ಎರಡು ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವ ಹಾದಿಯಲ್ಲೇ ಇದೆ ಒಂದು ಆರೋಗ್ಯಪೂರ್ಣ ವ್ಯವಸ್ಥೆ.

ಅರವಿಂದ ಚೊಕ್ಕಾಡಿ
ಕಮಲದೀಪ ಮನೆ, ತಳ್ಳಾರು ಕ್ರಾಸ್, ಕಾರ್ಕಳ - ೫೭೪ ೧೦೪
ಉಡುಪಿ ಜಿಲ್ಲೆ

# ಧಾರುಣಿ ದಾಹಕ್ಕೆ ಬೇಕಿತ್ತೆ ಇಷ್ಟೊಂದು ರಕ್ತ



ಎಳೆ ಬಿಸಿಲ ಪ್ರತಿಫಲನ ಕಣ್ಣ ಬೆಳಕಲ್ಲಿ
ಮರು ಹೊರಡುವ ಹೊತ್ತು
ನೀಲಿ ಬಾನು ಕೆಂಪು ಹರಡಿದ ಕ್ಷಣ
ಮರಳಿ ಹೊರಟಳು ಮಹಾದೇವಿ
ಸೀರೆ ಸೆರಗ ಬೀಸುತ್ತಾ ॥೧॥

ರಕ್ತ ಕಂಬನಿಯಲ್ಲಿ ನೆನೆದ ಮಣ್ಣ ಕಣದ
ತುಂಬಾ ಅವಳ ನೆನಪಿನ ಹೆಜ್ಜೆ ಗುರುತು.
ಹಸಿರೊದ್ದ ಅವಳ ಗರ್ಭದ ಒಳಗೆ
ಸಣ್ಣನೆಯ ಮಿಸುಕಾಟ - ಏದುಸಿರು ಅವಳಿಗೆ ;
ಪ್ರತಿಯೊಂದು ಕಾಲಿಟ್ಟ ಗಳಿಗೆಯಲ್ಲಿ ॥೨॥

ಗುಡಿಸಲಿನ ಹೊರಗೆ ಕಚ್ಚೆ ಬಿಗಿಯುತ್ತಾ
ಮೀಸೆ ಹುರಿಮಾಡಿ - ಕನ್ನಡಿಯ ಎದುರು
ಎರಡು ಹುಬ್ಬುಗಳ ನಡುವೆ ಕೆಂಪು
ರಕ್ತ ತಿಲಕವನಿಟ್ಟು ಹೊರಟ ಮಹಾದೇವ
ದೊಡ್ಡನೆಯ ನಿಟ್ಟುಸಿರು ಬಿಟ್ಟು - ಹೆಣ್ಣ ಹಡೆಯಲಿ ಎಂದಂದುಕೊಂಡು ॥೩॥

ಕಣ್ಣ ಕಾಡಿಗೆಯ ತಿದ್ದುತ್ತಾ, ಮಿರಿಮಿರಿ
ಮಿಂಚುವ ಬೆಳ್ಳಿ ಕಟ್ಟಲ್ಲಿ ಅಂಟಿದ ಧೂಳು ಒರೆಸಿ
ಅಂತಃಪುರದ ತುಂಬೆಲ್ಲಾ ತುಂಬಿದ ಸುವಾಸನೆಯ
ನಡುವೆ ಕಳೆದ ರಾತ್ರಿಯ ಸುಖವನ್ನು
ಮೈಯೆಲ್ಲಾ ಅರಸುತ್ತಾ ಅರಸಿ - ಹೊರಟ ಗಂಡನ ನೆನೆದಳು
ತನ್ನ ತಾಳಿ ಭದ್ರವಾಗಿರಲಿ ಎಂದು ॥೪॥

ಕೊಳೆತ ಹೆಣಗಳ ರಾಶಿಯ ಮೇಲೆ ;
ಕಳೆದ ಬಡತನವ ನೆನೆಯುತ್ತಾ
ಕಾಲು ಹಾದಿಯ ಹುಡುಕಿ ಹೊರಟ ನರಿ.
ಅದರ ಬೆನ್ನ ಮೇಲೆ ಹಾರಿದ ಹದ್ದು ತನ್ನ ಬಳಗವ;
ಕೂಗಿ ಕರೆಯಿತು ತನ್ನ ಬಂಧು - ಬಾಂಧವರನ್ನು ;
ಪುಟ್ಟ ಕಂದನ ಹಸಿ ಮಾಂಸದ ಮೇಲೆ ಕುಣಿಯಿತು ತನ್ನೆರಡು ಕಾಲನೂರಿ ॥೫॥

ಎಣ್ಣೆ ಕಾಣದ ನಾಗ ಬಂಧದ ಮುಡಿಯ ಮೇಲೆ
ಕೈಯೊರಸಿದಳು - ಯುದ್ಧ ಕಾತರೆ ಹೆಣ್ಣು -
ಅಗ್ನಿ ಶಿಖೆಯನ್ನು ಎದೆಯ ಗೂಡಲ್ಲಿ ಇಟ್ಟ;
ದ್ರುಪದಜೆಗೆ ಅಂಗಳದ ಮೂಲೆಯಲಿ
ಶಕುನದ ಹಕ್ಕಿಯ ಮೇಲೆ ಮನಸು;
ಊರು ಉರಿದು ಬೂದಿಯಾಗಲಿ ಎಂಬ ಹಮ್ಮು ॥೬॥

ಕಳೆದ ರಾತ್ರಿಯಲಿ ಕಳೆದ ಮೌನದ ಹೆಜ್ಜೆ;
ಸಣ್ಣ ಬಿಸಿಯುಸಿರು: ಕಣ್ಣ ಪುಟಗಳಲಿ ಹಸಿಹಸಿಯಾದ
ತೇವವನು ಒರಸುತ್ತಾ ಕಾದ ಗಳಿಗೆಯಲ್ಲಿ

ಯಾವ ಅನಿಷ್ಟದ ಸುದ್ದಿ? ಜೀವದಲಿ
ಒಡೆದೆದ್ದ ಸಂಕಟದಲಿ ಕಾದಳವಳು ಮುಗುದೆ
ಜೀವ ಜೀವದ ಗೆಳೆಯ - ದೇಹ ದೇಹದ ಒಡೆಯ ಎಲ್ಲಿ? ॥೭॥

ಕೇಕೆ ನಗುವಿನ ಸಮರ ಉತ್ಸಾಹದ ನಡುವೆ
ಗಡಗಡನೆ ನಡುಗುತ್ತಾ; ಬತ್ತಿಹೋದ ಜೀವವನು
ಎಳೆಯುತ್ತಾ ಹೊರಟವಳು ಮುದುಕಿ –
ಕಂದ ಎಲ್ಲಿರುವೆ ? ಎನುತಲೇ ಮಂಜು ದೃಷ್ಟಿಯ ಬೀರಿದಳು
ಅಲ್ಲಿ - ಇಲ್ಲಿ; ದೂರ ದೂರದ ತುಂಬ ಹೆಣಗಳ ರಾಶಿ,
ಧಾರುಣ ದಾಹಕ್ಕೆ ಬೇಕಿತ್ತೆ ಇಷ್ಟೊಂದು ರಕ್ತ? ॥೮॥

ಹಸುಗೂಸು ಕಂದಮ್ಮಗಳ; ಒಣಗಿರುವ ದೇಹಗಳ;
ಪುಟಿದೆದ್ದ ರಕ್ತದೋಕುಳಿಯ ನದೀ ತರಂಗಗಳು,
ಮಜ್ಜೆ ಮಾಂಸಗಳ ನಡುವೆಯೇ ಹೊರಟ ಕುರುರಾಯ
ಒಡನಾಡಿಗಳ ಮರಣ ಶಯ್ಯೆಯ ಕಂಡು
ಬಸವಳಿದು ಕೇಳಿದ ತನ್ನೊಳಗೆ:
''ನಾನೀಗ ಒಬ್ಬಂಟಿ, ಕರೆದು ಕೇಳುವರೇ ಇಲ್ಲ ಇಲ್ಲಿ'' ॥೯॥

ಬಿದ್ದ ಹೆಣ ದ್ರೋಣನ ಮೈ ಮೇಲೆ ನೂರು ಗಾಯಗಳ
ಪಳೆಯುಳಿಕೆ – ಬ್ರಾಹ್ಮಣನ ಹಣೆಯಲ್ಲಿ
ಬಾಣ ಚುಚ್ಚಿದ ಮೇಲೆ – ಅವನ ಜೊತೆಯಲ್ಲಿಯೇ
ಬಂದಿದ್ದ ಧರ್ಮ ಮಣ್ಣು ಹಿಡಿದಿದೆ ನೆಲದಲ್ಲಿ,
ಯುದ್ಧ ಭೂಮಿಯ ತಿರುವಿನಲ್ಲಿ
ಅಸಂಖ್ಯ ಅಪಘಾತ ಸರಮಾಲೆ ಕೇಳಿತ್ತು; ಯಾರಿಗಿದು ? ॥೧೦॥

ಲಕ್ಷಲಕ್ಷ ವಿಧವೆಯರ ಮನೆಯಲ್ಲಿ ಆರಿದ ದೀಪ,
ಸಾವಿರ ಸಾವಿರ ತಾಯಂದಿರ ಕರುಳು ಬತ್ತಿದೆ ಅಲ್ಲಿ;
ಕಳೇಬರದ ಎದುರು ರೋದಿಸುವ ಹೆಂಗಳೆಯರ
ಮುಂದಿನ ಬತ್ತಿದೀಪ ಒಡೆದ ಕತೆಗಳ ಹೇಳಿ
ಚಟ್ಟ ಕಟ್ಟುತ್ತವೆ - ಮಸಣದ ಹಾದಿ ಹುಡುಕಿ ॥೧೧॥

ನಿನ್ನೆ ಧೂಪಾಗರುವಿನ ಪರಿಮಳದಲ್ಲಿ ಮಿಂದೆದ್ದವರು
ಇಂದು ಹೆಣಗಳ ರಾಶಿಗಳ ನಡುವೆ ಹುಡುಕ ಹೊರಡುತ್ತಾರೆ;
ಶ್ವೇತ ಛತ್ರದ ನೆರಳ - ಪಟ್ಟೆ ಪೀತಾಂಬರದ ವಸನ.
ನಿನ್ನೆಯ ಕನಸಲ್ಲಿ ಕಂಡ ಅಮರಾಂಗನೆಯ ಒಡನಾಟಕ್ಕೆ;
ಹಲ್ಲು ಕಚ್ಚಿ ಹೋರಾಟಕ್ಕೆ ಇಳಿದವನ ಹೊಟ್ಟೆಯಲ್ಲಿ
ಹಸಿವಿನ ಬೇತಾಳ ನೃತ್ಯ ಗೆಜ್ಜೆ ಬಿಗಿದಿತ್ತು ॥೧೨॥

ನಿನ್ನೆ ನಲ್ಲನ ಎದೆಗೊರಗಿ ತೋಳಲತೆಯನ್ನು
ಬಿಗಿದ ಹುಡುಗಿ ''ಸಾಕಿನ್ನು ನಿನ್ನ ಸಹವಾಸ ಗೆಳೆಯ''
ಎಂದವಳು ಹೊರಟಳು ತವರ ತಂಪಿಗೆ.
ಇರುಳು ಮಾದಕತೆಯನ್ನು ಬೆಸೆದು
ಬೆಳ್ಳಿ ಮೂಡುವ ಮೊದಲೇ ಹೊರಟವಳ ಕಂಡು
ಚಿಂತಿತನಾಗಿ ರಣಕ್ಕೆ ಹೊರಟವನ ಕಣ್ಣಲ್ಲಿ ಕಪ್ಪು ಛಾಯೆ ॥ ೧೩॥

ಜೀವ ಯಾತ್ರೆಯನು ಮುಗಿಸಿ ಬರುವೆನು ಎಂದು
ಹೊರಟ ಕುರುರಾಯ ಮತ್ತೆ ಮತ್ತೆ
ತನ್ನೊಳಗೆ ಕೇಳಿದ : ಎಲ್ಲಿ ಭಟಸ್ತೋಮ ?
ಎಲ್ಲಿ ವಂದಿ ಮಾಗಧರು ? ಎಲ್ಲಿ ವಿಜಯಲಲನೆ ?
ಯಾರಿಗೂ ಬೇಡದ ಯುದ್ಧದ ನಡುವೆ
ಪಾರಿವಾಳ ಮಗುವಿಗೆ ಗುಟುಕ ನೀಡುತ್ತಿತ್ತು ॥೧೪॥

ನಿನ್ನೆ ರಾತ್ರಿ ಕನಸ ಚಂದಿರನ ಹುಡುಕುತ್ತಾ ಎದೆಗೊರಗಿ ಮಲಗಿದ್ದ
ಸತಿಗೆ ಇಂದು ಬೆಳಗಿನ ಹೊತ್ತು ತನ್ನ ನತ್ತಿನ ಚಿಂತೆ
ತನಗಿಂದು ಎದೆಯು ಕುದಿಯುತಲಿಹುದು:
ಈ ಮಸಣದಲಿ ಯಾರಿಹರು ತನಗೆ ?
ಉರುಳಿದ ರುಂಡಗಳ ಮೇಲೆ ವಿಜಯೇಶ್ವರನ ರುದ್ರ ನೃತ್ಯ
'ಸಾಕಿನ್ನು ಈ ಜೀವ ನನಗೆ' ॥೧೫॥

ರುದ್ರ ಹಿಂಸೆಯ ರಕ್ತ ಚೆಲ್ಲಿದ ಕಡೆಯಲ್ಲಿ
ಉಳಿದದ್ದು ಇಷ್ಟೆ: ಒಬ್ಬನ ದಿಗ್ವಿಜಯ
ಮತ್ತೊಬ್ಬನ ಸೋಲಿನ ಹತಾಶೆ - ಮತ್ತೆ ಉಳಿದದ್ದು:
ನೀಲಿಯಾಕಾಶದ ಕೆಳಗೆ ನೂರು ಮನೆಗಳ ಕತ್ತಲೆ
ಯಾರದೋ ಕಣ್ಣುಗಳಲ್ಲಿ ಬತ್ತದ ನೂರು ಒರತೆ
ಕಾಲು ಕಳೆದುಕೊಂಡವನ ದುಃಖ ॥೧೬॥

ಮಂಡೆ ಬೋಳಿಸಿಕೊಂಡ ಮುಂಡೆ ಹೆಂಗಸರ
ಖಾಲಿ ಹಣೆಯ ಮೇಲೆ ಯಾರದೋ ವಿಜಯ
ಪತಾಕೆಯ ಕರಿ ನೆರಳು: ಮಸಣ ಭೂಮಿಯಲ್ಲಿ
ಸುಡುವ ಬೆಂಕಿಯ ಕಂಡು ಬೀಡಿ ಉರಿಸಿದ
ಕಾವಲುಗಾರ ಅನ್ನುತ್ತಾನೆ: ''ಇಂದು ಮನೆಯಲ್ಲಿ
ಸುಗ್ರಾಸ ಭೋಜನ, ಮಕ್ಕಳ ಹೊಟ್ಟೆ ತಂಪಗಿರಲಿ'' ॥೧೭॥

ಸಾವಿಲ್ಲದ ಮನೆಯಿಂದ ಸಾಸಿವೆಯ ತರಲು ಹೊರಟವನು
ಮನೆಮನೆಯ ಅಂಗಳದಲಿ ಕಂಡ ಬಿದಿರ ಚಟ್ಟ
ಬೆಳಗು - ಕತ್ತಲೆಗೆ ಎಷ್ಟು ದೂರ ?
ಕೇಳಿ - ಕೇಳುತ್ತಲೆ ಬಂದ ಸಾವಿಗೆ ನೂರಾರು ಮುಖಗಳು
ನಂದಾದೀಪದ ಕೆಳಗೆ ಸತ್ತ ಪತಂಗಗಳು ಕೇಳುತ್ತವೆ
'ಹಿಂಸೆಯಿಲ್ಲದ ಜಗಕೆ ಎಷ್ಟು ಅಂತರ'? ॥೧೮॥

ಮುಂಜಾವದ ತಂಪು ಬೆಳಕಲ್ಲಿ
ಮನೆ ಹಿಂದೆ ಬಿಟ್ಟು ಹೊರಟ ಮಾದೇವನ
ಬೆನ್ನಿಗೆ ತ್ರಿಶೂಲದ ಬಿಸಿ ಅಪ್ಪುಗೆ - ಜೀವ ಹೊರಡುವ
ಮುನ್ನ ಮಾದೇವಿಯ ಹಸಿರು ಗರ್ಭದ ನೆನಪು.
ಸಂಜೆಗೋ ಮೃತ್ಯು ಸದೃಶದ ಉರಿ - ಜೀವ ಬಿಡುವ ಮುನ್ನ ಹೇಳಿದ.
''ಹುಟ್ಟುವ ಮಗು ಹೆಣ್ಣಾಗಲಿ, ಅವಳು ನೂರೊಂದು ಕನಸ ಹೆರಲಿ'' ॥೧೯॥

**ಡಾ। ಕೇಶವ ಶರ್ಮ, ಕೆ.**
ಉಪನ್ಯಾಸಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ
ಜ್ಞಾನ ಸಹ್ಯಾದ್ರಿ-೫೭೭೪೫೧, ಶಿವಮೊಗ್ಗ ಜಿಲ್ಲೆ

# ಬರಗಾಲೋತ್ಸವ

ರಾಶಿ ರಾಶಿ ಹಣ ಖರ್ಚು ಮಾಡಿ ಗಣರಾಜ್ಯೋತ್ಸವ, ಸ್ವಾತಂತ್ರ್ಯೋತ್ಸವ, ಕ್ಷೇತ್ರೋತ್ಸವ ಮುಂತಾದ ಏನೇನೋ ಸರಕಾರಿ ಉತ್ಸವಗಳನ್ನು ಪ್ರತಿ ವರ್ಷ ಆಚರಿಸುತ್ತಿದ್ದರೂ ಜನರು ಭಾವನಾತ್ಮಕವಾಗಿ ಇಂಥ ಉತ್ಸವಗಳಲ್ಲಿ ತೊಡಗಿ ಕೊಳ್ಳುವುದು ಬರೀ ಕಾಟಾಚಾರಕ್ಕೆ ಮಾತ್ರ. ಸರಕಾರ ಯಾವುದೇ ಉತ್ಸವ ಮಾಡಿದರೂ ಅದು ಅರ್ಥಪೂರ್ಣ ವಾಗಿರಬೇಕು ಎಂದು ವಾಸ್ತವವಾದಿ ಜನಪ್ರತಿನಿಧಿ ಸರಕಾರವು ಒಂದು ನಿರ್ಧಾರಕ್ಕೆ ಬಂದು ಪ್ರತಿ ವರ್ಷ ಒಂದು ತಿಂಗಳ ಕಾಲ ಬರಗಾಲೋತ್ಸವ ಆಚರಿಸಬೇಕು ಎಂದು ತೀರ್ಮಾನಿಸಿತು. ಆಗಿನ ಲಾಗಾಯ್ತು ಪ್ರತಿವರ್ಷ ರಾಸೂರಿ ನಲ್ಲಿ ಒಂದು ಮಾಸ ಪೂರ್ತಿ ಬಹಳ ವಿಜೃಂಭಣೆಯಿಂದ ಬರಗಾಲೋತ್ಸವ ಆಚರಿಸಲಾಗುತ್ತಿದೆ. ವರ್ಷಕ್ಕೆ ಒಂದೇ ಸಲ ಬರುವ ಎಲ್ಲ ಉತ್ಸವಗಳು ಒಂದೊಂದು ವರ್ಷ ಲೀಪ್ ಯಿಯರ್, ಸ್ಲೀಪ್ ಯಿಯರ್, ಸ್ಕಿಪ್ ಯಿಯರ್ ಅಂತ ಏನೇನೋ ನೆವದಿಂದ ಆ ಉತ್ಸವಗಳು ಬಾರದೆಯೂ ಹೋಗಬಹುದು. ಆದರೆ ಬರಗಾಲ ಮಾತ್ರ ರಾಸೂರಿನಲ್ಲಿ ಯಾವ ಕಾರಣಕ್ಕೂ, ಯಾವ ವರ್ಷವೂ ತಪ್ಪುವಹಾಗಿಲ್ಲ. ಹಾಗಾಗಿ ಬರಗಾಲೋತ್ಸವ ಎಂಬುದು ರಾಸೂರಿಗೆ ಸಾರ್ಥಕ ವಾದ ಉತ್ಸವವಾಗಿದೆ. ಈ ಉತ್ಸವದಲ್ಲಿ ಸಮಾಜದ ತೃಣ ಮೂಲ ಜನಾಂಗದ ಪಾಲುದಾರಿಕೆ ಪ್ರಮುಖವಾಗಿರುವು ದರಿಂದ ಇದು ಬರಿ ಕಾಟಾಚಾರದ ಉತ್ಸವ ಆಗಲು ಸಾಧ್ಯವಿಲ್ಲ.

ಇದನ್ನೆಲ್ಲ ಮನಗಂಡೇ ಭರ್ಜರಿಯಾಗಿ ರಾಸೂರಿನಲ್ಲಿ ಬರಗಾಲೋತ್ಸವ ಆಚರಿಸಲಾಗುತ್ತದೆ. ಉತ್ಸವಕ್ಕೆ ಎರಡು ದಿನ ಮುಂಚಿತವಾಗಿಯೇ ಸುತ್ತಮುತ್ತಲ ಹಳ್ಳಿಗಳಾದ ಮೋಳಕೇರಿ, [illegible], [illegible], ರಾಮಪೂರ, ಲಕ್ಷ್ಮಣಪೂರ, [illegible] ಈ ಎಲ್ಲಾ ಊರುಗಳ ಮೊರಕೇರಿಯಿಂದ ಹಿಡಿದು ಒಳಕೇರಿಯವರೆಗೆ, ಮ್ಯಾಗೇರಿಯಿಂದ ಹಿಡಿದು ಕೆಳಗೇರಿಯ ರವರೆಗೆ ಸಾಲಿಮ ಜನ ರಾಸೂರಿನ ಸೋಪಿಸಾಬನ ಬಗೀಚೆಯ ಮೈದಾನದಲ್ಲಿ ಬಂದು ಸೇರುತ್ತಾರೆ.

ಜಾತ್ರೆಗಳಲ್ಲಿ ಉಚಾಯಿ, ಬೆಳ್ಳಿ ಪಲ್ಲಕ್ಕಿಯ ಮೆರವಣಿಗೆ ಮಾಡುವಂತೆ ಮೊದಲ ಐದು ದಿನ ನೀರೆಯರು ಖಾಲಿ ಕೊಡಗಳ ಮೆರವಣಿಗೆ ಮಾಡುತ್ತಾರೆ. ಕೊಡ ಹೊತ್ತ ನೀರೆಯರು ಬರಗಾಲಕ್ಕೆ ತುತ್ತಾಗುವುದರಿಂದ ಥಳಕು ಬಳಕಾಗಿರುವುದಿಲ್ಲ. ಮೈಮೇಲೆ ಹರಕು ಬಟ್ಟೆ ಧರಿಸಿರುತ್ತಾರೆ. ಅರ್ಧಂಬರ್ಧ ಮೈ ಕಾಣುತ್ತಿರುತ್ತದೆ. ಕೇಕು, ಬಿಸ್ಕತ್ತಿನ ಪ್ಯಾಕೇಟು, ಬಿಸ್ಲೇರಿ ಬಾಟಲು ಹೆಗಲಿಗೆ ಏರಿಸಿಕೊಂಡು ಬರಗಾಲೋತ್ಸವ ನೋಡಲು ಪಟ್ಟಣಗಳಿಂದ ಬಂದ ಶೋಕಿ ಜನರು ತಮ್ಮ ಕಣ್ಣಂಚಿನಲ್ಲಿ ಈ ಅರೆಬೆತ್ತಲೆಯ ಹರಕು ಬಟ್ಟೆಗಳನ್ನು ಹಾಕಿ ಅವರ ಮೈ ಮಾಟಿಗೆ ಬೆಲೆ ಕಟ್ಟುತ್ತಾರೆ.



ಕೊಳವೆ ನೀರು ಬತ್ತಿ ಹೋಗುತ್ತದೆ. ಬಿಸಲೇರಿ ಕುಡಿದೂ ಕುಡಿದೂ ವಿಸರ್ಜಿಸಿ ಚರಂಡಿಗೆ ಬಿಟ್ಟ ನೀರು ಈ ಜನ ಕುಡಿದು ವಾಂತಿ ಭೇದಿ ಮಾಡಿಕೊಳ್ಳುತ್ತಾರೆ. ಆರೋಗ್ಯ ಉಪಚಾರಕರು ಧಾವಿಸಿ ಬರುತ್ತಾರೆ. ಡಿಸ್ಟಿಲ್ಡ್ ವಾಟರ್ ಚುಚ್ಚಿ ಸರಕಾರಿ ದಾಖಲೆಗಳಲ್ಲಿ ಉಪಚಾರ ಮಾಡಿದ ರೋಗಿಗಳ ಸಂಖ್ಯೆ ನಮೂದಿಸಿ ರೆಕಾರ್ಡ್ ಬಿಲ್ಡಪ್ ಮಾಡುತ್ತಾರೆ.

ಒಂದು ತಿಂಗಳ ಕಾಲ ನಡೆಯುವ ಈ ಬರಗಾಲೋತ್ಸವ ದಲ್ಲಿ ಶ್ರದ್ಧಾಭಕ್ತಿಯುಳ್ಳ ಆಸ್ತಿಕ ಭಕ್ತರು ಆತ್ಮಾಹುತಿ ಮಾಡಿ ಕೊಳ್ಳುತ್ತಾರೆ. ಈ ರೀತಿ ಆತ್ಮಾಹುತಿ ಮಾಡಿಕೊಂಡು ಬರ ಗಾಲೋತ್ಸವಕ್ಕೆ ಮೆರಗು ತರುವ, ಉತ್ಸವವನ್ನು ಸಾರ್ಥಕ ಗೊಳಿಸುವ ವ್ಯಕ್ತಿಗಳಿಗೆ ಸರಕಾರವು ಸನ್ಮಾನಿಸುತ್ತದೆ. ಅವರ ಕುಟುಂಬಕ್ಕೆ ಗೌರವಧನ ನೀಡಿ ಸತ್ಕರಿಸುತ್ತದೆ. ಇಂದಿರಾ ಆವಾಸ ಯೋಜನೆ, ಪಿ. ಎಂ. ರೋಜಗಾರ ಯೋಜನೆ ಮುಂತಾದ ಯೋಜನೆಗಳಂತೆ ಈ ಬರಗಾಲೋತ್ಸವದ ಗೌರವಧನ ನೀಡಿಕೆಯಲ್ಲಿ ಯಾವುದೇ ದಗಲಬಾಜಿ ಆಗುವ ಸಾಧ್ಯತೆಯೇ ಇರುವುದಿಲ್ಲ. ನೇರವಾಗಿ ಫಲಾನುಭವಿಗಳಿಗೆ ಬರಗಾಲೋತ್ಸವದ ಫಲ ಸಂದಾಯವಾಗುತ್ತದೆ.

ಬರಗಾಲೋತ್ಸವಕ್ಕಾಗಿ ಎರಡು ದಿನ ಮುಂಚಿತವಾಗಿಯೇ ಬಂದಿದ್ದ ಒಡ್ಡರಹಳ್ಳಿ ತಿಮ್ಮ ಬಂದಕೂಡಲೇ ಆತ್ಮಾಹುತಿ ಮಾಡಿಕೊಂಡ. ಇದು ಬರಗಾಲೋತ್ಸವಕ್ಕೆ ಅಪಚಾರ ಮಾಡಿ ದಂತೆ ಎಂದು ಮುಜರಾಯಿ ಇಲಾಖೆಯ ಸಿಬ್ಬಂದಿ 'ಆತ್ಮ ಹತ್ಯೆಯ ಕೇಸು' ಎಂದು ದಾಖಲು ಮಾಡಿಕೊಂಡು ಕಾನೂನು ಕ್ರಮ ಕೈಗೊಳ್ಳಲು ಮುಂದಾಯಿತು. ಆ ಕಡೆ ತಿಮ್ಮನ ಪಂಚ ನಾಮೆ ನಡೆಯುತ್ತಿರಬೇಕಾದರೆ ಈ ಕಡೆ ಬಳೆಗಾರ ಖಾಸಿಂಬೀ ಆತ್ಮಾಹುತಿ ಮಾಡಿಕೊಂಡ ಗುಲ್ಲು ಕೇಳಿಬಂತು. ಮುಜರಾಯಿ ಸಿಬ್ಬಂದಿ ಖಾಸಿಂಬೀ ಕಡೆಗೆ ಧಾವಿಸುತ್ತಿದ್ದಂತೆ ತಳವಾರ ದೌಲಪ್ಪ ನೆಗೆದುಬಿದ್ದನೆಂದು ಉತ್ಸವದ ವಾಲೆಂಟರ್ಸ್ ಸುದ್ದಿ ತಂದರು. ಹೀಗೆ ಬರಗಾಲೋತ್ಸವ ಪ್ರಾರಂಭವಾಗುವುದಕ್ಕೆ ಮುಂಚೆಯೇ ಒಬ್ಬೊಬ್ಬರಾಗಿ ಆತ್ಮಾಹುತಿ ಮಾಡಿಕೊಳ್ಳ ಹತ್ತಿದರು. ಇದು ಆತ್ಮಾಹುತಿಯಾಗುವುದಿಲ್ಲ, ಕಾನೂನಿನ ಪ್ರಕಾರ ಆತ್ಮಹತ್ಯೆಯಾಗುತ್ತದೆ. ಅದು ಕಾನೂನಿನ ಪ್ರಕಾರ ಘೋರ ಅಪರಾಧ. ಅಂಥ ಕುಟುಂಬಗಳಿಗೆ ಫಲಾನುಭವ ನೀಡಲು ಬರುವುದಿಲ್ಲ. ಹೀಗೆಂದು ಉತ್ಸವ ನಡೆಸಲು ಸರಕಾರ ವಿಫಲವಾಯಿತು. ಅದಕ್ಕೆ ಅಧಿಕಾರದಲ್ಲಿರಲು ಹಕ್ಕಿಲ್ಲ ಎಂದು ಗುಲ್ಲುಗಾವಳಿ ಮಾಡಲು ವಿರೋಧ ಪಕ್ಷಗಳಿಗೆ ಒಂದು ಹಾದಿ ಮಾಡಿಕೊಟ್ಟಂತಾಗುತ್ತದೆ. ಈ ವಿಚಾರ ಟ್ಯೂಬಲೈಟಿ ನಂತೆ ಸ್ವಲ್ಪ ನಿಧಾನವಾಗಿ ಹೊಳೆದ ತಕ್ಷಣ ಆಳುವ ಪಕ್ಷದ ಮುಕರಪ್ಪನವರು ವೇದಿಕೆಯ ಮೇಲೆ ಏರಿ ಮೈಕಿನಲ್ಲಿ ಜೋರಾಗಿ ಕೂಗಿ ಹೇಳಹತ್ತಿದರು :

'ಬಾಂಧವರೆ, ಶಾಂತರಾಗಿರಿ, ಧೈರ್ಯ ತಂದುಕೊಳ್ಳಿರಿ. ಬರಗಾಲೋತ್ಸವಕ್ಕಾಗಿ ನೀವು ತೋರುತ್ತಿರುವ ಕಾತರ, ಲವ ಲವಿಕೆ ಮೆಚ್ಚುವಂಥದ್ದು. ಆದರೆ ಸ್ವಲ್ಪ ತಾಳ್ಮೆ ಇರಲಿ. ಉತ್ಸವ ಪ್ರಾರಂಭವಾಗುವುದಕ್ಕೆ ಇನ್ನೂ ಎರಡು ದಿನ ಇದೆ. ನೀವು ಹೀಗೆ ಅವಸರ ಮಾಡಿ ಉತ್ಸವಕ್ಕೆ ಹೆಂಡಿ ಹಿಂಡಬೇಡಿರಿ. ಇದೆಲ್ಲ ವಿರೋಧ ಪಕ್ಷಗಳ ಕುತಂತ್ರ ಅಂಬೋದು ನಮಗೆ ಅರ್ಥವಾಗಿದೆ. ನೀವ್ಯಾರೂ ಚಿಂತೆ ಮಾಡಬೇಕಾಗಿಲ್ಲ. ಇನ್ನೂ ಎರಡು ದಿನ ಜೀವ ಬಿಗಿ ಹಿಡಿಯಿರಿ. ನಿಮ್ಮಂಥವರಿಂದಲೇ ಈ ಉತ್ಸವಕ್ಕೆ ಶೋಭೆ. ಈ ಉತ್ಸವ ಇರುವುದಾದರೂ ಯಾರಿಗಾಗಿ. ನಿಮಗಾಗಿ.. ಯಶಸ್ವಿ ಗೊಳಿಸುವುದು ನಿಮ್ಮ ಕೈಯಲ್ಲಿದೆ...'

ಆದರೆ ಭಾಷಣ ಕೇಳುವಷ್ಟು ತಾಳ್ಮೆ ಜನರಿಗೆ ಇರಬೇಕಲ್ಲ! ಎರಡು ದಿನ ಮುಂಚಿತವಾಗಿಯೇ ಅವರು ಬರಗಾಲೋತ್ಸವ ಪ್ರಾರಂಭಿಸಿಬಿಟ್ಟರು.

ಈಗ ಪ್ರತಿ ವರ್ಷ ಬರಗಾಲೋತ್ಸವದ ಅವಧಿ ಹೆಚ್ಚಾಗುತ್ತಾ ನಡೆದಿದೆ. ಸರಕಾರದ ಯೋಜನೆ ಫಲ ನೀಡುತ್ತಿದೆ. ಫಲಾನುಭವಿಗಳು ಹೆಚ್ಚಾಗುತ್ತಿದ್ದಾರೆ. ಅಂದರೆ ಫಲಾನುಭವಿಗಳ ಮನೆಗಳು ಹೆಚ್ಚಾಗುತ್ತಿವೆ. ಮುಜರಾಯಿ ಇಲಾಖೆಯ ಸಿಪಾಯಿ ಫಲಾನುಭವಿಯ ಮನೆ ಬಾಗಿಲಿಗೆ 'ನೀವು ಫಲಾನುಭವಿಗಳು. ಆಫೀಸಿಗೆ ಬಂದು ನಿಮ್ಮ ಗೌರವಧನ ತೆಗೆದುಕೊಂಡು ಹೋಗಬೇಕು' ಎಂದು ಚೀಟಿ ಅಂಟಿಸಿ ಹೋಗುತ್ತಾನೆ. ಆ ಚೀಟಿ ನೋಡುವವರು ಅಲ್ಲಿ ಯಾರೂ ಬದುಕಿ ಉಳಿದಿರುವುದಿಲ್ಲ.

**ಭಾಲಚಂದ್ರ ಜಯಶೆಟ್ಟಿ**
ನಮ್ಮ ಮನೆ, ಜಯನಗರ, ಸೇಡಂ ರಸ್ತೆ, ಗುಲ್ಬರ್ಗಾ - ೧೦೫

ವಿಶ್ವವೀಕ್ಷಣೆ

# ಭಾರತ - ಪಾಕಿಸ್ತಾನ ಫಲಪ್ರದ ಮಾತುಕತೆಗೆ ಎಚ್ಚರ ಅಗತ್ಯ

ಸೀಯಾರ್ಕೆ

**ಈ**ಚಿನ ದಿನಗಳಲ್ಲಿ ಭಾರತ ಮತ್ತು ಪಾಕಿಸ್ತಾನಗಳ ಮಧ್ಯೆ ಮಾತುಕತೆಗಳಿಗೆ ಭೂಮಿಕೆ ಸಿದ್ಧಗೊಳ್ಳುತ್ತಿರುವುದು ಸ್ವಾಗತಾರ್ಹವಾದ ಬೆಳವಣಿಗೆ. ಕಳೆದ ಎರಡು ವರ್ಷಗಳಿಂದ ಯುದ್ಧದ ಅಂಚಿನಲ್ಲಿದ್ದು, ರಾಯಭಾರಿ ಸಂಬಂಧಗಳೂ ಸ್ಥಗಿತಗೊಂಡಿದ್ದ ಈ ಎರಡು ರಾಷ್ಟ್ರಗಳೂ ಸಂಬಂಧಗಳ ಸುಧಾರಣೆಯತ್ತ ಹೆಜ್ಜೆ ಇರಿಸಿವೆ. ಅರ್ಧ ಶತಮಾನಕ್ಕೂ ಹೆಚ್ಚು ಕಾಲದಿಂದ ಪರಸ್ಪರ ಅಪನಂಬಿಕೆ, ಅಸಹನೆ, ದ್ವೇಷಭಾವನೆಗಳಿಂದಲೇ ಇದ್ದು, ಹಲವು ಹತ್ತು ಸಮಸ್ಯೆಗಳನ್ನು ಕಲೆ ಹಾಕಿಕೊಂಡಿರುವುದರಿಂದ ಅವನ್ನು ಬಗೆಹರಿಸುವುದು ಸುಲಭವಲ್ಲ. ಅದರಲ್ಲೂ ಸಂಬಂಧಗಳ ಹಳಸಿಕೆಗೆ ಮೂಲ ಕಾರಣವಾಗಿರುವ ಕಾಶ್ಮೀರದ ಪ್ರಶ್ನೆ ಕಗ್ಗಂಟಾಗಿದೆಯಲ್ಲದೆ, ಗಡಿಯಾಚೆಗಿನ ಭಯೋತ್ಪಾದನೆಗೆ, ಘರ್ಷಣೆಗಳಿಗೆ ಕೇಂದ್ರವಾಗಿದೆ. ಮಾತುಕತೆಗಳನ್ನು ಪ್ರಾರಂಭಿಸುವುದಕ್ಕೆ ಪಾಕಿಸ್ತಾನಿ ಗೂಢಚರ್ಯೆ ಸಂಸ್ಥೆ ಪ್ರೇರಿತ ಭಯೋತ್ಪಾದನೆ ಕೃತ್ಯಗಳು ಕಂಟಕವಾಗಿವೆ. ಎರಡೂ ಕಡೆಯಲ್ಲಿ ಸಂಬಂಧಗಳ ಸುಧಾರಣೆಯತ್ತ ಕಿಂಚಿತ್ ಪ್ರಗತಿಯನ್ನು ಭಂಗಗೊಳಿಸಬಲ್ಲಂಥ ಉಗ್ರವಾದಿಗಳು ಇದ್ದಾರೆ. ಇಂಥ ವಾತಾವರಣದಲ್ಲಿ ಫಲಪ್ರದವಾದ ಮಾತುಕತೆಗೆ ವೇದಿಕೆ ಸಜ್ಜುಗೊಳಿಸಲು ಭಾರತ-ಪಾಕಿಸ್ತಾನಗಳ ಮುತ್ಸದ್ದಿಗಳು ಎಚ್ಚರಿಕೆಯಿಂದ ಹೆಜ್ಜೆ ಇರಿಸಬೇಕಾಗಿದೆ.

ಇದುವರೆಗೆ, ಅಂದರೆ ಭಾರತದ ಪ್ರಧಾನಿ ವಾಜಪೇಯಿ ಕಾಶ್ಮೀರದಲ್ಲಿ ಪಾಕಿಸ್ತಾನದೊಂದಿಗೆ ಸಂಬಂಧಗಳ ಸುಧಾರಣೆಗೆ ಸ್ನೇಹಹಸ್ತ ಚಾಚಿದ ದಿನದಿಂದ ಎರಡೂ ಕಡೆ ವಿಪುಲವಾಗಿ ಹೇಳಿಕೆಗಳು ಬರುತ್ತಿವೆ. ರಾಯಭಾರಿ ಸಂಬಂಧಗಳನ್ನು ಪೂರ್ಣ ಪ್ರಮಾಣದಲ್ಲಿ ಸ್ಥಾಪಿಸಿಕೊಳ್ಳಲು ಕೈಗೊಂಡಿರುವ ಕ್ರಮಗಳು, ವಿಮಾನಯಾನ ಪ್ರಾರಂಭಿಸಲು ಅಭಿಲಾಷೆ ಬಿಟ್ಟರೆ ನಿರ್ದಿಷ್ಟವಾದ ಸೂಚನೆಗಳೇನೂ ಇಲ್ಲ. ಎರಡೂ ದೇಶಗಳು ಈ ಬಾರಿ ನಿಧಾನವಾಗಿ ಹೆಜ್ಜೆ ಇರಿಸುವುದು ಅಗತ್ಯ. ಹಂತಹಂತವಾಗಿ ಸಂಬಂಧಗಳ ಸುಧಾರಣೆಗೆ ಪ್ರಯತ್ನಿಸಬೇಕೇ ಹೊರತು ಏಕಾಏಕಿಯಾಗಿ ಶೃಂಗಸಭೆ ನಡೆಸುವುದಕ್ಕೆ ದಬಾದುಬಿ ಮಾಡುವುದರಿಂದ ಪ್ರಯೋಜನವಾಗದು. ಹಿಂದಿನ ಅನುಭವಗಳಿಂದ ಪಾಠ ಕಲಿತು ಮುಂದೆ ಸಾಗಬೇಕಾಗಿದೆ. ಮಾತುಕತೆಗಳಿಗಾಗಿ ಅಮೆರಿಕ ಎರಡೂ ದೇಶಗಳ ಮೇಲೆ ಬಲವಾದ ಒತ್ತಡ ತಂದಿರುವುದು, ತರುತ್ತಿರುವುದು ಹೊಸದೇನಲ್ಲ. ಸಮಸ್ಯೆಗಳನ್ನು ಬಗೆಹರಿಸುವುದರಲ್ಲಿ ಆಸಕ್ತಿಗಿಂತ ಹೆಚ್ಚಾಗಿ ಅಮೆರಿಕಾಗೆ ತನ್ನ ಹಿತಾಸಕ್ತಿಗಳಿಗಾಗಿ ಪಾಕಿಸ್ತಾನದ ಸಖ್ಯವನ್ನು ಭದ್ರವಾಗಿ ಕಾಪಾಡಿಕೊಳ್ಳುವುದು ಮುಖ್ಯ. ಭಯೋತ್ಪಾದನೆಯ ವಿರುದ್ಧ ಸಮರದ ವಿಚಾರದಲ್ಲಿ ಅಮೆರಿಕ ಅನುಸರಿಸುತ್ತಿರುವ ಇಬ್ಬಗೆಯ ನೀತಿ ಅದಕ್ಕೆ ಸಾಕ್ಷಿ. ಇಂದಿನ ಪರಿಸ್ಥಿತಿಯಲ್ಲಿ ಭಾರತ ಪಾಕಿಸ್ತಾನಗಳ ಮಧ್ಯೆ ಘರ್ಷಣೆ ಅಮೆರಿಕದ ಹಿತಾಸಕ್ತಿಗಳಿಗೆ ಮಾರಕ. ಅದರಿಂದಲೇ ಪಾಕಿಸ್ತಾನದ ಮೇಲೆ ಅಮೆರಿಕ ಹೆಚ್ಚು ಒತ್ತಡ ತರಲು ಸಿದ್ಧವಿಲ್ಲ. ಹಾಗಾಗಿ ಅಮೆರಿಕವನ್ನು ಓಲೈಸುವುದನ್ನೇ ಗುರಿಯಾಗಿಸಿಕೊಂಡಿರುವ ಭಾಜಪ ನಾಯಕರುಗಳು ಹತಾಶರಾಗಿ ಗೋಣಗುತ್ತಿರುವುದು ಹಾಸ್ಯಾಸ್ಪದವಾಗಿದೆ. ಅಮೆರಿಕದ ವಿದೇಶಾಂಗ ಖಾತೆಯ ಉಪಕಾರ್ಯದರ್ಶಿ ರಿಚರ್ಡ್ ಆರ್ಮಿಟಾಜ್ ಇತ್ತೀಚೆಗೆ ಎರಡೂ ದೇಶಗಳ ನಾಯಕರನ್ನು ಭೆಟ್ಟಿಯಾಗಿ ಮಾತುಕತೆ ನಡೆಸಿದ್ದಾರೆ. ಭಾರತದ ಭದ್ರತಾ ಸಲಹೆಗಾರ ಬ್ರಿಜೇಶ್ ಮಿಶ್ರಾ ವಾಷಿಂಗ್ಟನ್‌ನಲ್ಲಿ ಅಧ್ಯಕ್ಷ ಬುಷ್ ಒಳಗೊಂಡಂತೆ ಪ್ರಮುಖ ಅಮೆರಿಕನ್ ಅಧಿಕಾರಿಗಳನ್ನು ಭೆಟ್ಟಿಯಾಗಿದ್ದಾರೆ. ವಿದೇಶಾಂಗ ಸಚಿವ ಯಶವಂತ ಸಿನ್ಹಾ ಅಮೆರಿಕದ ವಿದೇಶಾಂಗ ಸಚಿವ ಕಾಲಿನ್ ಪಾವೆಲ್‌ರನ್ನು ಭೆಟ್ಟಿಯಾಗಿದ್ದಾರೆ. ಈ ಪರದಾಟಗಳೆಲ್ಲ ಅಮೆರಿಕದ ಒತ್ತಡ ಎಷ್ಟಿದೆ ಎಂಬುದನ್ನು ತೋರಿಸುತ್ತದೆ.

ಈ ಒತ್ತಡಗಳೇನೇ ಇರಲಿ, ಉಪಖಂಡದಲ್ಲಿ ಶಾಂತಿ, ಸೌಹಾರ್ದತೆ ಪರಸ್ಪರ ಸಹಕಾರಗಳ ಸ್ಥಾಪನೆಗೆ ಭಾರತ-ಪಾಕಿಸ್ತಾನಗಳ ಮಧ್ಯೆ ಸಂಬಂಧಗಳು ಉತ್ತಮಗೊಳ್ಳುವುದು ಅಗತ್ಯ ಎನ್ನುವುದು ನಿರ್ವಿವಾದ ಅಂಶ. ಮೂರನೆಯವರ ಮಧ್ಯ ಪ್ರವೇಶಕ್ಕೆ ಅವಕಾಶ ಮಾಡಿಕೊಡದೆ ಎರಡೂ ದೇಶಗಳ ನಾಯಕರು ಪರಸ್ಪರ ಮಾತುಕತೆಗಳ ಮೂಲಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬೇಕು. ಪಾಕಿಸ್ತಾನ ಅಮೆರಿಕ ಮತ್ತು ಪಾಶ್ಚಾತ್ಯ ದೇಶಗಳ ಮಧ್ಯಸ್ತಿಕೆಗೆ ಹಾತೊರೆಯುತ್ತಿರುವುದನ್ನೂ ಭಾರತದ ಬಲಪಂಥೀಯರು, ಅಧಿಕಾರದಲ್ಲಿರುವ ಭಾಜಪ ಹಾಗೂ ಅದರ ಮಿತ್ರರು, ಅಮೆರಿಕ ಏನೋ ಶಿಖರ ಹೊರಿಸುತ್ತದೆ ಎಂದು ಭಾವಿಸಿಕೊಂಡಿರುವುದು ಕೇವಲ ಭ್ರಮೆ. ೧೯೬೩ರಲ್ಲಿ ಜವಹರಲಾಲ್ ನೆಹರೂ ಪ್ರಧಾನಿಯಾಗಿದ್ದಾಗ ಅಮೆರಿಕದ ಮಧ್ಯಸ್ತಿಕೆಗೆ ಪ್ರಯತ್ನ ನಡೆದಿತ್ತು. ಆದರೆ ಮುಂದುವರಿಯಲಿಲ್ಲ. ಅದೇ ವರ್ಷ ಅಮೆರಿಕದ ಅಧ್ಯಕ್ಷ ಕೆನಡಿಯವರಿಗೆ ಪ್ರಧಾನಿ ನೆಹರು ಬರೆದ ಪತ್ರದಲ್ಲಿನ ಒಂದಂಶ ಇಲ್ಲಿ ಉಲ್ಲೇಖಾರ್ಹ: ''ಮೂರನೇ ದೇಶಗಳಿಂದ ಮಧ್ಯಸ್ತಿಕೆ ಗದ್ದಲವಿಲ್ಲದೆ, ವಿನೀತವಾಗಿದ್ದು, ವಸ್ತುನಿಷ್ಠವಾದ್ದಾಗಿದ್ದರೆ ಸಹಾಯಕವಾಗಿದ್ದೀತು ಆದರೆ ಬಹಿರಂಗ ಇಲ್ಲವೆ ಪ್ರತ್ಯಕ್ಷವಾಗಿ ಒತ್ತಡ ತರುವುದು ಪರಿಸ್ಥಿತಿಯನ್ನು ಇನ್ನಷ್ಟು ಹದಗೆಡಿಸೀತು ಅಷ್ಟೆ.'' ಇದೊಂದು ಕಡೆಯಾದರೆ, ಇನ್ನೊಂದೆಡೆ ಎರಡೂ ದೇಶಗಳಲ್ಲಿರುವ ಮತಾಂಧ ಶಕ್ತಿಗಳು ಯಾವುದೇ ಮಾತುಕತೆಗಳನ್ನು ನಿರಾಕರಿಸುವ, ಯುದ್ಧದಿಂದಲೇ ಪರಿಹಾರ ಸಾಧ್ಯ ಎಂಬ ಒತ್ತಡಗಳನ್ನು ತರುತ್ತಿರುವುದು ರಹಸ್ಯವೇನಲ್ಲ. ಈ ಶಕ್ತಿಗಳು ಯಾವುದೇ ಸಂಬಂಧಗಳ ಸುಧಾರಣೆಯನ್ನು ಭಂಗಗೊಳಿಸಲು ನೋಡುತ್ತಿವೆ. ಯುದ್ಧದಿಂದ ಸಮಸ್ಯೆಗಳು ಬಗೆಹರಿಯುವ ಬದಲು ಹೊಸ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ ಎನ್ನುವುದು ಅನುಭವ ವೇದ್ಯವಾಗಿರುವ ಸಂಗತಿ. ಭಾರತ-ಪಾಕಿಸ್ತಾನಗಳ ನಡುವೆ ಈ ಅರ್ಧ ಶತಮಾನದಲ್ಲಿ ಮೂರು ಯುದ್ಧಗಳು ಕಾರ್ಗಿಲ್ ಸಮರವನ್ನು ಒಳಗೊಂಡಂತೆ ಹಲವಾರು ಸಶಸ್ತ್ರ ಘರ್ಷಣೆಗಳೂ ನಡೆದಿವೆ. ಇವುಗಳ ಪರಿಣಾಮ ಎರಡೂ ದೇಶಗಳಲ್ಲಿ ಪ್ರಾಣಹಾನಿ, ಆರ್ಥಿಕ ನಷ್ಟಗಳು, ಮತ್ತಷ್ಟು ದ್ವೇಷ ಬಿಟ್ಟರೆ ಬೇರೇನೂ ಆಗಲಿಲ್ಲ. ಯುದ್ಧಾನಂತರದ ಒಪ್ಪಂದಗಳೂ ಕಾರ್ಯಗತವಾಗಲಿಲ್ಲ. ಸಾಕಷ್ಟು ಪೂರ್ವಸಿದ್ಧತೆ ಇಲ್ಲದೆ, ಸಮಸ್ಯೆಗಳನ್ನು ಬಗೆಹರಿಸಲು ಮಾರ್ಗಗಳನ್ನು ಅರಸಬೇಕೆಂಬ ದೃಢಸಂಕಲ್ಪವಿಲ್ಲದೆ, ಎಲ್ಲಕ್ಕಿಂತ ಹೆಚ್ಚಾಗಿ ಕೊಡುಕೊಳ್ಳುವ ಮನೋಭಾವವಿಲ್ಲದೆ ಮಾತುಕತೆಗಳಲ್ಲಿ ತೊಡಗುವುದು ಪರಿಣಾಮಕಾರಿಯಾಗದು. ಎರಡೂ ದೇಶಗಳು ಈಗ ಸ್ವಲ್ಪಮಟ್ಟಿಗೆ ಇದನ್ನು ಅರಿತಿರುವಂತೆ ಕಾಣುತ್ತಿದೆ. ಅದರಿಂದಲೇ ಹಂತಹಂತವಾಗಿ ಸಂಬಂಧಗಳನ್ನು ಕುದುರಿಸುವತ್ತ ಹೆಜ್ಜೆ ಇರಿಸಿರುವುದು ಸೂಕ್ತ. ಪಾಕಿಸ್ತಾನ ಕಾಶ್ಮೀರದ ಪ್ರಶ್ನೆಯನ್ನು ಬಗೆಹರಿಸದೆ ಬೇರಾವುದನ್ನೂ ಕೈಗೆತ್ತಿಕೊಳ್ಳಲಾಗದು ಎಂಬ ಹಠಮಾರಿತನ ಸ್ವಲ್ಪಮಟ್ಟಿಗೆ ಸಡಿಲಿಸಿರುವಂತೆ ತೋರುತ್ತಿದೆ. ಹಾಗೆಯೇ ಭಾರತವೂ ಕೂಡ ಯಾವ ಪೂರ್ವಷರತ್ತನ್ನು ಮುಖ್ಯವಾಗಿ ಗಡಿಯಾಚೆಗಿನ ಭಯೋತ್ಪಾದನೆ ಕೃತ್ಯಗಳನ್ನು ಪಾಕಿಸ್ತಾನ ತಡೆಯಬೇಕೆಂಬ ಷರತ್ತನ್ನು ಮುಂದಿರಿಸಿಲ್ಲ. ಮನಾಲಿಯಲ್ಲಿ ಪ್ರಧಾನಿ ವಾಜಪೇಯಿ ಈ ಬಗ್ಗೆ ಸ್ಪಷ್ಟ ಸೂಚನೆ ನೀಡಿದ್ದಾರೆ.

ಎರಡೂ ದೇಶಗಳ ಮಧ್ಯೆ ಸಂಬಂಧಗಳು ಉತ್ತಮಗೊಳ್ಳುವುದಕ್ಕೆ ಕಾಶ್ಮೀರ ಸಮಸ್ಯೆಗೆ ಪರಿಹಾರ ಕಾಣುವುದು ಬಹುಮುಖ್ಯ ಎನ್ನುವುದರಲ್ಲಿ ಸಂಶಯವಿಲ್ಲ. ಅದಕ್ಕಾಗಿ ಶ್ರಮಿಸುವುದು ಅತ್ಯಗತ್ಯ. ಆದರೆ ಅದಕ್ಕಿಂತ ಮುಂಚೆ ಎರಡೂ ದೇಶಗಳ ಮಧ್ಯೆ ವಿಶ್ವಾಸ ನಿರ್ಮಿಸಲು ವಾಣಿಜ್ಯ, ಕ್ರೀಡೆ, ಸಾಂಸ್ಕೃತಿಕ ವಿನಿಮಯ, ಜನಸಂಪರ್ಕ ಹೀಗೆ ವಿವಿಧ ಕ್ಷೇತ್ರಗಳಲ್ಲಿ ಸಂಬಂಧ ಸುಧಾರಣೆ ಮಾಡುವುದು ಅವಶ್ಯಕವಾಗಿ ಆಗಬೇಕಾದ್ದು. ಇತ್ತೀಚೆಗೆ ಪಾಕಿಸ್ತಾನದ ಪಾರ್ಲಿಮೆಂಟರಿ ನಿಯೋಗವೊಂದು ಭಾರತಕ್ಕೆ ಭೇಟಿ ನೀಡಿದ್ದು ಒಂದು ಮುಖ್ಯ ಬೆಳವಣಿಗೆ. ಆಡಳಿತದಲ್ಲಿರುವ ಎನ್‌ಡಿಎ ಸರಕಾರದ ವರಿಷ್ಠರಾಗಲಿ, ಪ್ರಮುಖ ಪಕ್ಷವಾಗಿರುವ ಭಾಜಪ ನಾಯಕರಾಗಲಿ, ಈ ನಿಯೋಗದ ಸದಸ್ಯರನ್ನು ಭೇಟಿ ಮಾಡುವ ಸೌಜನ್ಯ ತೋರದಿದ್ದುದು ಖಂಡನೀಯ ಹಾಗೂ ಅಪಮಾನಕರ. ಇಂಥ ವರ್ತನೆಗಳಿಂದ ವಿಶ್ವಾಸ ಬೆಳೆಯಲಾರದು. ಇನ್ನು ಮುಂದಾದರೂ ಅಂಥ ಪ್ರಕರಣಗಳು ನಡೆಯದಂತೆ ನೋಡಿಕೊಳ್ಳಬೇಕಾಗಿದೆ. ಸಂಬಂಧಗಳ ಸುಧಾರಣೆಯತ್ತ ಕೈಗೊಳ್ಳುವ ಮುಂದಿನ ಕ್ರಮಗಳನ್ನು ಭಂಗಗೊಳಿಸಲು ಪ್ರಯತ್ನಿಸುವ ಶಕ್ತಿಗಳನ್ನು ಬಯಲುಗೊಳಿಸಬೇಕಾಗಿದೆ. ಭಾರತ-ಪಾಕಿಸ್ತಾನಗಳ ನಡುವಿನ ಸಂಬಂಧಗಳ ವಿಚಾರದಲ್ಲಾಗಲೀ, ಕಾಶ್ಮೀರದ ವಿಚಾರದಲ್ಲಾಗಲೀ ಆಡಳಿತದಲ್ಲಿರುವ ಎನ್‌ಡಿಎ ಸರಕಾರದ ನಾಯಕರುಗಳು ಮನಬಂದಂತೆ ಮಾತಾಡುವುದಕ್ಕೆ ಕಡಿವಾಣ ಹಾಕಬೇಕಾದ್ದು ಪ್ರಧಾನಿ ವಾಜಪೇಯಿಯವರ ಕರ್ತವ್ಯವಾಗಿದೆ. ಭಾರತ-ಪಾಕಿಸ್ತಾನಗಳ ಮಧ್ಯೆ ಸಂಬಂಧಗಳ ಸುಧಾರಣೆಗೆ, ಸಮಸ್ಯೆಗಳ ಪರಿಹಾರಕ್ಕೆ ಕೈಗೊಳ್ಳಲಾಗುವ ಪ್ರತಿಯೊಂದು ಕ್ರಮಕ್ಕೂ ಭಾರತದ ಎಲ್ಲ ಪ್ರಗತಿಪರ ಚಿಂತಕರ, ಜನತೆಯ ಬೆಂಬಲವಿದ್ದೇ ಇದೆ. ❑

# ಪುಗಸಟ್ಟೆ ಪ್ರಸಂಗ

ಅಂಕ-೧

(ಗ್ರಾಮ ಪಂಚಾಯಿತಿ ಅಧ್ಯಕ್ಷೆ ಶಿವಮ್ಮನ ಮನೆ ಜಗುಲಿಯ ಒಂದು ಮೂಲೆಯಲ್ಲಿ ಅವಳ ಗಂಡ ಪುಗಸಟ್ಟೆ ಬೀಡಿ ಸೇದುತ್ತಾ ಕುಳಿತಿದ್ದಾನೆ. ಅವರ ಕೇರಿಯ ಕರಿಯನ ಪ್ರವೇಶ).

**ಕರಿಯ** : ಅಕ್ಕೋ.... ಶಿವಕ್ಕೋ.... ಅಣ್ಣ ಪುಗಸಟ್ಟಣ್ಣಾ, ನೀನು ಇಲ್ಲೇ ಇದ್ದೀಯೆ, ಅಕ್ಕಿಲ್ವ ?

**ಪುಗುಸಟ್ಟೆ**: ಯಾರು ಅಧ್ಯಕ್ಸರ ?

**ಕರಿಯ** : ಹೂಕಣ್ ಪುಗಸಟ್ಟಣ್ಣ, ಇಲ್ವ ?

**ಪುಗುಸಟ್ಟೆ** : ಅಧ್ಯಕ್ಸರು ಇಲ್ಲ ಕನ, ಬಾ ಕುಂತ್ಕೊ.

**ಕರಿಯ** : ಎಲ್ಲಿಗೋಗವ್ರೆ ?

**ಪುಗಸಟ್ಟೆ** : ಅಧ್ಯಕ್ಸರಾ ? ಅದೇನೋ ಗೌಡರ ಗದ್ದೆ ಕಳೆ ಕೀಳೋಕೆ ಅಂತ ಹೊತ್ತಾರೆನೆ ಹೋದ್ರಪ್ಪ. ಏನಿಸ್ಯ ?

**ಕರಿಯ** : ಏನಿಲ್ಲ ಪುಗಸಟ್ಟಣ್ಣ, ಅಂಗೇ ಮಾತಾಡ್ಸಿಕೊಂಡೋಗುಮ ಅಂತ ಬಂದಿ... ನನ್ನೆಂಡ್ತಿದು ಒಂದೇ ವರಾತ ನಿನ್ನೂವೆ ಅಕ್ಕನ್ನೂವೇ ಉಣ್ಣಕ್ಕೆ ಕರ್‍ಕಂಬಾ ಅಂತಾವ.

**ಪುಗಸಟ್ಟೆ** : ಏನ್ ಊಟವೋ ಅದೇನ್ ಕತೆಯೋ, ಅದೇನ್ ಕೇಳಿಯೆ ಅದ. ಇವಳು ಅಧ್ಯಕ್ಸಳಾಗೇ ಆದ್ಲು, ನನಗೂ ಸಾಕಾಗೋಗದೆ ಕಣೋ ಕರಿಯ. ಎಸ್ಟು ಮನ್ಲಿ ಅಂತ ಉಣ್ಣಾವ ನಾವೂವೆ.

**ಕರಿಯ** : ಏನೋ ನಮ್ಮೋರು ತಮ್ಮೋರು ಅಂತ ಕರೀತಾರೆ... ಸಪ್ಪೆ ಊಟ ಅಲ್ಲ ಕಣ್ ಪುಗಸಟ್ಟಣ್ಣ.

**ಪುಗಸಟ್ಟೆ** : ಸಪ್ಪೆ ಊಟಕೆ ನನ್ ಸಪ್ಪವೂ ಬರಾಕಿಲ್ಲ ಕನ, ಬಾಡಿನೂಟ ಅಂತ ನಾನೂ ಕಂಡಿವ್ನಿ. ಅದೇರೇನ್ ಮಾಡೀಯೆ, ಅಧ್ಯಕ್ಸರೇನೋ ಕಾರ್ತಿಕ ಮಾಸ ಅಂತ ಕುಂತವ್ರೆ.

**ಕರಿಯ** : ಮೊಟ್ಟೆ ಕೋಳಿ ಕೂದವಳೆ, ಪುಗಸಟ್ಟಣ್ಣ.

**ಪುಗಸಟ್ಟೆ**: ಯಾವ ಕೋಳಿ ಆದ್ರೂ ಆಟೇಯ. ಹೊಲಸು ತಿನ್ನೋದಂಗಿರ್‍ಲಿ, ಅದರ ಸುದ್ದಿ ಎತ್ತಿದರೆ ಸಾಕು, ಅಧ್ಯಕ್ಸರು ಕವಕೋಳಂಗೆ ಬತ್ತಾಳೆ. (ದೂರದಲ್ಲಿ ಮಕ್ಕಳು ಹಾಡುತ್ತಿರುವುದು ಕೇಳಿಸುತ್ತದೆ).

ಯವ್ವಾ ಚಂದದಿಂದ ಸಾಕಿದ್ನಲ್ಲೆ  
ಕೆಂದ ಕೋಳಿಯಾ  
ಅವರ ಮಕ್ಕಳ ತಿನ್ನಾ  
ಮುರ್‍ಕೊಂಡ್ ತಿಂದ್ರು ಮೊಟ್ಟೆ ಕೋಳಿಯಾ  
ಹೊನ್ನಮ್ಮನವ್ರೆ ನೀವೇ ಕಣ್ರ  
ಹಿಡಿದು ಬಿಟ್ಟಿದ್ದು  
ಪುಟ್ಟಮ್ಮನೋರೆ ನೀವೇ ಕಣ್ರ  
ಪುಕ್ಕ ತರ್‍ದಿದ್ದು  
ಚೌಡಮ್ಮನವರೆ ನೀವೇ ಕಣ್ರ  
ಚೂರು ಮಾಡಿದ್ದು  
ಭಾಗಮ್ಮನವರೆ ನೀವೇ ಕಣ್ರ  
ಭಾಗ ಮಾಡಿದ್ದು  
ಕಾಳಮ್ಮನವರೆ ನೀವೇ ಕಣ್ರ  
ಖಾರ ಅರ್‍ದಿದ್ದು  
ಸಾಕಮ್ಮನವರೆ ನೀವೇ ಕಣ್ರೇ  
ಸಾರು ಮಾಡಿದ್ದು  
ನಾಗಮ್ಮನವರೆ ನೀವೇ ಕಣ್ರ  
ಜಗಳ ಬಿಡಿಸಿದ್ದು  
ರಾಜಮ್ಮನವರೆ ನೀವೇ ಕಣ್ರ  
ರಾಜಿ ಮಾಡ್ಸಿದ್ದು

**ಕರಿಯ** : ನೀನೇ ಇಂಗಂದ್ರೆ ಹೆಂಗಣ್ಣ, ನಾನು ಕರ್‍ಕೊಂಡು ಬಂದೇ ಬತ್ತೀನಿ ಅಂತಾವ ಅವ್ರು ಕಾರ ಅರ್‍ಕೊಂಡು ಕುಂತವ್ರೆ. ಅದೂ ಅಲ್ದೇಯ ನಾನು ನಿನ್ಗೇಂತ ಎಲ್ಲ ರೆಡಿ ಮಾಡಿವ್ನಿ ಪುಗಸಟ್ಟಣ್ಣ.

**ಪುಗಸಟ್ಟೆ** : ಲೋ ಕರಿಯಾ, ನನ್ಗೂವೆ ಪಾಕೀಟ ಕುಡ್ಡೂ ಕುಡ್ಡೂ ನಾಲ್ಗೆಲ್ಲ ಗಬ್ಬೆದ್ದು ಹೋಗದೆ ಹೋಗತ್ತಾಗಿ, ಏನೂ ಬ್ಯಾಡ.

**ಕರಿಯ** : ಏಯ್... ಪಾಕೀಟಲ್ಲ ಕನಣ್ಣ... ನೀನೂ ಅಂದ್ರೇನು ನಿನ್ನ ಗ್ರೇಡು ಅಂದ್ರೇನು, ಅದೂ ತಿಳಿಯಾಕಿಲ್ಲ ಅಂತೀಯಾ ನನ್ಗೆ, ಬ್ರಾಂದಿ ತಂದಿವ್ನಿ ಪುಗಸಟ್ಟಣ್ಣಾ.

**ಪುಗಸಟ್ಟೆ** : ನೀನು ಈ ಪಾಟ ಕರೀತಿದೀಯೆ, ಬರ್‍ದೆ ಇದ್ರೆ ತೆಪ್ಪಾಯ್ತದೆ. ಅಧ್ಯಕ್ಸರು ಕಯಾ ಕಯಾ ಅಂತಾಳೆ... ಆದರೂ ಬತ್ತೀನಿ ಬುಡು.

**ಕರಿಯ** : ಸದ್ಯ ನೀನಂಗಂದಲ್ಲಾ... ಪುಗಸಟ್ಟಣ್ಣಾ.

**ಪುಗಸಟ್ಟೆ**: ಅದೇನ್ಲ ಕರಿಯ.

**ಕರಿಯ** : ಪಂಚಾಯ್ತಿ ಮೀಟಂಗಿದ್ದದಂತೆ...

**ಪುಗಸಟ್ಟೆ** : ಹೂಕನೋ, ಮುಂದಿನ ಸೋಮವಾರ ಐತಿ. ಅದ್ಕೇನೀಗ ?

**ಕರಿಯ** : ಪುಗಸಟ್ಟಣ್ಣಾ ನೀನೇ ಕಂಡಿದ್ದೀಯಲ್ಲಾ ನಮ್ ಒಡಬಾಳ... ಹಕ್ಕು ಪತ್ರಕ್ಕೆ ಅರ್ಜಿ ಕೊಟ್ಟಿವ್ನಿ.

**ಪುಗಸಟ್ಟೆ**: ಸುಮಾರು ಜನ ಕೊಟ್ಟವ್ರಂತಲ್ಲಾ.

**ಕರಿಯ** : ನೀನ್ ಕಾಣದ್ ಏನಿದ್ದಾತು ಪುಗಸಟ್ಟಣ್ಣಾ.... ಅಧ್ಯಕ್ಸರು ದೊಡ್ಮನ್ಸು ಮಾಡುದ್ರೆ ಎಲ್ಲ ಹೂ ಎತ್ತಿದಂಗೆ ಆಗೋಯ್ತದೆ.

**ಪುಗಸಟ್ಟೆ** : ಅಧ್ಯಕ್ಸರೇನೋ ಸರಿ ಕನೋ ಕರಿಯಾ, ನಿನಗೆ ಬ್ಯಾಡಾ ಅಂದಾಳಾ ? ಆದರೇನು ಮಾಡೀಯೆ, ನೀನೂ ಕಂಡಿದ್ದೀಯೆ. ಎಲ್ಲ ಬಾಯಿಬಿಟ್ಟುಕೊಂಡು



ಪ್ರೊ॥ ಎಚ್. ಎಲ್. ಕೇಶವಮೂರ್ತಿ

ಕುಂತಿರ್ತವೆ. ಅವಕ್ಕೆ ಒಂದಿಸ್ಟನ್ನಾರ ಹಾಕಬೇಕಾಯ್ತದೆ. ಅಧ್ಯಕ್ಷರೇನೋ ಬಿಡಿಗಾಸೂ ಬ್ಯಾಡಾಂತಾಳೆ. ಆದರೂ ತಿನ್ನೋರಿಗೆ ತಿನ್ನುಸ್ಲೇಬೇಕಲ್ಲ?

**ಕರಿಯ** : ಅದೇನಾಯ್ತದೆ ಕೊಡ್ತೀನಿ ಬುಡು ಪುಗಸಟ್ಟಣ್ಣಾ ಒಟ್ನಲ್ಲಿ ಹಕ್ಕು ಪತ್ರ ಸಿಕ್ಕಿದರೆ ಸರಿ.

**ಪುಗಸಟ್ಟೆ** : ಅಧ್ಯಕ್ಷರಿಗೇನೋ ಕಂಡಿಸನ್ನಾಗಿ ಹೇಳ್ತೀನಿ. 'ಲೇ ಇದ ಮಾಡಲೇಬೇಕು' ಅಂತಾವ. ನೋಡಾನ ನಿನ್ನ ಹಣೆಬರ ಇದ್ದಂಗಾಗ್ಲಿ ನಡಿ.

**ಕರಿಯ** : ಹಂಗಾರೆ ಬರ್ಲ್ಲಾ ಪುಗಸಟ್ಟಣ್ಣಾ

**ಪುಗಸಟ್ಟೆ** : ಬತ್ತೀಯಾ... ಹಂಗಾರೆ ಹಕ್ಕುಪತ್ರ ಬ್ಯಾಡವಾ ?

**ಕರಿಯ** : ನಗಸಾಟಿಕೆ ಮಾಡೀಯೊ, ಬೇಕು ಕನಣ್ಣ.

**ಪುಗಸಟ್ಟೆ**: ಮತ್ತೆ ದೊರೆ ಮಗನಂಗೆ ಕೈಬೀಸಿಕೊಂಡು ಹೊಂಟು ನಿಂತಿದ್ದಿ. ನೀನು ಕಾಣಾ ಮೀಟಿಂಗ್‌ಗೆ ಮೊದ್ಲೇ ಎಲ್ಲರನ್ನೂ ಸರಿ ಮಾಡಿಕೋಬೇಕು. ನನ್ನ ಹತ್ತಿರ ಇದ್ದಿದ್ದರೆ ನಿನ್ನ ಕೇಳ್ತಿರಲಿಲ್ಲ. ನಾನೇ ಕೊಡ್ತಿದ್ದೆ. ಕೆಲ್ಸ ಆದ್ಮೇಲೆ ತಗೋಬಹುದಾಗಿತ್ತು. ಆದರೇನ್ ಮಾಡೀಯೆ, ಈಗ ನಂದೂ ಬರಿಕೈ.

**ಕರಿಯ** : ಎಷ್ಟು ತಗುಲ್ತದೆ ಪುಗಸಟ್ಟಣ್ಣ.

**ಪುಗಸಟ್ಟೆ** : ಒಂದಿನ್ನೂರು ಕೊಟ್ಟಿರು, ಹೆಚ್ಚು ಕಮ್ಮಿ ಆಮೇಲೆ ನೋಡಾನಂತೆ.

**ಕರಿಯ** : ಉಣ್ಣಕ್ಕೆ ಬತ್ತೀಯಲ್ಲ ಆಗ ಕೊಡ್ತೀನಿ. ಪುಗಸಟ್ಟಣ್ಣೋ ಇದೊಂದಾಗ್ಲೇಬೇಕು.

**ಪುಗಸಟ್ಟೆ**: ಆದಂಗೇಯ ಬುಡೋ ಕರಿಯ....

ಅದ್ಯಾರೋ ಸಾಸಕರು ಅರ್ಜೆಂಟಾಗಿ ಬರೇಳಿದ್ರಂತೆ, ನೋಡ್ಕಂಡು ಸಂಜಿ ಹೊತ್ತಿಗೆ ಬಂದುಬುಡ್ತೀನಿ.

*(ಇಬ್ಬರೂ ಬೇರೆ ಬೇರೆ ದಿಕ್ಕಿನಲ್ಲಿ ಹೊರಡುವರು)*

**ಸತ್ತೆ ಬೋರ** : ಪುಗಸಟ್ಟಣ್ಣೋ ಪುಗಸಟ್ಟಣ್ಣಾ

**ಪುಗಸಟ್ಟೆ**: ಸತ್ತೆ ಬೋರ ನೀನಾ ?

**ಸತ್ತೆ** : ನಿನ್ನೆ ನೋಡುಮಾಂತ ಮನೆ ತಕ್ಕೆ ಹೋಗಿದ್ದೆ. ನೀನು ಹಿಂಗೊಟ್ಟಿದ್ದಿ ಅಂತಾವ ಕರಿಯ ಅಂದ.

**ಪುಗಸಟ್ಟೆ** : ಓೀ... ಸಾಕಾಗೋಗದೆ ಕನೋ ಸತ್ತೆ. ಅದೇನೋ ಸ್ಕಾನೆ ಅರ್ಜೆಂಟು ಅಂತಾವ ಸಾಸಕರು ಹೇಳಿ ಕಟ್ತೈ ಹೋಗಂಗಿಲ್ಲ ಬುಡಂಗಿಲ್ಲ ಏನ್ಮಾಡೀಯೆ ಹೊಂಟಿದೀನಿ.

**ಸತ್ತೆ** : ಎಂಗಿದ್ರೂ ಹೋಗೋನು ಹೋಯ್ತಿದಿ. ನನ್ನದೊಂದು ಮಾತ ಅವರ ಕಿವಿ ಮೇಲೆ ಹಾಕ್ಬುಡಣ್ಣಾ.

**ಪುಗಸಟ್ಟೆ**: ಯಾವಿಸ್ಯ ನೀನೇಳಾದು ?

**ಸತ್ತೆ** : ಅದೇ ಆಸ್ರಯ ಮನೆ ಇಸ್ಯ ಕನಣ್ಣ. ಮುಂದಿನ ವಾರವೋ ಆಚೆ ವಾರವೋ ಆಸ್ರಯ ಕಮಿಟಿ ಮೀಟಿಂಗ್ ಇದ್ದದಂತೆ.

**ಪುಗಸಟ್ಟೆ** : ಹೂಂ ಅದೆ. ಆಗಲೇ ಗ್ರಾಮಸಭೇಲಿ ಕೆಳ್ಳಟ್ಟೆ ತಿಮ್ಮನ ಹೆಸರು ಬರ್ದವ್ರಲ್ಲ.

**ಸತ್ತೆ**: ನನ್ನೆಸ್ರೂ ಅದೇ ಕನಣ್ಣಾ.

**ಪುಗಸಟ್ಟೆ**: ಅದೆ ಸರಿಕನೋ ಸತ್ತೆ, ನಾನಾಗ್ಲೆ ಅವನೆಸ್ರ ಸಾಸಕರಿಗೇಳಿ ಬಿಟ್ಟವ್ನಲ್ಲಾ...

**ಸತ್ತೆ**: ನಂದೂ ಒಂದ ಹೇಳಿಬುಡಣ್ಣ.

**ಪುಗಸಟ್ಟೆ** : ಹೇಳಬಹುದಿತ್ತೂ... ಆದ್ರೇನು ಮಾಡೀಯೆ... ಸಾಸಕರು ಕಂಡಿದ್ದೀಯಲ್ಲ, ಖೈಡಿನ ಇಸಮ್ಮು... 'ಪುಗಸಟ್ಟೆ ನೀನು ಒಂದೆಸರೇಳು, ನೀನು ಹೇಳಿದವರಿಗೆ ಮನೆ ಕೊಡ್ತೀನಿ' ಅಂದುಬುಟ್ಟವರೆ...

**ಸತ್ತೆ**: ನೀನೇ ಹಿಂಗೆ ಕೈಚೆಲ್ಲಿ ಬಿಟ್ಟರೆ ಹೆಂಗಣ್ಣಾ.

**ಪುಗಸಟ್ಟೆ** : ನನ್ ಕೈ ಕಟ್ಟೋಗದೆ ಕನೊ ಸತ್ತೆ... ಏನ್ಮಾಡ್ಲಿ ಈಗ... ಆ ತಿಮ್ಮ ಆಗಲೇ ದುಡ್ಡು ಕೊಟ್ಟು ಎಲ್ರನೂ ಸರಿ ಮಾಡಿಕೊಂಡವ್ನೆ. ಎಲ್ರ ಬಾಯಿಗೂ ನಾನೇ ಹಾಕುಸ್ದೆ ಅಂತೀನಿ. ಹತ್ರತ್ರ ಎರಡು ಸಾವಿರ ಆಯ್ತು.

**ಸತ್ತೆ** : ಹೆಂಗಾರ ನನಗೂ ಒಂದು ಸಿಗಂಗೆ ಮಾಡ್ಬುಡು ಪುಗಸಟ್ಟಣ್ಣಾ. ನೀನು ಮನಸು ಮಾಡಿದರೆ ಆಗೇ ಆಯ್ತದೆ.

**ಪುಗಸಟ್ಟೆ** : ನೀನು ಹಂಗಂತೀಯೆ. ಏನು ಮಾಡ್ಲಿ, ಈಗ ಉಳಿದಿರೋದು ಒಂದೇ ಮನೆ. ನಿನಗೆ ಸಿಗಬೇಕಾದರೆ ಅವನಿಗೆ ತಪ್ಪಿಸಬೇಕು. ನೀನು ಬರೋದು ಬಂದೆ ಒಂದೆರಡು ದಿನ ಮೊದ್ಲೇ ಬರಬಾರದಿತ್ತಾ.... ಎಲ್ಲಾ ನನ್ ಕೈಲೇ ಇತ್ತು. ಅವ್ನೋ ಈಗಾಗಲೇ ಹಣ ಸುರಿದವ್ನೆ....

**ಸತ್ತೆ** : ನಾನೂ ಕೊಡ್ತೀನಿ ಪುಗಸಟ್ಟಣ್ಣ. ಇದ್ದೆ ಅಂತ್ಲೆ ಕುರಿ ಮಾರಿ ಜೊತೆ ಮಾಡಿವ್ನಿ.

**ಪುಗಸಟ್ಟೆ**: ನಿಂದು ವಸಿ ಕಾಂಪ್ಲಿಕೇಸನ್ ಕೇಸು ಎರಡು ಸಾವಿರಕ್ಕೆ ಆಗೋ ಮಾತಲ್ಲ. ಹತ್ತತ್ರ ಮೂರೋ ಮೂರೂವರೆಯೋ ಆಗಬೈದೂ...

**ಸತ್ತೆ**: ವಸಿ ಕಮ್ಮಿ ಮಾಡ್ಕೊ ಪುಗಸಟ್ಟಣ್ಣಾ.

**ಪುಗಸಟ್ಟೆ**: ನನಗೇ ಕೊಡೋ ಹಂಗೆ ಹೇಳ್ತಿದೀಯಲ್ಲಾ ಸತ್ತೆ. ಇದ್ರೇನು ನಾನು ಮಡಿಕತ್ತೀನ? ಸಾಹೇಬರಿಗೆ, ಸಾಸಕರಿಗೆ ಸೇರಬೇಕಾಗಿರೋ ಹಣ ಇದು. ಮೊದಲೇ ಒಂದೆಸರ ಹೇಳಿದ್ದೀನಿ. ಅದು ಬ್ಯಾಡಿ ಈ ಹೆಸರ ಬರ್ಕಳಿ ಅನ್ನಬೇಕು. 'ಹುಡುಗಾಟ ಆಡೀಯಾ ಪುಗಸಟ್ಟೆ' ಅಂದ್ಬುಟ್ರೆ ನನ್ ಮರ್ವಾದಿ ಏನಾಗ್ಬೇಕು ?

**ಸತ್ತೆ**: ಹಂಗಲ್ಲ ಕಣಣ್ಣ, ವಸಿ ಜಾಸ್ತಿ ಆಯ್ತು ಅಂತಾವ.

**ಪುಗಸಟ್ಟೆ**: ಆಗಲಿ ಏನಂತೆ? ಅದನ್ನೇನು ನಿಮ್ಮನೆ ಯಿಂದ ಕೊಟ್ಟೀಯ? ಸಬ್ಸಿಡಿ ಬಂದಾಗ ಸಾವಿರ ಸಾವಿರ ಎಣಿಸ್ಕತೀಯೆ.

**ಸತ್ತೆ** : ಎಂಗೋ ಪುಗಸಟ್ಟಣ್ಣ ನಿಮ್ಮನೆಗೆ ಮೂರು ಸಾವಿರ ತಲಪುಸ್ತೀನಿ, ಅವರ ಕಿವಿಮ್ಯಾಗೆ ಈ ಮಾತ ಹಾಕದ ಮಾರೀಬ್ಯಾಡ.

**ಪುಗಸಟ್ಟೆ**: ಜ್ವಾಕೆ, ಅಧ್ಯಕ್ಷರ ಕೈಗೆ ಇದು ಕೊಟ್ಬುಗಿಟ್ಟೀಯೆ, ಅದ್ಕೆ ಇದ್ಕೆ ಅಂತ ಉಡಾಯಿಸ್ಬಿಡ್ತದೆ. ಆಮೇಲೆ ನಿನಗೇ ತೊಂದರೆ. ನನ್ ಕೈಗೇ ತಲುಪ್ಸು ಹೆಂಗಿದ್ರೂ ಸಾಸಕರ ಮನೇಗೇ ಹೊಂಟಿವ್ನಿ ನೀನೂ ಬಾ, ನಿನ್ನೆದುರ್ಗೇ ಹೇಳ್ತೀನಿ.

**ಸತ್ತೆ** : ವಸಿ ಕೆಲ್ಸಿತ್ತು... ಮನೆ ಅಂತ ಒಂದಾಗಲಿ ನೋಡಾನ, ನಡೀ ಬತ್ತೀನಿ.

*(ಇಬ್ಬರೂ ಶಾಸಕರ ಮನೆಯ ಬಳಿಗೆ ಬರುವರು. ಮನೆಯ ಮುಂದೆ ಜನ ಜಂಗುಳಿ. ಪುಗಸಟ್ಟೆ ಅಲ್ಲೇ ನಿಂತಿರು ವಂತೆ ಸತ್ತೆ ಬೋರನಿಗೆ ಹೇಳಿ ಒಳಗೆ ಹೋಗುವನು)*

**ಶಾಸಕ** : ಏನ್ರೀ ಇಂಜಿನಿಯರ್ ಸಾಹೇಬ್ರೆ.

**ಇಂಜಿನಿಯರ್** : ಆಫೀಸ್‌ಗೆ ಹಾಕಬಿಟ್ಟಿದ್ದಾರೆ ಸಾರ್.

**ಶಾಸಕ** : ಯಾರಿಗೆ ಹೇಳಬೇಕ್ರ ?

**ಇಂಜಿನಿಯರ್** : ಇಇ ಗೇಳಿದ್ರೆ ಸಾಕು ಸಾರ್.

**ಶಾಸಕ** : ಫೋನ್ ತಗೊಳ್ಳಿ ಅವರ್ಗೆ.... ಏನೋ ಪುಗಸಟ್ಟೆ ಇವತ್ತು ಯಾರ ತಲೆ ಮೇಲೆ ಕೈ ಇಟ್ಟೆ?

**ಪುಗಸಟ್ಟೆ**: ಈಗ ಎಲ್ಲ ಬುಟ್ಬು ಬುಟ್ಟದೀನಿ ಸಾ.

**ಶಾಸಕ** : ಏನು ಬಿಟ್ಟಿದೀಯೋ ಏನೋ. ನಿನ್ನೆಂಡ್ತಿ ಈಗ ಅಧ್ಯಕ್ಷೆ ಆಗವಳೆ. ಅವಳೆಸರ ಉಳಿಸು. ಇನ್ನು ಮೇಲಾರೂ ಸರಿಯಾಗಿರು. ಈಗೇನು ಬಂದದ್ದು ?

**ಪುಗಸಟ್ಟೆ**: ಸುಮ್ನೆ ಬಂದೆ ಸಾ.

**ಶಾಸಕ** : ಧರ್ಮದರ್ಶನಕ್ಕೆ ಬಂದೆ ಅನ್ನು. ಪೋಲಿ ಬಡ್ಡೆತ್ತುದೆ ಹೋಗಿ ಬಗ್ಗನ ನೋಡು.

**ಇಂಜಿನಿಯರ್** : ಸಾರ್ ಫೋನ್ ಸಿಕ್ತು

**ಶಾಸಕ** : ಹುಂ ನಡಿ ನಡಿ.... ಹಲೋ....

*(ಪುಗಸಟ್ಟೆ ಹೊರಗೆ ಕಾಯ್ದು ನಿಂತಿರುವ ಸತ್ತೆ ಬೋರನ ಬಳಿಗೆ ಬಂದು)*

**ಪುಗಸಟ್ಟೆ**: ಸಾಕು ಕನೋ ಮಾರಾಯ ನಿನ್ ಕೇಸಿನ ಸಾವಾಸ. ಹೊಲೇರ ಹೊಟ್ಟೇಲಿ ಹಾಕಿ ಮಾದಿಗರ ಹೊಟ್ಟೇಲಿ ತಗ್ದಂಗಾಯ್ತು.

**ಸತ್ತೆ**: ಯಾಕೆ ಪುಗಸಟ್ಟಣ್ಣ ಆಗಕ್ಕಿಲ್ಲ ಅಂದುಬುಟ್ಟರಾ ?

**ಪುಗಸಟ್ಟೆ** : ಮೊದ ಮೊದಲು ಹಂಗೇ ಅಂದ್ರು. ಬುಡ್ತೀನ ನಾನು, ಈ ಕೇಸು ಆಗ್ಲೇಬೇಕು ಅಂತ ಪಟ್ಟು ಹಾಕ್ದೆ. ಎಲ್ಲಾನೂ ಮಾತಾಡಿದೀನಿ ಅಂತ್ಲೂ ಅಂದೆ.

**ಸತ್ತೆ**: ಆಮೇಲೆ ?

**ಪುಗಸಟ್ಟೆ**: ಯಾರಿಗೆ ಅಂದ್ರು. ನಿನ್ನ ಹೆಸರು ಹೇಳ್ದೆ. ಓ ನಮ್ ಸತ್ತೆ ಬೋರಣ್ಣನದಾ ಅಂದ್ರು ? ಅಂತೀನಿ.

**ಸತ್ತೆ**: ಹಂಗಂದ್ರಾ ? ನನ್ ಕಂಡಿದ್ದಾರಾ ?

**ಪುಗಸಟ್ಟೆ** : ಏನೋ ಸತ್ತೆ ಹಿಂಗಂದ್ರೆ, ಈ ಸುತ್ತಲಿ ಅವುರ್ಗೆ ತಿಳೀದ ಒಂದು ನರಪಿಳ್ಳೆ ಇದ್ದಾತಾ ? ಹುಂ ಈಗ ಅದೆಲ್ಲ ಪಂಚಾಯಿತಿಗಿ ಯಾಕೆ, ಬಂದ ಕೆಲಸ ಆಯ್ತಲ್ಲ ಬುಡತ್ಲಾಗಿ.

**ಸತ್ತೆ** : ಮನೆ ಅಂತ ಒಂದಾಗ್ಬುಟ್ರೆ ನಿನ್ನೆಸ್ರೇಳ್ಕಂಡು ದೀಪ ಅಚ್ಚುಸ್ತೀವಿ ಪುಗಸಟ್ಟಣ್ಣಾ.

**ಪುಗಸಟ್ಟೆ**: ಆಯ್ತದೆ, ಆಯ್ತದೆ ಬಾ.

*(ದೂರದಿಂದ ಕೇಳಿಬರುತ್ತದೆ)*

ಲಂಚ ಲಂಚ ಲಂಚ
ಇದು ಲಂಚ ಪ್ರಪಂಚ
ಭೂಮ್ಯಾಕಾಶ ಆವರಿಸಿರೋ ಲಂಚ
ಗುಂಡಿ ತೋಡಿದರೂ ಲಂಚ
ಗುಂಡಿ ಮುಚ್ಚಿದರೂ ಲಂಚ
ರಸ್ತೆ ಮಾಡಿದರೂ ಲಂಚ
ರಸ್ತೆ ಮುಚ್ಚಿದರೂ ಲಂಚ
ಶವ ಪೆಟ್ಟಿಗೆಯಲೂ ಲಂಚ
ಶೌಚಾಲಯದಲೂ ಲಂಚ
ಮುಟ್ಟಿದಕ್ಕೆಲ್ಲ ಲಂಚ
ಮುಟ್ಟದಿರಲೂ ಲಂಚ !
ಲಂಚ ಲಂಚ ಲಂಚ !

### ಅಂಕ -೨

*(ಅಧ್ಯಕ್ಷೆ ಶಿವಮ್ಮಳ ಮನೆಗೆ ಕಾರ್ಯದರ್ಶಿ ಆಗಮನ)*

**ಕಾರ್ಯದರ್ಶಿ** : ಅಧ್ಯಕ್ಷರೇ ಅಧ್ಯಕ್ಷರೇ.

**ಪುಗಸಟ್ಟೆ** : ಯಾರೂ.. ಓ ಸೆಕೆಟ್ರಿಗಳಾ ಬಲ್ಲಿ ಬಲ್ಲಿ ಕುಂತ್ಕಳಿ. ಲೇ ಇವ್ಳೇ...

**ಶಿವಮ್ಮ**: ಏನ್ ಸೆಕೆಟ್ರಿಗಳೇ ಬಂದ್ರಿ ?

**ಕಾರ್ಯದರ್ಶಿ** : ಇವತ್ತು ಟ್ಯೂಬ್‌ಗಳ ಖರೀದಿಗೋಗ್ಬೇಕಿತ್ತು

**ಶಿವಮ್ಮ** : ಮೊದ್ಲು ಆ ಕೆಲಸ ಮಾಡಿ ಮಾರಾಯರ. ಬೀದಿ ದೀಪಾನೂ ಹಾಕ್ಸಕ್ಕಾಗದ ಮೇಲೆ ಇವಳೆಂತ ಅಧ್ಯಕ್ಷೆ ಅಂತ ಜನೆಲ್ಲ ಉಗೀತಾ ಬಿದ್ದದೆ.

**ಕಾರ್ಯದರ್ಶಿ** : ಖರೀದಿಗೆ ಮೂರು ಜನ ಹೋಗ ಬೇಕಿತ್ತು. ತಿರುಮಲೇಗೌಡರಿಗೆ ಇವತ್ತೇನೋ ಕೆಲ್ಸ ಇದ್ದ ದಂತೆ. 'ನೀನೇ ಎಲ್ಲ ಕಂಡಿದ್ದೀಯಲ್ಲ ತಂದ್ಬುಡು' ಅಂದ್ರು.

**ಶಿವಮ್ಮ** : ತಂದ್ಬುಡಿ ಮತ್ತೆ.

**ಕಾರ್ಯದರ್ಶಿ** : ನೀವು ಬರಬೇಕಾಯ್ತದೆ.

**ಶಿವಮ್ಮ** : ಮನೆ ಒಗ್ತನ ಮೈಮೇಲೆ ಬಿದ್ದದೆ. ತಿಗ ಕೆರ್ಕೊಳೋಕು ಪುರಸೊತ್ತಿಲ್ಲ.

**ಕಾರ್ಯದರ್ಶಿ** : ಒಬ್ಬನೇ ಖರೀದಿಗೆ ಹೋದ್ರೆ ತೆಪ್ಪಾಯ್ತದೆ. ಪುಗಸಟ್ಟಣ್ಣನಾದ್ರೂ ಬರ್ಲಿ.

**ಶಿವಮ್ಮ** : ಇದಾ.... ಹಂದಿವೊಂದಿಗಾಡಿ ಹಸಿನ ಕರ ಹೇಲ್ತಿಂತು ಅನ್ನೊಹಂಗೆ ನಿಮಗೂ ಕಲಿಬಾರದ್ದನ್ನೆಲ್ಲ ಕಲುಸ್ತದೆ. ಏನುಬ್ಯಾಡಿ, ನೀವೇ ಹೋಗ್ಬನ್ನಿ.

**ಪುಗಸಟ್ಟೆ**: ಅದ್ಯಾಕಮ್ಮಿ ನನ್‌ಕಂಡ್ರೆ ಈದ ಹಸಿನಂಗಾಡೀಯೆ. ನಾನೇನು ಅಂತ ಮಾಡಬಾರದ್ದ ಮಾಡಿರೋದು. ನಡಿ ಸೆಕೆಟ್ರ. ನಾನು ಬತ್ತೀನಿ.

*(ಪುಗಸಟ್ಟೆ ಹಾಗೂ ಕಾರ್ಯದರ್ಶಿ ಎಲೆಕ್ಟ್ರಿಕಲ್ ಸಾಮಾನುಗಳನ್ನು ಮಾರುವ ಅಂಗಡಿ ಬಳಿ ಬರುವರು)*

**ಅಂಗಡಿಯ ಯಜಮಾನ** : ಓಹೋ... ನಮಸ್ಕಾರ ಸೆಕ್ರೆಟರಿಗಳಿಗೆ... ಇವರೂ...

**ಕಾರ್ಯದರ್ಶಿ** : ನಮ್ಮ ಅಧ್ಯಕ್ಷರ ಯಜಮಾನರು, ಪುಗಸಟ್ಟಣ್ಣ.

**ಯಜಮಾನ** : ನಮಸ್ಕಾರ ಗೌಡರಿಗೆ. ಲೋ ಹೋಗೋ ಗೌಡರಿಗೆ ಎರಡು ಸ್ಪೆಷಲ್ ಚಾಯ್ ತಗೊಂಬಾರೋ.

**ಪುಗಸಟ್ಟೆ** : ಬರೀ ಚಾಯ್‌ನಲ್ಲೇ ಮುಗ್ಸಂಗೆ ಕಾಣ್ತದಲ್ಲೋ ಸೇಟು.

**ಯಜಮಾನ** : ಹಿ.ಹಿ....

**ಪುಗಸಟ್ಟೆ**: ಯವಾರೆಂಗೆ ನಿನ್ದು ಸೇಟು.

**ಯಜಮಾನ** : ಅಂದ್ರೆ, ಗೌಡ್ರೆ ?

**ಪುಗಸಟ್ಟೆ**: ಕಮೀಸನ್ನು ಕನಯ್ಯ.

**ಯಜಮಾನ** : ಮಾಮೂಲಿ ಹತ್ತು ಪರ್ಸೆಂಟು.

**ಪುಗಸಟ್ಟೆ**: ಏಯ್ ಗಿಟ್ಟಾಕಿಲ್ಲ ಬುಡಿ ಬುಡಿ.

**ಕಾರ್ಯದರ್ಶಿ** : ಪುಗಸಟ್ಟಣ್ಣ ಮಾಮೂಲಿ ಇಷ್ಟೇಯಾ ಕೊಡೋದು.

**ಪುಗಸಟ್ಟೆ** : ಈ ಅಂಗಡೀಲಿ ರೇಟು ವಸಿ ದುಬಾರಿ ಅಂತಿದ್ರೂ...

**ಯಜಮಾನ** : ನಿಮ್ಮ ಮನೇಗಾದ್ರೆ ಹೇಳಿ, ಸರಿಯಾದ ರೇಟು ಹಾಕ್ತೀನಿ. ಸರ್ಕಾರದ ದುಡ್ಡು ತಾನೆ.

**ಪುಗಸಟ್ಟೆ** : ಇದಪ್ಪ ಅಪ್ಪನಗುಟ್ಟಿದ ಮಾತು ಅಂದ್ರೆ. ಒಂದು ಕೆಲ್ಸ ಮಾಡಿ. ಯಾರಿಗೂ ಲುಕ್ಸಾನು ಆಗೋದು ಬ್ಯಾಡ. ರೇಟು ಬೇಕಾದರೆ ಇನ್ನೊಸಿ ಜಾಸ್ತಿ ಮಾಡಿ. ಹದಿನೈದು ಪರ್ಸೆಂಟ್ ಮಾಡ್ಕಳಿ... ಆಯ್ತಾ? ಲೆಕ್ಕ ಹಾಕಿ ಮತ್ತೆ.

**ಯಜಮಾನ** : ಪಾರ್ಸೆಲ್ ಊರಿಗೇ ಕಳುಸ್ತೀನಿ.

**ಪುಗಸಟ್ಟೆ**: ಹಂಗಾರೆ ಸೇಟು ಬರ್ಲಾ...

*(ಕೈ ಹೊಸೆಯುವನು. ಹಣ ತಲುಪಿದ ನಂತರ ಇಬ್ಬರೂ ಹಂಚಿಕೊಳ್ಳುವರು)*

### ಅಂಕ-೩

### (ಗ್ರಾಮ ಪಂಚಾಯಿತಿ ಸಭೆ)

**ಕಾರ್ಯದರ್ಶಿ** : ಮುಂದಿನ ವಿಷಯ ಹಕ್ಕು ಪತ್ರ ವಿತರಣೆ.

**ಅಧ್ಯಕ್ಷೆ**: ಹತ್ತು ಸೈಟವೆ. ಹದಿನೈದು ಅರ್ಜಿ ಬಂದವೆ.

**ಸದಸ್ಯ ೧** : ಒಬ್ಬರಿಗೆ ಕೊಟ್ಟರೆ ಒಬ್ಬರಿಗೆ ನಿಷ್ಠೂರ. ಎಲ್ರುಗೂ ಇರೋದ್ನೆ ವಸೂಸಿ ಹಂಚ್ಬುಡಿ.

**ಅಧ್ಯಕ್ಷೆ** : ಪುಟಗೋಸಿ ಅಸ್ಟು ಸೈಟ ಹಂಚಿ ಏನ್ಮಾಡೀರಿ. ಅರ್ಹತೆ ಆಧಾರದ ಮೇಲೆ ಹಂಚಾನ.

**ಸದಸ್ಯ ೧** : ಹಂಗೇ ಆಗಲಿ, ಅಧ್ಯಕ್ಸರು ಹೇಳಿದ ಮ್ಯಾಗೆ ನಾನು ಇಲ್ಲ ಅನಲಾರೆ. ಆದರೆ ಒಂದು, ನಮ್ಮ ಜವರನಿಗೆ ಒಂದು ಕೊಟ್ಬುಡಿ.

**ಅಧ್ಯಕ್ಷೆ**: ಅವನಿಗಿಂತಲೂ ಅರ್ಹರು ಅವ್ರಲ್ಲ.

**ಸದಸ್ಯ ೧** : ಇರಬೈದು, ಇರ್ತಾರೆ, ಇಲ್ಲ ಅಂದ್ನ ನಾನು. ಆದರೆ ನಂದು ಒಂದೇ ಮಾತು. ಕೊಡಬೇಕು ಅಂದ್ರೆ ಕೊಡ್ಬೇಕು ಅಸ್ಟೇಯ. ಹಂಗಿಲ್ಲಾ... ನಮ್ಮ ಕಡೆಯೋರು ಒಪ್ಪಿಲ್ಲ ಅಂತ ಬರ್ಕಳಿ.

**ಅಧ್ಯಕ್ಷೆ**: ಇದು ನ್ಯಾಯದ ಮಾತಲ್ಲ ಗೌಡ್ರೆ.

**ಸದಸ್ಯ ೧** : ಯಾವುದಮ್ಮ ನ್ಯಾಯದ ಮಾತಲ್ಲ? ನೀನೂ ನಿನ್ನ ಗಂಡನೂ ಸೇರ್ಕಂಡು ಹಣಾವ ಕೊಳ್ಳೆ ಹೊಡೀತಾ ಬಿದ್ದೀದೀರಲ್ಲ, ಅದು ಗನಂದಾರಿ ನ್ಯಾಯವೋ ? ಮೂರು ಕಾಸಿನ ಹೆಂಗ್ಸು ನನಗೇ ನ್ಯಾಯ ಹೇಳಿಕೊಡಾಕೆ ಬತ್ತಾಳೆ.

**ಅಧ್ಯಕ್ಷೆ**: ಇಂತ ಅನ್ನಾಯಕಾರದ ಮಾತಾಡಬ್ಯಾಡಿ.

**ಸದಸ್ಯ ೧** : ಅಂಗಾರೆ ನನ್ ಮಾತೇ ಸುಳ್ಳ ? ನಿಮ್ಮ ಕರಿಯನ ತಾವು ಹಕ್ಕು ಪತ್ರ ಕೊಡುಸ್ತೀನಿ ಅಂತ ನಿನ ಗಂಡ ಇನ್ನೂರ ತಗಂಡಿಲ್ವ ಹೇಳು :

**ಸದಸ್ಯ ೨** : ಪುಗಸಟ್ಟೆ ಇಂಥ ಹಲ್ಕ ಕೆಲ್ಸ ಮಾಡಿದ್ರೆ ಅವನಿಗೆ ಒದ್ದು ಬುದ್ದಿ ಹೇಳಾನ. ಅದ್ಕೆ ಈ ಯಮ್ಮ ಏನು ಮಾಡ್ತಾಳೆ ?

**ಸದಸ್ಯ ೩** : ಏನ್ಮಾಡ್ತಾಳೆ ಅಂದ್ರೆ ದುಡ್ಡು ಕೊಡ್ದೋರ್ಗೆ ಮೀಟಿಂಗಲಿ ಸೈಟಿಲ್ಲ ಅಂತಾಳೆ.

**ಸದಸ್ಯ ೧** : ಜವರ ಲಂಚ ಕೊಡಲಿಲ್ಲ ಅವನಿಗೆ ಸೈಟಿಲ್ಲ!

**ಸದಸ್ಯ ೩** : ಕರಿಯಂದಾರ ಬರಿ ಇನ್ನೂರು. ಆಸ್ರಯ ಮನೆ ಕೊಡುಸ್ತೀನಿ ಅಂತ ಸತ್ತೆ ಬೋರನ ತಾವು ಮೂರು ಸಾವಿರ ಕಿತ್ತವ್ನೆ. ಇವಳ ಕುಮ್ಮಕ್ಕಿಲ್ಲದೆ ಅವನು ಹಂಗೆ ಮಾಡಾನ ?

**ಸದಸ್ಯ ೪** : ಸಾಮಾನು ಖರೀದೀಲೂ ಹಿಂಗೇ ಗಿಬ್ರವ್ರೆ.

**ಅಧ್ಯಕ್ಷೆ** : ನಮ್ತಾಯಾಣೆ ಹೇಳ್ತೀನಿ ನಾನು ಅಂಗಡಿಗೆ ಹೋದ್ದೋಳೇ ಅಲ್ಲ.

**ಸದಸ್ಯ ೩** : ನೀನು ಯಾಕಮ್ಮ ಹೋದೀಯೆ ಮಾತಾಡಿಕೊಂಡು ನಿನ್ ಗಂಡನ್ನ ಕಳುಸ್ದೆ. ಅವನೂ ತಿಂದ ಸೆಕೆಟ್ರಿಗೂ ತಿನ್ನುಸ್ದ.

**ಅಧ್ಯಕ್ಷೆ**: ಏನ್ರೀ ಸೆಕೆಟ್ರ ? ನಿಜವೇನ್ರಿ ?

**ಕಾರ್ಯದರ್ಶಿ** : ನನಗೊಂದು ಪೈಸಾನು ಕೊಡ್ಲಿಲ್ಲ.

## ಪ್ರತಿಮೆ

ಇರಲಿ ಪ್ರತಿಮಾ  
ಕಾವ್ಯದಲ್ಲಿ;  
ಬೇಡ  
ಸಾರ್ವಜನಿಕ  
ಜೀವನದಲ್ಲಿ!

– ಸಿ. ಪಿ. ಕೆ., ಮೈಸೂರು

ಐದು ಸಾವಿರಾನೂ ಪುಗಸಟ್ಟಣ್ಣನೇ ಮಡಿಕಂಡ.

**ಅಧ್ಯಕ್ಷೆ** : ಗೇದು ತಿನ್ನೋ ಬಡ್ಡಿ ನಾನು. ಹಡಬಿ ದುಡ್ಡ ತಿಂದು ನಾನು ಯಾವ ನರಕಕ್ಕೋಗಲಿ. ಅದು ಇಲ್ಲೇ ಇಲ್ಲೋ ಇರ್ಬೇಕು, ಕರ್ಸಿ ಕೇಳ್ಬುಡಿ.

**ಎಲ್ಲರೂ** : ಕರ್ಸಿ ಮತ್ತೆ ಪುಗಸಟ್ಟೇಯ.

*(ಪುಗಸಟ್ಟೆ ಕಳ್ಳ ಬೆಕ್ಕಿನಂತೆ ಬರುವನು)*

**ಅಧ್ಯಕ್ಷೆ** : ಏಯ್ ಮೂದೇವಿ ನಮ್ಮಟ್ಟಿ ಕರಿಯನ ತಾವು ದುಡ್ಡು ಈಸ್ಕೊಂಡ ?

**ಪುಗಸಟ್ಟೆ**: ದುಡ್ಡೂ ಯಾವ ದುಡ್ಡು ಇಲ್ಲಪ್ಪ.

**ಸದಸ್ಯ ೧** : ಲೋ ಪುಗಸಟ್ಟೆ ಕರಿಯನೇ ನನ್ತಾವ ಹೇಳ್ದ.

**ಪುಗಸಟ್ಟೆ** : ಅವನೇ ಹೇಳಿದ್ನಾ.... ದೇಸಾನೇ ಕೊಳ್ಳೆ ಹೊಡೀತಾ ಅವ್ರೆ ನಾನು ಮಾಡಿದ್ದು ಬೋತೆಪ್ಪಾ.

**ಅಧ್ಯಕ್ಷೆ** : ಎಂತ ಮಾತಾಡೀಯೋ ಅನ್ನಾಯಕಾರ ಮೂದೇವಿ. ಅವರು ಮಣ್ಣ ತಿನ್ತಾರೆ ಅಂತ ನಾವೂ ತಿನ್ನಾದ. ನಿನಗೆ ಇನ್ನೂರ ಕೊಡ್ಬೇಕಾದ್ರೆ ಮನೆ ಮಂದಿಯೆಲ್ಲ ಅರೆ ಹೊಟ್ಟೇಲಿ ವಾರೆಲ್ಲ ಗೆಯ್ಬೇಕು. ನಿನಗೆ ಅದ್ರ ಗ್ಯಾನ ಇದ್ದಾತ. ನೀನು ಮಾಡಿದ್ದು ಸರಿಯಾ ಅಂತ ನಿನ್ ಒಳ ಮನಸ್ ಕೇಳ್ಕೋ... ಸತ್ತೆ ಬೋರಣ್ಣನ ತಾವು ಎಸ್ಟು ಈಸ್ಕಂಡೆ ?

**ಪುಗಸಟ್ಟೆ** : ಕುರಿ ಮಾರಿ ಜೊತೆ ಮಾಡಿದ್ದೀನಿ ಅಂದಿದ್ದ, ಬಡ್ಡಿ ಹೈದ ಕೊಡ್ನೇ ಇಲ್ಲ.

**ಸದಸ್ಯ ೪** : ಅಂಗಡಿ ಖರೀದೀಲಿ ಎಷ್ಟು ಸಿಗ್ತು ?

**ಪುಗಸಟ್ಟೆ** : ಏನೂ ಇಲ್ಲ, ಬೇಕಾರೆ ಬಿಲ್ ನೋಡಿ. ಕ್ಯಾಸ್ ಕೊಟ್ಟಿಲ್ಲ, ಚೆಕ್ ಕೊಟ್ಟಿದೆ ಹೂಂ.

**ಸದಸ್ಯ ೪** : ಅದು ನಮ್ಗೂ ಗೊತ್ತದೆ ಕನ, ಕಮೀಸನ್ ಎಸ್ಟು ಬತ್ತು ಅದ್ಹೇಳು.

**ಪುಗಸಟ್ಟೆ**: ಒಂದು ಕಾಸೂ ಇಲ್ಲ, ಎಲ್ಲ ಯವಾರಾನೂ ಸೆಕೆಟ್ರೀನೆ ಮಾಡ್ದ.

**ಕಾರ್ಯದರ್ಶಿ** : ಪುಗಸಟ್ಟಣ್ಣ ನನ್ನ ಮೇಲೆ ಇಲ್ಲುದ್ದೆಲ್ಲ ಹೇಳಬ್ಯಾಡ. ನೀನೇ ಅಲ್ವ ದುಡ್ಡು ಈಸ್ಕಂಡಿದ್ದೂ....

**ಪುಗಸಟ್ಟೆ**: ಅದ್ರಲಿ ನಿನಗರ್ಧ ಕೊಡಲಿಲ್ವ ?

**ಸದಸ್ಯ ೨** : ಅಧ್ಯಕ್ಷರಿಗೆ ಕಾಣದಂಗೆ ಇದೆಲ್ಲ ನಡ್ದದೆ. ಈಗ ಏನು ಮಾಡಬೇಕು ಅಂತ ಈ ಸಭೆ ನಿರ್ಧರಿಸಲಿ.

**ಸದಸ್ಯ ೧** : *(ವ್ಯಂಗ್ಯವಾಗಿ)* ಅಧ್ಯಕ್ಸರೇ ಹೇಳಲಿ ಬುಡಿ, ಏನು ಮಾಡಾನಾಂತವ.

**ಅಧ್ಯಕ್ಷೆ** : ಗಂಡ ಅನಿಸಿಕೊಂಡ ಈ ಪುಗಸಟ್ಟೆ ಹೇಲು ತಿಂದದೆ. ನಾನು ನ್ಯಾಯ ಹೇಳಿದರೆ ತೆಪ್ಪಾಯ್ತದೆ. ನೀವೇ ಹೇಳಿ.

**ಸದಸ್ಯ ೨** : ಅವರು ತಿಂದಿರೋ ದುಡ್ಡ ಹಿಂತಿರುಗಿಸಲಿ. ಈ ಸಲ ಕ್ಷಮಿಸಾನ. ಏನು ಪುಗಸಟ್ಟಣ್ಣಾ..?

**ಪುಗಸಟ್ಟೆ** : ಅದ್ರಲಿ ಆಗ್ಲೆ ಐನೂರು ಖರ್ಚಾಗದೆ...

**ಅಧ್ಯಕ್ಷೆ** : ಥೂ ನಿನ್ ಮಕ್ಕೆ ಬೆಂಕಿ ಹಾಕ. ಇದು ತೀರಸ್ಲಾಗ್ದಿದ್ರೆ ಗಂಡ ಅಂತ ಕಟ್ಟಿಕೊಂಡ ತೆಪ್ಪಿಗೆ ನಾನು ದುಡಿದು ತೀರುಸ್ತೀನಿ. ಮುಂದಿನ ಸಭೆ ಹೊತ್ತಿಗೆ ಕಟ್ಟಿಕೊಡ್ತೀನಿ ಕಣ್ರಪ್ಪ.

**ಸದಸ್ಯ ೨** : ಹಂಗೇ ಆಗಲಿ ಅಧ್ಯಕ್ಷರೆ, ಏನ್ರಿ ಸೆಕೆಟ್ರ ?

**ಕಾರ್ಯದರ್ಶಿ** : ನೀವೆಲ್ಲ ಹೆಂಗೇಳ್ತೀರೋ ಹಂಗೆ.

**ಪ್ರೊ|| ಎಚ್. ಎಲ್. ಕೇಶವಮೂರ್ತಿ**
೨೦೪೪, ೧೨ನೇ ಅಡ್ಡರಸ್ತೆ, ಕಲ್ಲಹಳ್ಳಿ ಬಡಾವಣೆ
ಮಂಡ್ಯ-೫೭೧ ೪೦೧

# 'ಸಿಂಹ'ದ ದರ್ಬಾರು



**ಸೂ**ರ್ಯನ ಬಿಸಿಲಿನ ತಾಪ ಗರಿಷ್ಠ ಮುಟ್ಟುವುದು ಈ ತಿಂಗಳಲ್ಲಿ. ಸಿಂಹದಂತೆ ಬಲಶಾಲಿಯಾಗಿ ಸೂರ್ಯ ಪ್ರಕಾಶಿಸುತ್ತಾನಂತೆ. ಆದರೆ ಸೂರ್ಯನ ಸ್ಥಾನ ಸಿಂಹ ರಾಶಿಯಲ್ಲಿಲ್ಲ. ಸಂಜೆ ಶುಭ್ರ ಆಕಾಶವಿದ್ದಾಗ ತಲೆ ಎತ್ತಿ ನೋಡಿದಿರಾದರೆ ನೆತ್ತಿಯ ಮೇಲೆ ಕಂಗೊಳಿಸುವುದು ಸಿಂಹರಾಶಿ. ಪ್ರಶ್ನಾರ್ಥಕ ಚಿಹ್ನೆಯಂತೆ ಕಾಣುವ ಇದರಲ್ಲಿಯ ಅತಿ ಪ್ರಕಾಶಮಾನ ನಕ್ಷತ್ರವೇ ಮಘ (ರೆಗ್ಯುಲಸ್). ಇದರಿಂದ ಪಶ್ಚಿಮಕ್ಕೆ ಮಿಥುನದ ಎರಡು ನಕ್ಷತ್ರಗಳು (ಪುನರ್ವಸು) ಕಾಣುವುವು. ಪೂರ್ವಕ್ಕೆ ಚಿತ್ತಾ, ಸ್ವಾತಿ ಇವು ಕಾಣುವುವು. ಚಿತ್ತಾದ ದಕ್ಷಿಣಕ್ಕೆ ಬಿಡಿಸಿದ ಅಂಗೈಯನ್ನು ಹೋಲುವ ಹಸ್ತಾ (ಕಾರ್ವಸ್) ಕಾಣುವುದು. ದೃಷ್ಟಿಯನ್ನು ಇನ್ನೂ ದಕ್ಷಿಣಕ್ಕೆ ಹರಿಸಿದಿರಾದರೆ ಸುಂದರ ನಕ್ಷತ್ರಪುಂಜ ದಕ್ಷಿಣ ಶಿಲುಬೆ (ಸದರ್ನ್ ಕ್ರಾಸ್, ಕ್ರಕ್ಸ್) ಕಾಣುವುದು. ಉತ್ತರದಲ್ಲಿ ಸಪ್ತರ್ಷಿ ಮಂಡಲ ಕಾಣುವುದು. ವಶಿಷ್ಠ ಅರುಂಧತಿ ಜೋಡಿಯನ್ನು ಗುರುತಿಸಲು ಪ್ರಯತ್ನಿಸಿ.




ಕಳೆದ ತಿಂಗಳವರೆಗೂ ಸಂಜೆಯ ಆಕಾಶದಲ್ಲಿ ಕಾಣುತ್ತಿದ್ದ ಶನಿಗ್ರಹ ಈಗ ಕಾಣುವುದಿಲ್ಲ. ಸೂರ್ಯನೊಂದಿಗೆ ಉದಯಿಸಿ ಕಂತುವ ಇದು ನಮ್ಮ ಪಾಲಿಗೆ 'ವಜಾ' ಆದಂತೆ. ಸಂಜೆಯಲ್ಲಿ ಕಾಣುವ ಗ್ರಹ ಗುರು ಮಾತ್ರ. ಪ್ರಕಾಶಮಾನವಾದ ಇದನ್ನು ಸಂಧ್ಯಾ ಪ್ರಕಾಶದ ಹಿನ್ನೆಲೆಯಲ್ಲೂ ಗುರುತಿಸಬಹುದು. ೫ರಂದು ಚಂದ್ರನ ಪಕ್ಕಕ್ಕೇ ಕಾಣುವುದು.

ಸುಮಾರು ೧೧ ಗಂಟೆಯ ಹೊತ್ತಿಗೆ ಉದಯಿಸುವ ಮಂಗಳ ಕುಂಭರಾಶಿಯಲ್ಲಿದೆ. ಇಲ್ಲಿ ಪ್ರಕಾಶಮಾನವಾದ ನಕ್ಷತ್ರಗಳೇನೂ ಇಲ್ಲ. ಸ್ವಲ್ಪ ಉತ್ತರಕ್ಕೆ ಶ್ರವಣ (ಆಲ್ಟೇರ್) ಕಾಣುತ್ತದೆ. ಆದ್ದರಿಂದ ಮಂಗಳ ಗ್ರಹವನ್ನು ಗುರುತಿಸುವುದು ಸುಲಭ. ಅದರ ಪ್ರಕಾಶ ದಿನೇದಿನೇ ಹೆಚ್ಚುತ್ತಿದೆ ಎಂಬುದನ್ನು ಗಮನಿಸಿ. ೧೯ರಂದು ಮಂಗಳದ ಸಮೀಪವೇ ಚಂದ್ರ ಕಾಣುವುದು.

ಬೆಳಗಿನ ಜಾವ ಕಾಣುವ ಗ್ರಹಗಳು ಬುಧ ಮತ್ತು ಶುಕ್ರ. ಕಳೆದ ತಿಂಗಳು ಸೂರ್ಯನ ಮುಂದೆ ಹಾದು ಬಂದ ಬುಧ, ೩ರಂದು ಗರಿಷ್ಠ ಎತ್ತರದಲ್ಲಿ ಕಾಣುತ್ತದೆ. ೧೯ರಂದು ರೋಹಿಣಿ ನಕ್ಷತ್ರದ ಪಕ್ಕ ಕಾಣುತ್ತದೆ. ೨೧ರಂದು ಶುಕ್ರ ಗ್ರಹಕ್ಕೆ ಕೇವಲ ಅರ್ಧ ಡಿಗ್ರಿ ಅಂತರದಲ್ಲಿ ಕಾಣುತ್ತದೆ. ಎರಡೂ ಗ್ರಹಗಳನ್ನು ಕ್ಯಾಮೆರಾದಲ್ಲಿ ಸೆರೆಹಿಡಿಯಲು ಇದು ಒಳ್ಳೆಯ ಅವಕಾಶ.

ಭೂಮಿ ತನ್ನ ಕಕ್ಷೆಯಲ್ಲಿ ಒಂದು ಮುಖ್ಯ ಘಟ್ಟವನ್ನು ಹಾಯುವ ದಿನಾಂಕ ಜೂನ್ ೨೧. ಸೂರ್ಯ ಉತ್ತರದ ಗರಿಷ್ಠ ಬಿಂದುವನ್ನು ದಾಟುವ ದಿನ ಎಂದು ಈ ದಿನವನ್ನು ಗುರುತಿಸಿ ದಕ್ಷಿಣಾಯನ ಎಂದು ಹೆಸರಿಸಲಾಗಿದೆ. ಹಗಲಿನ ಅವಧಿ ಅತಿ ದೀರ್ಘ – ಬೇಸಿಗೆಯ ಮುಕ್ತಾಯ – ಈ ಎಲ್ಲ ಅಂಶಗಳೂ ಈ ದಿನಕ್ಕೆ ಅನ್ವಯಿಸುತ್ತವೆ.

ಸಣ್ಣ ಮಕ್ಕಳಿಗೆ ಚಂದ್ರನ ವೃದ್ಧಿಕ್ಷಯಗಳನ್ನು ವಿವರಿಸುವಾಗ ಅಮಾವಾಸ್ಯೆಯ ಮುಂದಿನ ದಿನ ಅದು ತೆಳ್ಳನೆಯ ಗೆರೆಯಂತೆ ಕಾಣುತ್ತದೆ, ಎರಡನೆಯ ದಿನ ಸ್ವಲ್ಪ ದೊಡ್ಡದಾಗಿರುತ್ತದೆ, ಮೂರನೆಯ ದಿನ ಇನ್ನೂ ಸ್ವಲ್ಪ ದೊಡ್ಡದಾಗಿರುತ್ತದೆ – ಹೀಗೆ ತಿಳಿಸಿಕೊಡುತ್ತಿದ್ದೆ. ಇಲ್ಲಿ ಪ್ರತಿ ಬಾರಿಯೂ "ಅಮಾವಾಸ್ಯೆಯ" ಎಂಬ ಪದವನ್ನು ಬಳಸಲಿಲ್ಲ. ಆಗ ಮಕ್ಕಳು ಅದನ್ನು ತಿಳಿದುಕೊಂಡದ್ದೇ ಬೇರೆ ರೀತಿಯಲ್ಲಿ – ಉದಾಹರಣೆಗೆ, ಜನವರಿ ೧ರಂದು ಚಿಕ್ಕದಾಗಿ, ೨ರಂದು ಸ್ವಲ್ಪ ದೊಡ್ಡದಾಗಿ, ೩ರಂದು ಇನ್ನೂ ದೊಡ್ಡದಾಗಿ ಹೀಗೆ ಮುಂದುವರಿದು ೧೫ರಂದು ಹುಣ್ಣಿಮೆಯಾಗುವುದು ಎಂದುಕೊಂಡರು. ಅಲ್ಲದೆ ಪ್ರತಿ ತಿಂಗಳೂ (ಜನವರಿ, ಫೆಬ್ರವರಿ... ಇತ್ಯಾದಿ) ಇದೇ ರೀತಿ ನಡೆಯುತ್ತದೆ ಎಂದರ್ಥ ಮಾಡಿಕೊಂಡರು. ಹೀಗೆ ಪ್ರಥಮಾ (ಪಾಡ್ಯ) ಎಂದರೆ ಮೊದಲ ದಿನ, ದ್ವಿತೀಯಾ ಎಂದರೆ ಎರಡನೆಯದು (ಬಿದಿಗೆ) ಎಂಬುದು ಅನ್ವಯವಾಗುವುದು ಚಾಂದ್ರಮಾನ ಪದ್ಧತಿಯ ತಿಂಗಳಲ್ಲಿ ಮಾತ್ರ ಎಂದು ಅವರಿಗೆ ಬಿಡಿಸಿ ತಿಳಿಹೇಳಬೇಕಾಯಿತು. ಈ ತಿಂಗಳ ಮೊದಲವಾರ ಮಾತ್ರ ಇದಕ್ಕೆ ಅಪವಾದ. ತಾರೀಖು ಮತ್ತು ತಿಥಿಗಳು ಒಂದೇ ಆಗಿವೆ. ಆದರೆ ೧೪ನೆಯ ತಾರೀಖೇ ಹುಣ್ಣಿಮೆ ಆಗಿಬಿಡುತ್ತದೆ. ಚಾಂದ್ರಮಾಸದ ವೈಶಿಷ್ಟ್ಯ ಇದು ಎನ್ನೋಣವೇ ?

ಜೂನ್ ೨೧ರಂದು ಬೆಳಗಿನ ಜಾವ ಕಾಣುವ ನೋಟ




ಹುಣ್ಣಿಮೆಯಂದು ಚಂದ್ರನ ಪಕ್ಕ ಕಾಣುವ ಕೆಂಪು ನಕ್ಷತ್ರವೇ ಜ್ಯೇಷ್ಠಾ. ಇದು ಇರುವುದು ವೃಶ್ಚಿಕ ರಾಶಿಯಲ್ಲಿ. ವೃಶ್ಚಿಕ ರಾಶಿ ಪೂರ್ವದಲ್ಲಿ ಕಂಡಿತೆಂದರೆ ಒರೈಯನ್‌ನ ನೋಟ ಲಭ್ಯವೇ ಇಲ್ಲ ಎಂದರ್ಥ.

**ಖಗೋಳ ದಿನಚರಿ :**

- ೩ ಬುಧ ಗ್ರಹ ಗರಿಷ್ಠ ಎತ್ತರದಲ್ಲಿ (ಬೆಳಗಿನ ಜಾವ ಗುರುತಿಸುವುದು ಸುಲಭ)
- ೫ ಚಂದ್ರ ಮತ್ತು ಗುರುಗ್ರಹದ ನಡುವೆ ಕನಿಷ್ಠ ಕೋನ (ಚಂದ್ರನನ್ನು ಹುಡುಕಿ; ಅದರ ಪಕ್ಕದಲ್ಲಿ ಕಾಣುವ ಪ್ರಕಾಶಮಾನವಾದ ಚುಕ್ಕೆಯೇ ಗುರುಗ್ರಹ)
- ೭ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ಮಧ್ಯರಾತ್ರಿ)
- ೧೪ ಹುಣ್ಣಿಮೆ ೧೬ : ೪೬ಕ್ಕೆ (ಹುಣ್ಣಿಮೆ ಎಂಬುದೊಂದು ಘಟನೆ; ದಿನವಲ್ಲ)
- ೧೮ ರೋಹಿಣಿ ಮತ್ತು ಶುಕ್ರ ಗ್ರಹದ ನಡುವೆ ಕನಿಷ್ಠ ಕೋನ (ಬೆಳಗಿನ ಜಾವ ಪೂರ್ವದಿಕ್ಕಿನಲ್ಲಿ ಹೊಳೆಯುವ ಶುಕ್ರ ಗ್ರಹವನ್ನು ಗುರುತಿಸಿ; ಅದರ ಪಕ್ಕ ಕಾಣುವ ಕೆಂಪು ನಕ್ಷತ್ರವೇ ರೋಹಿಣಿ. ದಿನೇ ದಿನೇ ಶುಕ್ರ ಅದರಿಂದ ದೂರ ಸರಿಯುವುದನ್ನು ಗಮನಿಸಿ).
- ೧೯ ಮಂಗಳ ಗ್ರಹ ಮತ್ತು ಚಂದ್ರನ ನಡುವೆ ಕನಿಷ್ಠ ಕೋನ (ಚಂದ್ರನನ್ನು ಹುಡುಕಿ, ಅದರ ಪಕ್ಕ ಹೊಳೆಯುವ ಕೆಂಪು ಚುಕ್ಕೆಯೇ ಮಂಗಳ ಗ್ರಹ; ಮರುದಿನ ಚಂದ್ರ ಮುನ್ನಡೆದಿದ್ದಾಗಲೂ ಈ ಕೆಂಪು ಚುಕ್ಕೆಯನ್ನು ಗುರುತಿಸುವುದು ಸಾಧ್ಯವಾಗಲು ಇದೊಂದು ಸುಲಭ ಉಪಾಯ)
  ಬುಧಗ್ರಹ ಮತ್ತು ರೋಹಿಣಿ ನಕ್ಷತ್ರಗಳ ನಡುವೆ ಕನಿಷ್ಠ ಕೋನ (ಬೆಳಗಿನ ಜಾವದ ಪೂರ್ವದಿಕ್ಕಿನಲ್ಲಿ ಕಾಣುವ ಪ್ರಕಾಶಮಾನ ಗ್ರಹ ಶುಕ್ರ. ಅದರ ಪಕ್ಕದಲ್ಲೇ ಕಾಣುವ ಎರಡು ಚುಕ್ಕೆಗಳಲ್ಲಿ ಒಂದು ಬುಧ, ಇನ್ನೊಂದು ರೋಹಿಣಿ)
- ೨೧ ಬುಧ ಮತ್ತು ಶುಕ್ರಗಳ ನಡುವೆ ಕನಿಷ್ಠ ಕೋನ (ಬೆಳಗಿನಜಾವ ಪೂರ್ವದಲ್ಲಿ ಕಾಣುವ ಎರಡು ಪ್ರಕಾಶಮಾನ ಆಕಾಶಕಾಯಗಳಿವು – ದಿನೇ ದಿನೇ ಇವುಗಳ ಸ್ಥಾನ ಬದಲಾಗುವುದನ್ನು ಗಮನಿಸಿ)
  ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಯಲ್ಲಿ)
  ದಕ್ಷಿಣಾಯನ ಅಂದರೆ ಭೂಮಿಯಿಂದ ಕಂಡಂತೆ ಸೂರ್ಯ ಉತ್ತರದ ಗರಿಷ್ಠ ಬಿಂದುವಿನಲ್ಲಿರುವ ಘಟನೆ.
- ೨೮ ಶುಕ್ರ ಗ್ರಹ ಮತ್ತು ಚಂದ್ರನ ನಡುವೆ ಕನಿಷ್ಠ ಕೋನ (ಬೆಳಗಿನ ಜಾವ ಪೂರ್ವದಿಕ್ಕಿನಲ್ಲಿ ನೋಡಬಹುದಾದ ಘಟನೆ).
- ೩೦ ಅಮಾವಾಸ್ಯೆ - ೦೦:೦೯ಕ್ಕೆ

ಬಿ. ಎಸ್. ಶೈಲಜಾ
ಜವಹರಲಾಲ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

# ಕಥೆ ಹೇಳುವ ಕಲಾವಿದ



'**ಕು**ಹು ಕುಹು ಕೋಗಿಲಣ್ಣ!'
'ಕೊಳಲನು ಊದಿದ ಸಂತೋಷಿ!'
'ಇಂದ್ರಗೋಪ ನೀಡಿದ ದೀಪ!'
'ಕಿಟ್ಟಿ ಬಿಟ್ಟ ಆಕಾಶ ಬುಟ್ಟಿ!'

ನಿಮ್ಮ ಊಹೆ ಸರಿ. ಈ ಮುದ್ದು ಮಾತುಗಳು ಮಕ್ಕಳ ಕತೆಗಳು. ಮಾಧುರ್ಯದ ಜತೆ ಮುಗ್ಧತೆಯನ್ನೂ ಮೆತ್ತಿಕೊಂಡ ಹೆಸರಿನಿಂದಲೇ ಹಿಗ್ಗಾಯಿತಲ್ಲ ? ಇನ್ನೂ ಇದೆ ಕೇಳಿ. 'ಅಕ್ಕರೆ ತುಂಬಿದ ತಾಯಮ್ಮ', 'ಮುಕುಂದ ಕಂಡ ಕನಸು', 'ಬೆಟ್ಟದ ಅಜ್ಜನ ಉಕ್ಕಿನ ಹಂಸ', 'ಬೆಳೆಯಿತು ಮೂಗು ನೋಡಣ್ಣ', 'ನಡೀ ಕುಂಬಳವೇ ಟರ್‍ರ್ರಾ ಪುರ್‍ರ್ರಾ', 'ಪೀಪಣ್ಣನ ಕಡಲಯಾತ್ರೆ', 'ಗೂಗೂ ಗೊಗ್ಗಯ್ಯ', 'ಕಾಳಜ್ಜಿಯ ಭೂತರಾಯ' ಮತ್ತು ಇನ್ನೂ ಅನೇಕ! ಮಕ್ಕಳ ಮನಸ್ಸಿನಷ್ಟೇ ಶುದ್ಧ ಶೀರ್ಷಿಕೆ ಹೊತ್ತ ಈ ಸೊಗಸಾದ ಪುಟ್ಟಕತೆಗಳ ಒಂದಿಷ್ಟು ಸ್ವಾದಿಷ್ಟ ಸ್ಯಾಂಪಲ್ :

''ಮುಂದೆ ಮುಕುಂದನಿಗೆ ಕಂಡದ್ದು ದೊಡ್ಡ ಸಮುದ್ರ. ನೀಲಿ ಬಣ್ಣ ಬಿಸಿಲಲ್ಲಿ ಥಳಥಳಿಸುತ್ತಿತ್ತು. ಆನೆಯಷ್ಟು ಎತ್ತರದ ಅಲೆಗಳು ಅಲ್ಲಿ ಏಳುತ್ತ ಬೀಳುತ್ತ ಇದ್ದವು. ಅವುಗಳ ತಲೆಯ ಮೇಲೆ ಬಿಳಿನೊರೆಯ ಕಿರೀಟಗಳು... ಮೇಲೆ ಕೀ ಎಂದು ಕೂಗುತ್ತಾ ಕಡಲಿನ ಕೊಕ್ಕರೆಗಳು, ಮೀನು ಮುಳುಗುಗಳು, ಹಕ್ಕಿ ಹಾರುಗಳು...''

''ಅಲ್ಲಿ ಒಬ್ಬ ಮುದುಕ ದಟ್ಟಿ ಪಂಚೆ ಉಟ್ಟು ಮೈಬಿಟ್ಟುಕೊಂಡು ಆನಂದವಾಗಿ ಕೂತಿದ್ದ. ಅವನ ತಲೆಗೂದಲು ಗಾಳಿಗೆ ಹಾರುತ್ತ ಅವನ ತಲೆಯ ಸುತ್ತ ಮೋಡದಿಂದ ಆಡುತ್ತಿತ್ತು. ಅವನ ದೊಡ್ಡ ಗಡ್ಡ ಮಂಡಿಯ ತನಕ ಬಂದಿತ್ತು. ಅವೆರಡೂ ಬೆಳಗಿನ ಜಾವದ ಹೊಸ ಮಂಜಿನಂತೆ ಬೆಳ್ಳಗೆ ಹೊಳೆಯುತ್ತಿತ್ತು.''

''ಮನಸ್ಸಿಗೆ ಬೇಜಾರಾಗಿ ಕೂತಿದ್ದಾಗ ಮೇಲಿನ ಬೆಟ್ಟಗಳಿಂದ ಒಂದು ವಿಧವಾದ ಸಂಗೀತ ಕೇಳಿ ಬಂತು. ನೂರಾರು ಜನ ಕುರುಬ ಹುಡುಗರು ತಮ್ಮ ಬಿದಿರ ಕೊಳಲುಗಳಿಂದ 'ಕುಳುಕುಳುಕುಳೂ' ಎಂದು ರಾಗ ನುಡಿಸುತ್ತಿರುವಂತೆ ಕೇಳಿತು. ಅಂಥ ಸಂಗೀತವನ್ನು ಅವರು ಕೇಳಿರಲೇ ಇಲ್ಲ. ಕೇಳುತ್ತ ಕೇಳುತ್ತ ಕಾಲಿನ ಯಾತನೆ ಮಾಯವಾಯಿತು. ಮನಸ್ಸಿನ ದುಗುಡ ಓಡಿತು.''

''ಆ ಸಂಗೀತ ಗಾಳಿಯಲ್ಲಿ ತೇಲಾಡಿತು. ಬೆಟ್ಟಗಳಲ್ಲಿ ಮಾರ್ದನಿಗುಟ್ಟಿತು. ಗಿಡಗಳಲ್ಲಿ ಸರೋವರಗಳಲ್ಲಿ ಪಿಸುಮಾತನಾಡಿತು. ಜನರು ಮಾಡುತ್ತಿದ್ದ ಕೆಲಸ ನಿಲ್ಲಿಸಿ ನಸುನಕ್ಕರು. ಮಕ್ಕಳು ಹಿಗ್ಗಿನಿಂದ ಕುಣಿಕುಣಿದಾಡಿದವು.''

''ಹುಲಿ ಆಕೆಯನ್ನೇ ನೋಡುತ್ತಾ 'ನನ್ನ ಪಿಳ್ಳೆಗಳನ್ನು ಮಾತ್ರ ಮರೆಯಬೇಡ ಅಜ್ಜೀ' ಎಂದಿತು. ಗುರುಗುಟ್ಟಿದರೂ ಅದರ ಇಂದ್ರನೀಲದಂತಹ ಕಣ್ಣುಗಳಲ್ಲಿ ನೀರಿತ್ತು.''

ಹೀಗೆ ತಾನೇ ಮಕ್ಕಳಿಗೆ ಕತೆ ಹೇಳಬೇಕಾದ್ದು? ಅವರ ಮುಗ್ಧ ಮನಸ್ಸುಗಳ ಮುಂದೆ ಸುಂದರ ಮಾಯಾಲೋಕವೊಂದನ್ನು ಬೀಸಾಗಿ ಹರಡಿ ಅವರ ಹನಿಗನಸುಗಳು, ಮುಗ್ಧಜಂಭಗಳು, ಪುಟ್ಟ ಕೌತುಕಗಳು ಅಲ್ಲಿ ನಿರ್ಮಲವಾಗಿ ಅರಳುವಂತೆ ಮಾಡಬೇಕಾದ್ದು?

ಇಂಥ ಸಹೃದಯರೊಬ್ಬರು ಹಿಂದೆ ನಮ್ಮ ಮೈಸೂರಿನಲ್ಲಿ ಇದ್ದರು. ತಮ್ಮ ತುಂಬು ಕುಟುಂಬದ ಚಿಣ್ಣರುಗಳನ್ನೆಲ್ಲ ಪ್ರತಿ ರಾತ್ರಿ ಸುತ್ತ ಕಲೆ ಹಾಕಿಕೊಂಡು ಕತೆ ಹೇಳಿ ಕುಣಿಸುತ್ತಿದ್ದರು. ಹೇಳಿದ್ದನ್ನು ಅಷ್ಟೇ ಮಾರ್ದವವಾಗಿ ಬರವಣಿಗೆಯಲ್ಲೂ ಪಡಿಮೂಡಿಸಿ ಮಕ್ಕಳ ಮನಗೆದ್ದರು.

ಬಾಲ್ಯದಲ್ಲಿ ಓದಿದ ಬಣ್ಣದ ಕತೆಗಳು ಎಂದಿಗೂ ಮರವೆಯಾಗುವುದಿಲ್ಲ. ಈಗಲೂ ನಿಮ್ಮಲ್ಲಿ ಅನೇಕರಿಗೆ ಅಂಗಳದ ನೆರಳಲ್ಲಿ ಕೂತು ಓದಿದ 'ಕುಹುಕುಹು ಕೋಗಿಲಣ್ಣ', 'ಬೆಳೆಯಿತು ಮೂಗು ನೋಡಣ್ಣ', 'ನಡೀ ಕುಂಬಳವೇ ಟರ್‍ರ್ರಾಪುರ್‍ರ್ರಾ' ಕತೆಗಳು ಚೆನ್ನಾಗಿ ನೆನಪಿವೆ. ಆಗ ಅನುಭವಿಸಿದ ನವಿರು, ಬೆರಗು, ಕನಸು ಈಗ ಅನುಭವಿಸಿದಂತಿದೆ. ಆ ದಪ್ಪ ನೆನಪುಗಳ ಪ್ರಭಾವದಿಂದ ಕತೆಗಳ ಕರ್ತೃವೂ ಆತ್ಮೀಯವಾಗಿ ನಿಮ್ಮ ಕಣ್ಮುಂದೆ ಸುಳಿಯುತ್ತಿದ್ದಾರೆ. ಅದೇ ಹಳೇ ಮೈಸೂರು ಶೈಲಿಯ ಮಲ್ಲಿಗೆ ನಗು, ಸೌಮ್ಯ ಮುಖಭಾವ, ತೆಳ್ಳನೆ ದೇಹ, ಪುಟ್ಟ ಬೊಟ್ಟಿಟ್ಟ ಹಣೆ. ಅವರೇ ಅವರೇ ಸಜ್ಜನ ಸಾಹಿತಿ ಎಂ. ಎಸ್. ರಾಮರಾಯರು. ಗಂಧದಂತೆ ಬದುಕು ತೇದು ನಿಶ್ಶಬ್ದ ಪರಿಮಳವನ್ನು ಬೀರಿ ಕಣ್ಮರೆಯಾದ ಒಬ್ಬ ಸರಳಜೀವಿ.

ಕಥೆ ಹೇಳಲು ಸಾಧ್ಯವಾಗುವುದು ಯಾವಾಗ? ಕತೆ ಕೇಳಿದ್ದರೆ ಮಾತ್ರ. ತುಂಬಿಕೊಂಡದ್ದನ್ನು ತಾನೇ ಹಂಚಲಾಗುವುದು ? ಈ ಸಾಮಗ್ರಿ ಹಾಗೆಲ್ಲ ಬಿರ್‍ರನೆ ಹಾರಿ ಬಂದು ಎದೆಗೂಡಲ್ಲಿ ಮನೆ ಮಾಡಿಬಿಡುವುದಿಲ್ಲ. ಅದಕ್ಕೆ ಸಂಗ್ರಹಣೆ ಬೇಕು. ಅದೇ ವ್ಯವಸಾಯ. ರಾಮರಾಯರ ಕಥನ ಕೌಶಲ ಅವರ ಓದುವ ದಾಹದಿಂದ ಬಂದದ್ದು. ತಂದೆ ಸುಬ್ಬರಾವ್ ಅರಮನೆ ಕಲಾವಿದರು. ಅವರ ಮನೆ ಒಂದು ಛತ್ರ. ಸಮಾರಾಧನೆ - ಸಂತರ್ಪಣೆಗಳು ಧಾರಾಳ. ಆದರೆ ಪುಟ್ಟ ಹುಡುಗ ರಾಮುಗೆ ಮನೆಯ ಒಬ್ಬಟ್ಟು-ಕಜ್ಜಾಯಗಳು ಸಾಕಾಗಲಿಲ್ಲ, ಕತೆಗಳ ಬಾಯಾರಿಕೆ ಆತನಿಗೆ ! ಅಟ್ಟದ ಮೇಲೆ ಟ್ರಂಕುಗಳಲ್ಲಿ ತುಂಬಿಸಿಟ್ಟಿದ್ದ ಪುಸ್ತಕರಾಶಿ ಆತನಿಗೆ ಸಾಲಲಿಲ್ಲ. ಸ್ನೇಹಿತರ ಮನೆಗಳಲ್ಲಿ, ಲೈಬ್ರರಿಗಳಲ್ಲಿ ಈ ದಾಹ ತಣಿಸಿಕೊಳ್ಳುವುದರ ಜತೆಗೆ ತಂದೆ ಆಗಾಗ ದೋಸೆಗೆಂದು ಕೊಡುತ್ತಿದ್ದ ದುಡ್ಡುಳಿಸಿ ಪುಸ್ತಕ ಖರೀದಿಸುತ್ತಿದ್ದ. ಈ ಓದುಗಾರಿಕೆ ಮುಂದೆ ಆತನಲ್ಲೊಬ್ಬ ಕತೆಗಾರನನ್ನು ಸೃಷ್ಟಿಸಿತು.

ರಾಯರ ಮೊದಲ ಪ್ರೀತಿ ಮಕ್ಕಳ ಸಾಹಿತ್ಯ. ಮಕ್ಕಳ ಪುಟ್ಟ ಹೃದಯಗಳು ಏನು ಕೇಳುತ್ತವೆಂದು ಅವರಿಗೆ ಗೊತ್ತಿತ್ತು. ಚಿಣ್ಣರ ಅದಮ್ಯ ಕುತೂಹಲಗಳ ಬಗ್ಗೆ ಅವರಿಗೆ ಶ್ರದ್ಧೆ. ಅವರಿಗಾಗಿ ರುಚಿರುಚಿಯಾದ ಕತೆಗಳನ್ನು ಕಟ್ಟಿದರು. ಹೊಸ ಚಿತ್ತಾರಗಳ ನವ ನಕ್ಷತ್ರಲೋಕಗಳನ್ನು ಅವರಿಗಾಗಿ ಬಿಡಿಸಿಟ್ಟರು. ಇವು ಕೇವಲ ಕಟ್ಟುಕತೆಗಳಾಗಿರಲಿಲ್ಲ. ವಿಜ್ಞಾನ, ನೀತಿ, ಜೀವನಪ್ರೀತಿ, ನಿಸರ್ಗ ಬಣ್ಣನೆ ಎಲ್ಲ ಹದವಾಗಿ ಬೆರೆತ ಸುಂದರ ಬಂಧಗಳು. ತಾವು ರಚಿಸುವ ಮಕ್ಕಳ ಸಾಹಿತ್ಯ ಮೂಲತಃ ಹ್ಯಾನ್ಸ್ ಕ್ರಿಶ್ಚಿಯನ್ ಆ್ಯಂಡರ್‌ಸನ್ನನ ಮಕ್ಕಳ ಕತೆಗಳಿಂದ ಪ್ರೇರಿತ ಎಂದು ರಾಯರು ಹೇಳುತ್ತಿದ್ದರೂ, ಎಲ್ಲೋ ಓದಿದ ಯಾರಿಂದಲೋ ಕೇಳಿದ ಸಣ್ಣಪುಟ್ಟ ವಿಷಯಗಳು, ಜಾನಪದ ತುಣುಕುಗಳು ಇವರ ಕೈಯಲ್ಲಿ ರಸವತ್ತಾದ ಕುಸುರಿಕಾಳುಗಳಾದವು. ಇಂದಿಗೂ ಮಕ್ಕಳು, ಮಕ್ಕಳಂತಹ ದೊಡ್ಡವರು ಸವಿದು ಚಪ್ಪರಿಸುವ ಚಾಕೊಲೇಟ್‌ಗಳಾದವು.

ರಾಮರಾಯರು ಮುವ್ವತ್ತಕ್ಕೂ ಹೆಚ್ಚು ಮಕ್ಕಳ ಪುಸ್ತಕಗಳನ್ನು ಬರೆದಿದ್ದಾರೆ. ಅವರ ಕತೆಗಳ ವಿಶಿಷ್ಟತೆ ವಿಶೇಷತೆ ಅಂದರೆ ಭಾಷೆಯ ಆತ್ಮೀಯತೆ. ಹಿರಿಯನೊಬ್ಬ ಮಗುವಿನ ತಲೆ ನೇವರಿಸುತ್ತ, ಸ್ವತಃ ತಾನೇ ರಮ್ಯಭಾವಗಳಲ್ಲಿ ಕಳೆದುಹೋಗುತ್ತ ಲೋಕಸ್ವಾರಸ್ಯಗಳನ್ನು ಕತೆಕಟ್ಟಿ ಹೇಳಿದಂತಿದೆ. ಇಲ್ಲಿ ಬೆರಗಿದೆ, ಬೆಡಗಿದೆ ಕತೆಗಾರನ ಸ್ವಂತ ಸಂತೋಷವಿದೆ. ಹೊಳೆಯುವ ಮನಸ್ಸುಗಳಿವೆ. ಒಳಹೊಕ್ಕಂತೆ ಹಿಗ್ಗು ಹೊಸ ಹೊಸದಾಗಿ ಪ್ರವಹಿಸುತ್ತದೆ.

ಮಕ್ಕಳ ಕತೆಗಳಲ್ಲದೆ ರಾಯರು ಅನೇಕ ರೇಡಿಯೋ

ಭಾರತೀ ಕಾಸರಗೋಡು

ನಾಟಕಗಳನ್ನು ರಚಿಸಿ ಪ್ರಸಾರ ಮಾಡಿದ್ದಾರೆ. ಲೇಖನಗಳನ್ನು ಬರೆದಿದ್ದಾರೆ. ರಾಬರ್ಟ್ ಲೂಯಿ ಸ್ಟೀವನ್ಸನ್ನ 'ಟ್ರೆಶರ್ ಐಲೆಂಡ್' ಕಾದಂಬರಿಯನ್ನು ಸಮರ್ಥವಾಗಿ ಕನ್ನಡಕ್ಕೆ ತಂದಿದ್ದಾರೆ. ಏನೇ ಇದ್ದರು, ನಮ್ಮ ನಡುವೆ ಅವರ ವಿಶಿಷ್ಟ ಸ್ಥಾನ ಕತೆಗಾರನಾಗಿಯೇ!

ಈ ಕತೆಗಾರನೊಳಗೆ ಒಬ್ಬ ಕಲಾವಿದನೂ ಇದ್ದ. ಆದ್ದರಿಂದಲೇ ಅವರ ಕತೆಗಳು ಅಷ್ಟೊಂದು ಬಣ್ಣ ತುಂಬಿಕೊಂಡದ್ದು. ರಾಯರು ಅದ್ಭುತವಾಗಿ ಚಿತ್ರ ಬಿಡಿಸುತ್ತಿದ್ದರು. ತಮ್ಮ ಪುಸ್ತಕಗಳ ಮೇಲಿನ ಚಿತ್ರ ಬರೆದವರು ಅವರೇ. ಆಯಿಲ್ ಪೇಂಟಿಂಗ್ಸ್ ಕೂಡ ಮಾಡುತ್ತಿದ್ದರು. ಮನೆಯಲ್ಲೇ ಮುದ್ದಾದ ಗ್ರೀಟಿಂಗ್ಸ್ ಕಾರ್ಡುಗಳನ್ನು ತಯಾರಿಸಿ ಆಪ್ತರಿಗೆ ರವಾನಿಸುತ್ತಿದ್ದರು. ಮನೆ ಮಕ್ಕಳು ಆಡಿಕೊಳ್ಳುತ್ತಿದ್ದುದು ಈ ಕಲಾವಿದ ತಯಾರಿಸಿಕೊಟ್ಟ ಮಣ್ಣಿನ ಗೊಂಬೆ - ಬಟ್ಟೆ ಗೊಂಬೆಗಳೊಡನೆಯೇ! ರಜಾದಿನಗಳ ರಾತ್ರಿಯಲ್ಲಿ ಮಕ್ಕಳನ್ನೆಲ್ಲ ಮಹಡಿ ಮೇಲೆ ಕಲೆ ಹಾಕಿ ಕೈಬೆರಳುಗಳಿಂದ ಗೋಡೆ ಮೇಲೆ ನೆರಳು ಚಿತ್ರ ಬಿಡಿಸಿ ಮನರಂಜಿಸುತ್ತಿದ್ದರು. ಅವರ ಕಲಾವಂತಿಕೆಯ ಪರಿಧಿಗಳಿಗೆ, ವೈವಿಧ್ಯಗಳಿಗೆ ಹೋಲಿಕೆ ಕಷ್ಟ. ಅವರ ಹಿರಿಮಗಳ ಮದುವೆಯಲ್ಲಿ ಹಸೆಯ ಸುತ್ತ ಮುದ್ದಾಗಿ ಜೋಡಿಸಿದ್ದುದು ಅವರೇ ಕಟ್ಟಿದ್ದ ಬಣ್ಣಬಣ್ಣದ ಪ್ರಾಣಿ-ಪಕ್ಷಿ-ಹೂವುಗಳ ರೂಪದ ಅರಿಶಿನ ಪೊಟ್ಟಣ - ಕೊಬರಿ ಸಕ್ಕರೆ ಪೊಟ್ಟಣಗಳು!

ರಾಮರಾಯರ ಧರ್ಮಪತ್ನಿ ಶ್ರೀಮತಿ ಲಲಿತಾಂಬ ರಾಯರ ವ್ಯಕ್ತಿತ್ವದ್ದೇ ಪಡಿಯಚ್ಚು. ಗಂಡ - ಹೆಂಡತಿಯರದು ಸಮಾನ ಅಭಿರುಚಿ, ಸಮಾನ ಜೀವನ ಪ್ರೀತಿ. ಮದುವೆಯಲ್ಲಿ ಮುಗ್ಧ ವಧುವಿಗೆ ಮದುಮಗನದೇ ಮೊದಲ ಉಡುಗೊರೆ. ಅದರಲ್ಲೇನು ಹೆಚ್ಚುಗಾರಿಕೆ ಅನ್ನಬೇಡಿ. ರಾಯರು ಕೊಟ್ಟ ಉಡುಗೊರೆ ವಿಶಿಷ್ಟವಾದದ್ದು. ತಮ್ಮ ಕೂಡಿಟ್ಟ ಆಪ್ತತೆಯನ್ನು ನಿರ್ವ್ಯಾಜ ಅಂತಃಕರಣವನ್ನು ಚಾಮುಂಡಿ ಬೆಟ್ಟದ ರೂಪದಲ್ಲಿ ಅದರ ಗೆರೆಗೆರೆಗಳಲ್ಲಿ ಸೂಕ್ಷ್ಮ ಏರಿಳಿತಗಳಲ್ಲಿ ನವಿರಾಗಿ ಚಿತ್ರಿಸಿ ತನ್ನೊಂದಿಗೆ ಅದನ್ನೂ ಶುಭ ಮುಹೂರ್ತದಲ್ಲಿ ಮಡದಿಗೆ ಕೊಟ್ಟುಕೊಂಡರು.

ರಾಯರ ಕಲಾವಿದ ವ್ಯಕ್ತಿತ್ವದ ಇನ್ನೊಂದು ಮುಖ್ಯ ಮುಖ ಸಂಗೀತ. ಅವರ ವೀಣೆಯ ವ್ಯಾಮೋಹ ಹುಟ್ಟಿಗಂಟಿದ್ದು. ಮನೆಯಲ್ಲಿದ್ದ ವೀಣೆಯಲ್ಲಿ ಪ್ರಯೋಗಗಳನ್ನು ನಡೆಸಿ ಪುಟ್ಟ ಪುಟ್ಟ ಪುಳಕಗಳನ್ನು ಅಲ್ಲಿಂದಲೇ ಪಡೆದೂ ಇದ್ದರು. ಆದರೂ ಗುರುಮುಖೇನ ಅದು ಹಸನಾಗಬೇಕೆಂದು ಅವರೇ ತೀರ್ಮಾನಿಸಿದ ಮೇಲೆ ವಿದ್ವಾನ್ ವೆಂಕಟಗಿರಿಯಪ್ಪನವರನ್ನು (ವೀಣೆ ಶೇಷಣ್ಣನವರ ಶಿಷ್ಯ) ಕಂಡು ಹಂಬಲ ಹೇಳಿಕೊಂಡರು. ಅವರು ಅಕ್ಕರೆಯಿಂದ ಕರೆದು ಕೂರಿಸಿ ''ಏನಾದ್ರೂ ಸ್ವಲ್ಪ ನುಡಿಸು ನೋಡೋಣ'' ಅಂದರು. ಅಳುಕುತ್ತಲೇ ಒಂದು ಕೀರ್ತನೆ ನುಡಿಸಿದರು. ತಲೆದೂಗಿದ ಹಿರಿಯರು ''ಚೆನ್ನಾಗೇ ನುಡಿಸ್ತೀಯಲ್ಲೋ ಮಗೂ... ಸರಿ ಈಗೇನಂತೆ ನಿಂಗೆ ಅಷ್ಟೊಂದು ಆಸೆ ಇದ್ರೆ ನೀನೂ ಬಾ ನಮ್ಮನೇಗೆ ಪಾಠಕ್ಕೆ'' ಅನುಗ್ರಹಿಸಿದರು. ಸ್ವರ್ಗ ಮೂರೇ ಗೇಣು ಹುಡುಗನಿಗೆ! ಹಿಗ್ಗಿನಿಂದ ಗುರುಕುಲ ಸೇರಿಕೊಂಡ. ಆದರೆ ಯಾವ ದುರದೃಷ್ಟವೋ ಕಾಯಿಲೆಯ ದೆಸೆಯಿಂದ ತಪ್ಪಿಹೋದ ಪಾಠ ಮತ್ತೆ ಮುಂದುವರಿಯಲಿಲ್ಲ.

ಕಾಲ ಸರಿದರೂ ಹೃದಯದ ಒಂದು ಮೂಲೆಯಲ್ಲಿ ಸಣ್ಣದಾಗಿ ಈ ಅಗ್ನಿ ಉರಿಯುತ್ತಲೇ ಇತ್ತು. ಅದು ಉಜ್ವಲವಾಗಿ ಹೊರಬಂದದ್ದು ಅವರ ಐವತ್ತನೇ ವಯಸ್ಸಿನಲ್ಲಿ! ಇಲ್ಲಿ ಇನ್ನೊಂದು ಸ್ವಾರಸ್ಯ. ಈ ಸಾರಿ ಅವರು ನುಡಿಸಿಕೊಳ್ಳತೊಡಗಿದ್ದು ಅವರೇ ಸ್ವತಃ ತಯಾರಿಸಿಕೊಂಡ ಸ್ವಂತ ವೀಣೆಯಲ್ಲಿ! ತಾವು ಕೇಳಿ ಆನಂದಿಸಿದ್ದ ಕೃತಿಗಳಲ್ಲದೆ ರಾಗಾಲಾಪನೆ, ತಾನ, ಪಲ್ಲವಿಗಳನ್ನೂ ಅಚ್ಚುಕಟ್ಟಾಗಿ ನುಡಿಸಿಕೊಳ್ಳುತ್ತಿದ್ದರು. ಕಿರಿಯ ವಿದ್ಯಾರ್ಥಿಗಳೂ ನಾಚಿಕೊಳ್ಳುವಂಥ ಕಠಿಣ ಸಾಧನೆ! ಹೀಗವರು ರೂಢಿಸಿಕೊಂಡ ವಿದ್ಯೆಯ ಗುರಿ ಮಾತ್ರ ನಿಸ್ಸೀಮ ಆತ್ಮಾನಂದ! ಈ ಬೆಳಕು ಬೀದಿಗಳನ್ನು ಬೆಳಗಲಿಲ್ಲ, ಸಭೆಗಳಲ್ಲಿ ಮಿನುಗಲಿಲ್ಲ. ರಾಯರ ಅಂತರಂಗವನ್ನು, ಅವರಿಗೆ ಪ್ರಿಯರಾದವರ ಮನಸ್ಸುಗಳನ್ನು ಮಾತ್ರ ಬೆಳಗಿದ ಪುಟ್ಟ ಮನೆದೀಪ.

ತ್ಯಾಗರಾಜರ ಶ್ರೀರಂಜನಿ ರಾಗದ 'ಸೊಗಸುಗಾ ಮೃದಂಗ ತಾಳಮು' ಕೀರ್ತನೆಯನ್ನು ಕಲಿತುಕೊಳ್ಳಬೇಕೆಂಬುದು ರಾಯರ ಬಹುದಿನಗಳ ಆಸೆ. ಅದೇಕೋ ಅವರ ಈ ಆಸೆ ಈಡೇರಿರಲೇ ಇಲ್ಲ. ಅವರ ಕೊನೆಯ ದಿನಗಳಲ್ಲಿ ನಾವವರನ್ನು ಕಾಣಲು ಹೋದಾಗ, ಹತ್ತಿರ ಕರೆದು ದುರ್ಬಲವಾಗಿ ನಗುತ್ತ ''ಸೊಗಸುಗಾ... ಸೊಗಸುಗಾ...'' ವೀಣೆ ನುಡಿಸುವಂತೆ ಸನ್ನೆ ಮಾಡುತ್ತ ಪಿಸುಗುಡುತ್ತಲೇ ಇದ್ದರು. ಕಣ್ಣಂಚು ಅವರ ಪಾಡಿಗೆ ನಿರಾಶೆಯ ಕಂಬನಿ ಒಸರುತ್ತ ದಿಂಬು ತೋಯುತಿತ್ತು.

ರಾಯರ ಕಲಾವಿದ ವ್ಯಕ್ತಿತ್ವದಲ್ಲಿ ಕತೆ, ಹಾಡು, ಚಿತ್ರ ಎಲ್ಲವೂ ಇತ್ತು. ಆದರೆ ಅವೆಲ್ಲಕ್ಕಿಂತ ಮೊದಲು ಅವರು ಮೃದು ಮನಸ್ಸಿನ ಮಧುರ ಮಾತುಗಳ ಒಬ್ಬ ಹೃದಯವಂತ. ಮುಗ್ಧತೆ ಅವರ ಮೂಲ ಸ್ವಭಾವ. ತನ್ನ ಅಂತರಂಗದ ಪ್ರತಿಬಿಂಬವನ್ನು ಮುದ್ದು ಮಕ್ಕಳಲ್ಲಿ ಕಂಡು ಸಂತೋಷಿಸುತ್ತಿದ್ದವರು ಅವರು. ಪ್ರತಿಸಂಜೆ ಕೆಲಸ ಮುಗಿಸಿ ಮನೆಗೆ ಬರುವಾಗ ಬಗಲಲ್ಲಿ ಬಣ್ಣ ಬಣದ ಪೆಪ್ಪರ್‌ಮಿಂಟಿನ ದೊಡ್ಡದೊಂದು ಪ್ಯಾಕೆಟ್ಟು: ಮಕ್ಕಳನ್ನೆಲ್ಲ ಕರೆದು ಖುದ್ದಾಗಿ ವಿತರಣೆ! ಪೆಪ್ಪರ್‌ಮಿಂಟಿನ ಕಡಕ್ ಹುಳಿ - ಸಿಹಿಯನ್ನು ಎಳೆಯರು ಗಲ್ಲ ಬಿಗಿದು ಕಣ್ಮುಚ್ಚಿ ಚಪ್ಪರಿಸಬೇಕು. ಇವರದನ್ನು ನೋಡಿ ನಗಬೇಕು. ಆ ತುಂಬು ಕುಟುಂಬದಲ್ಲಿ ಮನೆ ತುಂಬ ಮಕ್ಕಳು. ಪ್ರತಿಯೊಬ್ಬರ ಹುಟ್ಟು ಹಬ್ಬವನ್ನು ತಪ್ಪದೆ ನೆನಪಿಟ್ಟುಕೊಳ್ಳುತ್ತಿದ್ದರು. ಸಂಜೆ ಹತ್ತಿರ ಕರೆದು ಮುದ್ದು ಮಾಡಿ 'ಸರ್‌ಪ್ರೈಸ್ ಗಿಫ್ಟ್'ನ ಅಚ್ಚರಿ!

ಮನೆಯ ಹೆಣ್ಣು ಮಕ್ಕಳ ವಿಷಯದಲ್ಲಿ ಅವರಿಗೆ ತುಂಬ ಅಂತಃಕರಣ. ಅವರ ಕರ್ತವ್ಯಗಳ ಬಗ್ಗೆ ಕಾಳಜಿ ಮತ್ತು ಪ್ರೀತಿ. ರಾತ್ರಿ ಹೊತ್ತು ಅವರದೊಂದು ನಿಯಮ. ಮನೆ ಮಂದಿಯ ಊಟ ರಾತ್ರಿ ಎಂಟರ ಒಳಗೆ ಮುಗಿದುಬಿಡಬೇಕು. ಅದಕ್ಕಿಂತ ತಡ ಮಾಡುವಂತಿಲ್ಲ. ಯಾಕೆಂದರೆ ಊಟದ ನಂತರವೂ ಹೆಣ್ಣುಮಕ್ಕಳಿಗೆ ಅದೆಷ್ಟೋ ಕೆಲಸವಿರುತ್ತದೆ. ಮಲಗುವವರೆಗೂ ಮನೆಗೆಲಸವೇ. ಆದರೆ ಮನಸ್ಸಿಗಷ್ಟು ವಿಶ್ರಾಂತಿ ಯಾವಾಗ? ರಾತ್ರಿಯೂಟದ ಬಳಿಕ ಮಕ್ಕಳನ್ನು ಗುಂಪು ಕಟ್ಟಿ ದೇಶ ವಿದೇಶಗಳ ಬಣ್ಣದ ಕತೆ ಬಣ್ಣಿಸುವಾಗಲೂ ಅಷ್ಟೇ. ಹೆಂಗಳೆಯರೆಲ್ಲ ಊಟ ಮುಗಿಸಿ ಅಡಿಗೆ ಮನೆ ಕೆಲಸ ಮುಗಿಸಿ, ಬೆಕ್ಕು ಬಾರದಂತೆ ಚಿಲಕ ಭದ್ರಪಡಿಸಿ ತಮ್ಮೆದುರಿಗೆ ಬಂದು ಕೂರಬೇಕು. ನಂತರವೇ ಕತೆ!

ಕೆ. ಆರ್. ಮಿಲ್ಸ್‌ನಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದ ಮೇಲೆ ಟೌನ್‌ಹಾಲ್ ಮೇಲ್ಭಾಗದ ಲಿಟರರಿ ಯೂನಿಯನ್ನಿನಲ್ಲಿ ರಾಯರು ಕೆಲಸ ಹಚ್ಚಿಕೊಂಡರು. ಪುಸ್ತಕ ಸಾಂಗತ್ಯ ಅವರಿಗೆ ಬಹಳ ಪ್ರಿಯವಾದದ್ದು. ಅವರ ಈ ಸಂಬಳವಿಲ್ಲದ ಸರಸ್ವತೀ ಸೇವೆ ಮನೆಯವರಿಗೆ ಗೊತ್ತಿರಲಿಲ್ಲ. ಕೆಲವು ವರ್ಷಗಳ ನಂತರ ಲಿಟರರಿ ಯೂನಿಯನ್ ರಾಯರ ಸೇವೆ ಸ್ಮರಿಸಿ ಅವರಿಗೆ ಸನ್ಮಾನ ಏರ್ಪಡಿಸಿತು. ಮನೆಯವರಿಗೆ ವಿಷಯ ತಿಳಿದದ್ದು ಆಗಲೇ!

ರಾಮರಾಯರ ಸದ್ಗುಣಗಳನ್ನು ಮಕ್ಕಳು - ಶುಭಾ ಕೃಷ್ಣಮೂರ್ತಿ, ರಘುನಂದನ್, ಎಂ. ಆರ್. ಸುನಂದಾ, ರಮೇಶ - ಸಮಾನವಾಗಿ ಹಂಚಿಕೊಂಡಿದ್ದಾರೆ. ತಂದೆಯ ಸಾಹಿತ್ಯ - ಸಂಗೀತ ಸಾಧನೆಯಲ್ಲಿ ಸುನಂದಾ ವಿಶೇಷ ಪಾಲು ತೆಗೆದುಕೊಂಡಿದ್ದರೆ, ಅವರ ಮಗಳು ಮೇಘನಾ ತಾತನ ಚಿತ್ರಕಲೆಯನ್ನು ಆಧುನಿಕ ವಿನ್ಯಾಸಗಳಲ್ಲಿ ಸಫಲವಾಗಿ ಮೂಡಿಸುವಲ್ಲಿ ಯಶಸ್ವಿಯಾಗಿದ್ದಾಳೆ.

ರಾಯರು ಬಾಳಿದ ಕಾಲ ಪ್ರಶಸ್ತಿಗಳಿಂದ ವ್ಯಕ್ತಿಯ ಹೆಗ್ಗಳಿಕೆಯನ್ನು ಅಳೆಯುವ ಕಾಲವಲ್ಲ. ಅವರಂತು ''ಏನು ಸುಖಿಯೋ ತಾನು ಹುಟ್ಟನಲಿ ಕಲಿಕೆಯಲಿ'' ಅನ್ನುವಂತೆ ಬಾಳಿದವರು. ಅವರಿಗೆ ಕೆಲವು ಬಹುಮಾನಗಳೇನೋ ಬಂದಿವೆ. ಆದರೆ ಅವರೇನೂ ಅವುಗಳನ್ನು ನಿರೀಕ್ಷಿಸಿದವರಲ್ಲ. ಮೈಸೂರಿನ ವಸ್ತುಪ್ರದರ್ಶನದಲ್ಲಿ, ಮತ್ತಿತರ ಕಡೆಗಳಲ್ಲಿ ತಮ್ಮ ಕಲಾಕೃತಿಗಳಿಗೆ ಬಹುಮಾನ ಬಂದಾಗ 'ಕಿಟ್ಟಿ ಬಿಟ್ಟ ಆಕಾಶ ಬುಟ್ಟಿ' ಪುಸ್ತಕಕ್ಕೆ 'ಬೆಸ್ಟ್ ಸೈಂಟಿಫಿಕ್ ಫಿಕ್ಷನ್' ಬಹುಮಾನ ಬಂದಾಗ ಒಂದು ಪಕ್ವ ಮಂದಸ್ಮಿತ ಸೂಚಿಸಿರಬಹುದು. ಮಡದಿಯೊಡನೆ ಕೂತು ಮಿಠಾಯಿ ಮೆದ್ದಿರಬಹುದು. ಅವರಿಗೆ ಸಲ್ಲುವ ನೈಜ ಬಹುಮಾನವೆಂದರೆ ಓದುಗರ ಹೃದಯದಲ್ಲಿ ಅವರ ಕತೆಗಳ ಬಗ್ಗೆ ಮಿಡಿಯುವ ಒಂದಿಷ್ಟು ಆತ್ಮೀಯತೆ: ಕೆಎಸ್‌ನ ಅವರ ಸರಳ ಆಶಯದಂತೆ 'ನಾಳಿನ ಬದುಕಿನ ಇರುಳಿನ ತಿರುವಿಗೆ ದೀಪ'ವನಿಡುವ ಅವರ ಕತೆಯ ಮಾತಿಗೆ, ಅದರ ರೀತಿಗೆ ಸಲ್ಲಿಸುವ ಸಣ್ಣದೊಂದು ಕೃತಜ್ಞತೆ.

ಇವತ್ತು ನಮ್ಮ ಮಕ್ಕಳ ಕತೆಯೇ ಬೇರೆಯಾಗಿದೆ. ಅವರ ಪುಟ್ಟ ಮನಸ್ಸುಗಳೊಳಗೆ ಇಣುಕು ಹಾಕುವ ವ್ಯವಧಾನವೇ ಯಾರಿಗೂ ಇಲ್ಲವಲ್ಲ! ಮಕ್ಕಳ ಸಾಹಿತ್ಯ ಮುಲಾಜಿಲ್ಲದೆ ಮೂಲೆಗುಂಪಾಗುತ್ತಿದೆ. ಅವರ ಸಂತೋಷದ ಮೂಲಗಳೇ ಬೇರೇನೋ ಆಗುತ್ತಿದೆ. ಇಂತಹ ಜಟಿಲ ಕುಟಿಲ ಮಾಧ್ಯಮ ಸಂದರ್ಭದಲ್ಲಿ ರಾಮರಾಯರಂಥವರು ಮತ್ತೆ ಬರಬೇಕು. ಅಜ್ಜ ಕೊಟ್ಟ ಹುರಿಗಾಳು ಮೆಲ್ಲುತ್ತ ಅಗ್ಗಿಷ್ಟಿಕೆ ಸುತ್ತ ಬೆಚ್ಚಗೆ ಕೂತ ಪುಟ್ಟ ಮಕ್ಕಳಿಗೆ ಅವರು ಪದೇ ಪದೇ ಕಣ್ಣರಳಿಸುವಂಥ ಕತೆ ಹೇಳಬೇಕು. ಜತೆಗೆ ರಾಯರ ಎಲ್ಲ ಮನ ಮುಟ್ಟುವ ಮೋಹಕ ಕತೆಗಳು ಮತ್ತೆ ಬೆಳಕು ಕಂಡು ಮಕ್ಕಳ ಎಳೆ ಎದೆಗಳಲ್ಲಿ ಭಾವಲೋಕದ ಮುಗ್ಧ ಗೊಂದಲಗಳನ್ನು ಸಂಭ್ರಮದ ಸಿರಿಪುಳಕಗಳನ್ನು ಮರುಸೃಷ್ಟಿ ಮಾಡಬೇಕು.

ಭಾರತೀ ಕಾಸರಗೋಡು
೮೩, ೨ನೇ ಮಹಡಿ, ೫ನೇ 'ಬಿ' ಮುಖ್ಯರಸ್ತೆ, ಆರ್. ಪಿ. ಸಿ. ಲೇ ಔಟ್, ವಿಜಯನಗರ. ಬೆಂಗಳೂರು - ೪೦



**ಆಲೋಚನೆ** (ಚಿಂತನಪರ ಲೇಖನಗಳು)

ಅರ್ಜುನ ಕೋರಟಕರ

**ಪುಟ : ೧೩೨** **ಬೆಲೆ : ರೂ. ೭೫**

**ಅರ್ಜುನ ತಾ. ಕೋರಟಕರ,** ಜಮಖಂಡಿ - ೫೮೭ ೩೦೧
ಬಾಗಲಕೋಟ ಜಿಲ್ಲೆ

ಯಾವ ವಿಷಯಕ್ಕೆ ಪ್ರಾಧಾನ್ಯತೆ ಅಗತ್ಯ ಎಂಬುವರ ಅರಿವು ಸಾಕಷ್ಟು ಇರುವ ಅರ್ಜುನ ಕೋರಟಕರ ಬರೆದ ಇಲ್ಲಿನ ಲೇಖನಗಳು ಇಂದಿನ ಜರೂರು ಅಗತ್ಯಗಳತ್ತ ನಮ್ಮ ಗಮನ ಸೆಳೆಯುತ್ತವೆ. ಅತಂತ್ರ ಸ್ಥಿತಿಯ ಅಲೆಮಾರಿ ಬಡಜನತೆ, ಬಾಲಕಾರ್ಮಿಕರು, ಕೆಲವು ಕ್ರೂರ ವ್ಯವಸ್ಥೆಗಳು ಇಲ್ಲಿನ ಲೇಖನಗಳ ವಸ್ತುಗಳಾಗಿವೆ. ವರ್ತಮಾನದ ಸಮಸ್ಯೆಗಳಿಗೆ ಸ್ಪಂದಿಸುವ ಲೇಖಕರು ಸ್ವತಃ ಬಾಲಕಾರ್ಮಿಕನಾಗಿ ದುಡಿದು ತನ್ನನ್ನು ತಾನೇ ರೂಪಿಸಿಕೊಂಡವರು. ಸಾಹಿತಿ - ಸಾಹಿತ್ಯ ಕೃತಿಗಳ ಬಗ್ಗೆಯೂ ಲೇಖನಗಳಿವೆ.

**ಬರೆಯದ ದಿನಚರಿಯ ಮರೆಯದ ಪುಟಗಳು**




ಬಿ. ವಿ. ಕಕ್ಕಿಲ್ಲಾಯ

**ಪುಟ : ೪೪೮** **ಬೆಲೆ : ರೂ. ೨೦೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್,
ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ನವಕರ್ನಾಟಕ ಪ್ರಕಾಶನದ ಅಧ್ಯಕ್ಷರು, ಕಮ್ಯೂನಿಸ್ಟ್ ಚಳುವಳಿಗಳ ಮುಂಚೂಣಿಯಲ್ಲಿದ್ದು ಸಾಮಾನ್ಯ ಕಾರ್ಮಿಕ - ದುಡಿಮೆಗಾರರ ಹಿತರಕ್ಷಣೆಯತ್ತ ತಮ್ಮ ಒಲವು ತೋರಿದ ಕಾ॥ ಬಿ. ವಿ. ಕಕ್ಕಿಲ್ಲಾಯರ ಬದುಕು ಹೋರಾಟಗಳ ಚಿತ್ರಣ. ಜೀವನಚರಿತ್ರೆಯೆನಿಸಿದರೂ ಇಲ್ಲಿ ದಾಖಲಾಗಿರುವುದು ಸಂಪೂರ್ಣವಾಗಿ ಹೋರಾಟಕ್ಕೆ ಸಮರ್ಪಿಸಿಕೊಂಡ ಒಬ್ಬ ಕಮ್ಯೂನಿಸ್ಟ್ ಕಾರ್ಯಕರ್ತನ ಬದುಕಿನ ಗಾಥೆ. ತಮ್ಮ ಸಂಗಾತಿಗಳೊಂದಿಗಿನ ಒಡನಾಟವನ್ನು ನೆನಪಿಸುವ ಈ ದಿನಚರಿಯಿಂದಾಗಿ ಅವರು ನಮಗೆ ಸ್ಫೂರ್ತಿಯ ಸೆಲೆಯಾಗಿ ಕಂಡುಬರುತ್ತಾರೆ.



**ಪಂಪನ ಸರಳ ಆದಿಪುರಾಣ**

ಡಾ॥ ಎಲ್. ಬಸವರಾಜು

**ಪುಟ : ೫೨೮** **ಬೆಲೆ : ರೂ. ೩೦೦**

**ಅಭಿರುಚಿ ಪ್ರಕಾಶನ,** ನಂ. ೪, ೨ನೇ ಮಹಡಿ, ನಗರ ಕ.ರಾ.ರ.ಸಾ.ಸಂ. ಕಟ್ಟಡ, ಕೆ. ಆರ್. ಸರ್ಕಲ್, ಮೈಸೂರು-೧

ಹಳೆಗನ್ನಡದ ಕಾವ್ಯಗಳ ಎಲ್ಲ ಮಜಲುಗಳನ್ನು ಎಲ್. ಬಸವರಾಜು ಅವರಷ್ಟು ಜಾಲಾಡಿದ ಮಹನೀಯರು ತುಂಬ ವಿರಳ. ಪಂಪನ ಬಗ್ಗೆ ಅವರ ಅಧ್ಯಯನವಂತೂ ಅತ್ಯಂತ ಆಳವಾದದ್ದು. ಗ್ರಂಥ ಸಂಪಾದನ-ಸಂಶೋಧನ ಕ್ಷೇತ್ರದಲ್ಲಿ ಅವರ ಶ್ರದ್ಧೆ ಅಪಾರ. ಹಳೆಗನ್ನಡದಲ್ಲಿರುವ ಪಂಪನ ಆದಿಪುರಾಣವನ್ನು ಇಂದಿನ ಕನ್ನಡಿಗರಿಗಾಗಿ ಸಂಧಿ ವಿಂಗಡಿಸಿ ಸರಳಗೊಳಿಸಿ ಓದನ್ನು ಅರ್ಥಪೂರ್ಣವಾಗುವಂತೆ ಇಲ್ಲಿ ರೂಪಿಸಿದ್ದಾರೆ. ಪ್ರಾಚೀನ ಚಂಪೂಕಾವ್ಯವನ್ನು ಅಭ್ಯಾಸ ಮಾಡುವವರಿಗೆ ಒಂದು ಸುವರ್ಣಾವಕಾಶ.

**ಗೌರೀಶ ಕಾಯ್ಕಿಣಿ ಸಮಗ್ರ ಸಾಹಿತ್ಯ ಸಂಪುಟ ೧೦**

ಸಂ. ವಿಷ್ಣು ನಾಯ್ಕ

**ಪುಟ : ೩೮೦** **ಬೆಲೆ : ರೂ. ೨೦೦**

**ಶ್ರೀ ರಾಘವೇಂದ್ರ ಪ್ರಕಾಶನ ,** ಅಂಬಾರ ಕೊಡ್ಲ,
ಅಂಕೋಲಾ - ೫೮೧ ೩೧೪

ಹತ್ತು ವರ್ಷಗಳಿಂದ ಒಂದೊಂದಾಗಿ ಪ್ರಕಟಗೊಳ್ಳುತ್ತಿರುವ "ಗೌರೀಶ ಕಾಯ್ಕಿಣಿ ಸಮಗ್ರ ಸಾಹಿತ್ಯ" ಯೋಜನೆಯ ಸುದೀರ್ಘ ಸಾಹಸವೆಂಬಂತೆ ಹತ್ತನೆಯ ಸಂಪುಟ ಓದುಗರ ಕೈ ಸೇರುತ್ತಿದೆ. ವೈಚಾರಿಕ ಜಾಗೃತಿ - ವೈಜ್ಞಾನಿಕ ಮನೋಧರ್ಮ ಇವು ಗೌರೀಶರ ಬರಹಗಳಲ್ಲಿ ಎದ್ದುಕಾಣುವ ಅಂಶ. ಲೋಕಾಯತರ ವಿಚಾರಗಳು ನಾಸ್ತಿಕವಾದದ ಬಗ್ಗೆ ಅವರ ಸಾಹಿತ್ಯದಲ್ಲಿ ನಮಗೆ ಹೊಸ ಆಲೋಚನೆಯ ನೆಲೆಗಟ್ಟು ದೊರಕುತ್ತದೆ. ಕೆಲವು ಬಹುಮುಖ್ಯವಾದ ಅಪರೂಪದ ಲೇಖನಗಳು ಹಾಗೂ ಕೆಲವು ಅಂಕಣ ಬರಹಗಳನ್ನೂ ಈ ಸಂಪುಟ ಒಳಗೊಂಡಿದೆ.

**ಎತ್ತಪ್ಪ** (ಸಾಂಸ್ಕೃತಿಕ ವೀರನ ಕಥೆ)



ಡಾ॥ ಮೀರಾಸಾಬಿಹಳ್ಳಿ ಶಿವಣ್ಣ

**ಪುಟ : ೮೮** **ಬೆಲೆ : ರೂ. ೮೦**

**ಸಿ.ವಿ.ಜಿ. ಪಬ್ಲಿಕೇಷನ್ಸ್,** ನಂ. ೭೦, ೨ನೇ ಮುಖ್ಯರಸ್ತೆ, ವೈಯಾಲಿಕಾವಲ್, ಬೆಂಗಳೂರು - ೫೬೦ ೦೦೩

ಜಾನಪದ ಕ್ಷೇತ್ರ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ ಮೀರಾಸಾಬಿಹಳ್ಳಿ ಶಿವಣ್ಣ ಬಹಳ ಆಳವಾಗಿ ಬುಡಕಟ್ಟು ಜನಾಂಗವನ್ನು ಅಭ್ಯಾಸ ಮಾಡಿದ್ದಾರೆ. ಈ ಕೃತಿಯಲ್ಲಿ ಕಾಡುಗೊಲ್ಲರ ಸಾಂಸ್ಕೃತಿಕ ವೀರಪುರುಷ ಎತ್ತಪ್ಪನ ಕಥಾನಕವಿದೆ. ಇದನ್ನು ಹಳೆಯ ಕಾಲದ ಗೊಲ್ಲತಿಯರ ಹಾಡು, ಕೋಲಾಟದ ಪದ, ಗಣೆಯ ಪದ ಇವುಗಳ ಆಧಾರದಿಂದ ತುಂಬ ಶ್ರಮವಹಿಸಿ ಸಂಪಾದಿಸಲಾಗಿದೆ. ಪಶುಸಂಗೋಪನೆಯ ಕಾಲದಲ್ಲಿ ಕಾಡುಮೇಡು ಅಲೆಯುತ್ತ ತಮಗೊದಗಿದ ಅಪಾಯವನ್ನೆದುರಿಸುತ್ತ ಮುನ್ನಡೆದ ವೀರನೊಬ್ಬನ ಗಾಥೆ.




**ಕಥಾ ಚೈತ್ರ** (ಕಥಾ ಸಂಕಲನ)

ಕೆ. ಎನ್. ಭಗವಾನ್

**ಪುಟ : ೧೪೪** **ಬೆಲೆ : ರೂ. ೬೦**

**ಧಾತ್ರಿ ಪ್ರಕಾಶನ,** 'ಚೈತ್ರ', ೧೫೫೫, ಪೂರ್ವಾಂತ್ಯ ರಸ್ತೆ,
೯ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೬೯

ಹನ್ನೊಂದು ವಿಭಿನ್ನ ಕಥೆಗಳನ್ನು ಈ ಸಂಕಲನದಲ್ಲಿ ಸಂಗ್ರಹಿಸಲಾಗಿದೆ. ವಿವಿಧ ಜನರ ವಿವಿಧ ಮುಖಗಳನ್ನು ಕಥೆಗಳಲ್ಲಿ ಪರಿಣಾಮಕಾರಿಯಾಗಿ ತೋರಿಸಲಾಗಿದೆ. ಈಗಿನ ದೈನಂದಿನ ವ್ಯವಹಾರದಲ್ಲಿ ನಮ್ಮ ಸಂಪರ್ಕಕ್ಕೆ ಬರುವ ಜನರೆಲ್ಲರ ಒಳಮನಸ್ಸುಗಳನ್ನು ಪಾತ್ರಗಳ ಮೂಲಕ ಸೆರೆಹಿಡಿದ ಕಥೆಗಾರರ ಚಾತುರ್ಯ ಮೆಚ್ಚುವಂತಹುದು. ಯಾವ ಅತಿರೇಕದ ಕಲ್ಪನೆಯೂ ಇಲ್ಲದ ಸರಳ-ಸಾದಾ ನಿರೂಪಣೆ. ಖಂಡಿತವಾಗಿ ಒಂದಿಲ್ಲೊಂದು ಕಡೆ ನಡೆದಿರಬಹುದಾದ ಕಥೆಗಳು.........

**ಬಣ್ಣ ಬಯಲು** (ಚಿತ್ರಕಲಾ ಲೇಖನಗಳು)



ಡಿ. ಎಸ್. ಚೌಗಲೆ

**ಪುಟ : ೧೨೬** **ಬೆಲೆ : ರೂ. ೭೦**

**ಹರ್ಷ ಪ್ರಕಾಶನ,** ಮನೆ ನಂ. ೬, ೨ನೇ ಬ್ಲಾಕ್, ಕಿಮ್ಸ್ ಕ್ವಾರ್ಟರ್ಸ್, ಹುಬ್ಬಳ್ಳಿ - ೫೮೦ ೦೨೨

ಚಿತ್ರಕಲಾ ಜಗತ್ತಿನ ಉದಯೋನ್ಮುಖ ಯುವಪ್ರತಿಭೆಗಳ ಪರಿಚಯ. ಕಲಾತ್ಮಕ ಸೃಷ್ಟಿ ಸುಲಭವೂ ಅಲ್ಲ; ವರ್ಣಚಿತ್ರಗಳು ಒಂದಷ್ಟು ಬಣ್ಣಗಳೊಂದಿಗೆ ರಾಜಿಯಾಗುವಂಥವೂ ಅಲ್ಲ. ಕಲಾತ್ಮಕ ಅತಿ ಸೂಕ್ಷ್ಮ ಮನಸ್ಸು ನಿಸರ್ಗದೊಂದಿಗೆ ಮೇಳವಿಸಿ ಪ್ರತಿಫಲನಗೊಂಡಾಗ ಪ್ರತಿಭೆ ಅರಳಿ ಮೂರ್ತರೂಪ ಗೊಳ್ಳುತ್ತದೆ. ಭಾಷೆಯ ಹಂಗಿಲ್ಲದೆ ಪ್ರಪಂಚದೆಲ್ಲೆಡೆ ಮಾತನಾಡುವ ಈ ಕಲೆಯ ಬಗ್ಗೆ ಕೆಲವು ಪರಿಚಯಾತ್ಮಕ ಲೇಖನಗಳಿವೆ. ಚಿತ್ರಕಲೆಯನ್ನು ಮೆಚ್ಚಿ ಪ್ರೋತ್ಸಾಹಿಸುವ ಜನತೆಗೆ ಒಂದು ಪರಿಚಯ ನೀಡುವ ಪುಸ್ತಕ.



**ವಿಷ್ಣುಶರ್ಮನ ಪಂಚತಂತ್ರ ಕಥೆಗಳ ಕನ್ನಡ ಸಾರಸಂಗ್ರಹ**

ಸಂ. ಡಾ॥ ವೀರೇಶ ಬಡಿಗೇರ, ಎಸ್. ಆರ್. ಚನ್ನವೀರಪ್ಪ

**ಪುಟ : ೧೮೬** **ಬೆಲೆ : ರೂ. ೮೦**

**ಪ್ರಸಾರಾಂಗ,** ಕನ್ನಡ ವಿಶ್ವವಿದ್ಯಾಲಯ ಹಂಪಿ,
ವಿದ್ಯಾರಣ್ಯ- ೫೮೩ ೨೭೬

ಎಲ್ಲ ವಯೋಮಾನದವರನ್ನೂ ಆಕರ್ಷಿಸುವ ಪಂಚತಂತ್ರದ ಕಥೆಗಳ ಗುಟ್ಟೇನು ? ಇವು ಉತ್ತಮ ನೀತಿಯನ್ನು ಸ್ಥಿರಗೊಳಿಸಲು ಜನಪದರ ನಡುವೆ ಹುಟ್ಟಿಕೊಂಡ ನೀತಿಕಥೆಗಳೆಂಬುದು ನಿರ್ವಿವಾದ. ಚತುರತೆಯನ್ನು ಮೆರೆಯುವ ಇವು ಕುಯುಕ್ತಿ-ಕುತಂತ್ರಗಳನ್ನು ಮೆಚ್ಚುವುದಿಲ್ಲ. ಸತ್ಕಾರ್ಯ-ಸನ್ನಡತೆಗಿಲ್ಲಿ ಪ್ರಾಮುಖ್ಯ. ವಿಷ್ಣುಶರ್ಮನೆಂಬ ವಿದ್ವಾಂಸನು ಬುದ್ಧಿಗೇಡಿ ರಾಜಪುತ್ರರನ್ನು ದಾರಿಗೆ ತರಲು ಹೇಳಿದನೆನ್ನಲಾದ ಐದು ಅಧ್ಯಾಯಗಳಲ್ಲಿ ನಿರೂಪಿಸಲಾದ ಕಥಾ ರೂಪದ ನೀತಿಸಾರ. ಕಥೆಗಳ ಮಧ್ಯೆ ಗಮನ ಸೆಳೆಯುವ ಶ್ಲೋಕ-ಸುಭಾಷಿತಗಳಿವೆ.

— ಇಂದಿರಾ ಕುಮಾರಿ

# ಬುದ್ಧ, ಅಂಬೇಡ್ಕರ್ ತಾತ್ವಿಕ ನೆಲೆಗಳಲ್ಲಿ ಮನಜ ಕಾವ್ಯ ದರ್ಶನ

ಡಾ|| ಜಿ. ಆರ್. ತಿಪ್ಪೇಸ್ವಾಮಿ

೧೯ ಕವಿತೆಗಳನ್ನೊಳಗೊಂಡ 'ಕೇಳು ಜಗಮಾದಿಗ ಹೊಲೆಯ' ಎಂಬ ಮನಜ ಅವರ ಪ್ರಪ್ರಥಮ ಸಂಕಲನದಲ್ಲಿ ದಲಿತರ ದುಃಖ ದುಮ್ಮಾನಗಳು ಮಡುಗಟ್ಟಿ, ದಲಿತ ಕಾವ್ಯದ ಶಕ್ತಿಯನ್ನು ಧ್ವನಿಪೂರ್ಣವಾಗಿ ಸಂಕೇತಿಸಿವೆ. ಕವಿಯ ಸಂಕಲ್ಪವನ್ನು ಶಕ್ತಿವತ್ತಾದ ಪ್ರತಿಮೆಗಳಲ್ಲಿ ಮೆರೆಸಿವೆ. 'ಮೂಲ' ಎಂಬ ಅವರ ಕವಿತೆಯಲ್ಲಿ ಶಕ್ತಿವತ್ತಾದ ಪ್ರತಿಮೆಯನ್ನು ಕಡೆಯಲಾಗಿದೆ.

ಯಾವ ಮೂಲಗಳು ನಮಗೆ ಅಪಾಯಕಾರಿಯಾಗಿವೆಯೋ, ಅಪಮಾನಕಾರಿಯಾಗಿವೆಯೋ ಅಂಥವುಗಳ ಬೇರನ್ನೇ ಕಿತ್ತು ಅಲುಗಾಡಿಸಿ, ಹೊಸ ಬದುಕನ್ನು ಶೋಧಿಸುವ ಮತ್ತು ಆರಂಭಿಸುವ ಅದಮ್ಯ ಉತ್ಸಾಹವನ್ನು ಈ ಕವಿತೆ ಭಾರೀ ಸಂಭ್ರಮದಿಂದ ಪ್ರತಿಮೀಕರಿಸುತ್ತ ನಡೆಯುತ್ತದೆ. ಸರಿಕರಿಗೆ ಸರಿಗಟ್ಟುವ ಸರಿ ಸಮಾನತೆಯ ಬದುಕಿನ ಸಂಕಲ್ಪದ ಧ್ವನಿತರಂಗಗಳನ್ನೇ ಎಬ್ಬಿಸುವ, ಇಲ್ಲಿನ 'ಸರಿಕರೆದುರಿಗೆ' ಎಂಬ ಒಂದು ಸಾಮಾನ್ಯ ಜಾನಪದೀಯ ಪದ, ಸಮಾನತೆಯನ್ನು ಕುರಿತ ಒಂದು ಅಖಂಡ ಸಿದ್ಧಾಂತವನ್ನೇ ಸಾರುತ್ತ ನಡೆಯುತ್ತದೆ. ಹೀಗೆ ಈ ಕವಿತೆಯ ಅರ್ಥ ಸೌಂದರ್ಯ ಮತ್ತು ತಾತ್ವಿಕ ಸೌಂದರ್ಯದಿಂದ ಓದುಗ ಉತ್ಸಾಹಗೊಳ್ಳುತ್ತಾನೆ.

ಇನ್ನು ಮುಂದೆ ಮುಗ್ಧತೆಯಿಂದ ಬದುಕು ಸಾಗಿಸುವುದರಲ್ಲಿ ಅರ್ಥವಿಲ್ಲವೆಂದು ತೀರ್ಮಾನಿಸಿ, ಅಜ್ಞಾನದಿಂದ ಜ್ಞಾನದ ಕಡೆಗೆ ತಿರುಗಿ, ಶೋಷಿತರ ವಿರುದ್ಧ ಸಿಡಿದೇಳುವ ಪ್ರತಿಭಟನಾತ್ಮಕ ಧ್ವನಿ ಡಾ|| ಮ. ನ. ಜವರಯ್ಯ ಅವರ ಈ ಸಂಕಲನದ ಆಂತರ್ಯವೆನ್ನಬಹುದು. ಹಾಗಾಗಿ, ಇಲ್ಲಿಯ ಕಾವ್ಯ ಯಾವುದೇ ಮುಲಾಜಿಗೆ ಒಳಪಟ್ಟಿದ್ದಲ್ಲ. 'ಉರಿಗಣ್ಣನವರು', 'ಆಗಸ್ಟ್ ಹದಿನೈದು', 'ನೀವು ಕಾಣಿರಿ' ಮೊದಲಾದ ಕವಿತೆಗಳು ಇದಕ್ಕೆ ಸಾಕ್ಷಿಯಾಗಿವೆ. ದಲಿತ ಸಂಘಟನೆಯ ಆರಂಭದ ದಿನಗಳಲ್ಲಿ ಗೋಚರವಾದ ಆವೇಶ, ಕೋಪ ಇತ್ಯಾದಿ ಮಿತಿಗಳು ಈ ಮೊದಲ ಸಂಕಲನದ ಕವಿತೆಗಳಲ್ಲಿ ಗೋಚರವಾಗಿದ್ದರೂ, ಅವನ್ನು ಮೀರುವ ಮತ್ತು ಅಖಂಡ ಸಾಮಾಜಿಕ ವ್ಯವಸ್ಥೆಯ ದ್ವಂದ್ವಗಳನ್ನು ವಿಡಂಬಿಸುವ ಅರ್ಥಪೂರ್ಣ ಆಶಯಗಳು ಇಲ್ಲಿ ಮೈದುಂಬಿ ಬಂದಿವೆ.

'ಅತ್ತೆ ಸೊಸೆ ಆತ್ಮಕಥೆ' ಎರಡನೆಯ ಕವನ ಸಂಕಲನದಲ್ಲಿ (೧೯೯೮) ಮನಜ ಅವರ ಗಂಭೀರ ಕಾವ್ಯದ ಬೆಳವಣಿಗೆಯನ್ನು ಸ್ಪಷ್ಟವಾಗಿ ಕಾಣುತ್ತೇವೆ. 'ಅತ್ತೆ ಮತ್ತು ಸೊಸೆ' ಎಂಬ ಎರಡು ಸಂಬಂಧವಾಚಕಗಳಲ್ಲಿ ಇಡೀ ಸಂಕಲನವೇ ಪ್ರತಿಮೀಕರಣಗೊಂಡಿದೆ. ಅತ್ತೆ ಸೊಸೆ ಇಬ್ಬರೂ ಒಂದಾದಾಗ ಮಾತ್ರ ಬದುಕಿನಲ್ಲಿ ಹೊಂದಾಣಿಕೆ ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಅವರಿಬ್ಬರ ನಡುವಿನ ಅರ್ಥವಂತಿಕೆಗೆ ಬದಲಾಗಿ ವಿಷಮತೆ ಮತ್ತು ಸಂಘರ್ಷ ಅನಿವಾರ್ಯವಾಗಬಹುದು. ಇದು ಇಲ್ಲಿಯ ಬಹುತೇಕ ಕವಿತೆಗಳಿಗೆ ಅನ್ವಯವಾಗುವ ಮಾತು. ಸುಭದ್ರವಾದ ಸಾಲುಗಳ ಲಯಗಾರಿಕೆ, ಪ್ರತಿಮೆಯನ್ನು ಒಂದೇ ಸಮನೆ ಬೆಳೆಸಿಕೊಂಡು ಹೋಗುವ ಬಂಡಾಯದ ಅರ್ಥದ ರಭಸ, ಪರಸ್ಪರ ಮುಖಾಮುಖಿಯ ಅತ್ತೆ ಮತ್ತು ಸೊಸೆಯ ಪಾತ್ರಗಳೆರಡರ ವಸ್ತುಸ್ಥಿತಿಯ ಸ್ವೀಕರಣದಿಂದ ಹೊರಡುವ ತೌಲನಿಕ ಧ್ವನಿಗಳು ಇಲ್ಲಿ ಸ್ವಾರಸ್ಯಕರ. ಶತಮಾನಗಳಿಂದ ಅತಿಕ್ರಮಿಸುತ್ತ ಬಂದಿರುವ ಹಳೆಯ ಪಾರ್ಥೇನಿಯಂ ಕಳೆಯನ್ನು ಕಿತ್ತು ಹಾಕಿ, ಹೊಸತನವನ್ನು ಕಸಿ ಮಾಡುವ ಉತ್ಕಟ ಅಭೀಪ್ಸೆ ಮತ್ತೊಂದು ಕವಿತೆಯಲ್ಲಿ ಮುಂದುವರಿಯುತ್ತದೆ. ಅಂದರೆ, ಪ್ರಸ್ತುತ ಸಮಾಜದ ಬದಲಾವಣೆಯ ಕಾರಣಗಳನ್ನು ಪುರಾಣ, ಪ್ರತಿಮೆಗಳಲ್ಲೂ ಇತಿಹಾಸಗಳಲ್ಲೂ ಹುಡುಕುವ ಪ್ರಯತ್ನವಿದೆ. 'ಶತಮಾನಗಳ ಸಂದಿಗೊಂದುಗಳನ್ನೆಲ್ಲ ತಡಕಬೇಕು, ಬೆದಕಬೇಕು' ಎಂದು ಹೇಳುವಲ್ಲಿ ಕವಿಯ ಸಂಶೋಧನಾ ಪ್ರವೃತ್ತಿಯೇ ಕೆಲಸ ಮಾಡಿದೆ. ಹಳೆಯದನ್ನೆಲ್ಲ ಒದರಿ ವಂದರಿ ಮಾಡಿ, ಸೋಸೆ ಆರಿಸುವ ಕೆಲಸದಲ್ಲಿ ಕವಿಯ ಮನಸ್ಸು ಗಾಢವಾಗಿದೆ. ಅವರ ಕಾವ್ಯ ವ್ಯಂಜಿಸುವ ಈ ಅರ್ಥದ ಪರಿ ನಿಜಕ್ಕೂ ಮೆಚ್ಚತಕ್ಕದ್ದೇ. ಇಲ್ಲಿಯ ಎಲ್ಲ ಕವಿತೆಗಳಲ್ಲಿಯೂ ಶೋಧನಾತ್ಮಕ ಪ್ರವೃತ್ತಿಯೇ ತಳಹದಿಯಾಗಿರುವುದನ್ನು ಕಾಣುತ್ತೇವೆ. ಭಾಷೆ ಮತ್ತು ಶೈಲಿಗಳೆರಡರಲ್ಲಿಯೂ ಈ ಚಿಂತನೆ ಅಭಿವ್ಯಕ್ತಗೊಂಡಿರುವುದು ಇಲ್ಲಿಯ ಗಮನಾರ್ಹ ಅಂಶ. ಈ ಕಾರಣದಿಂದಾಗಿಯೇ ಇಲ್ಲಿನ ಎಲ್ಲ ಕವಿತೆಗಳೂ ಒಂದಲ್ಲ ಒಂದು ವಿಧದಲ್ಲಿ ಓದುಗನನ್ನು ಬಹುವಾಗಿ ಆಕರ್ಷಿಸಿಬಿಡುತ್ತವೆ. 'ಧರ್ಮಚಕ್ರ' ಮತ್ತು 'ತಲಾಂತರ' ಎಂಬ ಪದ್ಯಗಳಲ್ಲಿ ಕವಿ ನಡೆಸಿರುವ ಹಿತಿಮಿತಿ ಮಿಳಿತವಾದ ಪ್ರತಿಭಾಜನ್ಯ ವ್ಯುತ್ಪತ್ತಿಗೂ ಇರುವ ನೈಜ ವ್ಯತ್ಯಾಸವೇ ಜವರಯ್ಯನವರ ಕಾವ್ಯಕ್ರಿಯೆ ಎತ್ತ ಸಾಗುತ್ತಿದೆ ಎಂಬುದರ ವ್ಯಾಖ್ಯಾನ ಮಾಡುತ್ತದೆ.

ತಲಾಂತರದಿಂದ ಬಂದ ವ್ಯವಸ್ಥೆಗೆ ಬೇಕಾಗಿರುವ ಹೊಸ ಟ್ರೀಟ್‌ಮೆಂಟಿನ ಅವಶ್ಯಕತೆಯನ್ನು ಹೇಳುವಲ್ಲಿ, ವ್ಯವಸ್ಥೆಯ ಗಂಭೀರ ಚಿತ್ರ 'ತಲಾಂತರ'ದಲ್ಲಿ ಕಂಡುಬಂದರೆ, 'ಸ್ವತಂತ್ರ ಭಾರತದ ರಾಜಕೀಯ ಏರುಪೇರುಗಳನ್ನು ಸಮರ್ಪಕ ಚಿತ್ರಗಳ ಮೂಲಕ ಬಿಡಿಸುತ್ತ ಸಾಗುವ 'ಧರ್ಮಚಕ್ರ ಚಕ್ರಚಾಲಕ ಚಕ್ರವರ್ತಿಗೆ ಮೇಲಾಗಿ! ಇರಲುಂಟೆ ಧರ್ಮವೊಂದು, ಚಕ್ರವೊಂದು ?' ಎಂಬಲ್ಲಿನ ರಾಜಶಾಹಿಯ ಅಹಂಕಾರದ ಜೊತೆಗೆ, ವೇದ ಘೋಷಣವೂ ಸೇರಿಕೊಳ್ಳುತ್ತದೆ. ಕವಿ ಅದನ್ನು ಸಮರ್ಪಕವಾಗಿ ವಿಡಂಬಿಸುತ್ತಾನೆ. ಇಲ್ಲೆಲ್ಲಾ ಸಂಸ್ಕೃತವಂತೂ ತುಂಬಾ ಧ್ವನಿಪೂರ್ಣವಾದ ಸಾಂಸ್ಕೃತಿಕ ವ್ಯಂಗ್ಯಕ್ಕಾಗಿ ಬಳಕೆಯಾಗಿದೆ.

''ಅಪ್ಪ ಹೇಳಿದ ಕತೆ', 'ಮೆರಿಟ್ ಪಾಪದ ಪಾಂಚಜನ್ಯ', 'ಕೋಗಿಲೆ ಮತ್ತು ಇಂಡಿಯಾ', 'ಆ ಮುಗಿಲು ಈ ನೆಲ', 'ವರ್ಣಾವರ್ಣಕ್ಕೆ ವ್ಯಾಕರಣ', 'ಹೊಲೆ ಮಾದರ ಮನೆಯ ಮಗ', ಕುಲದ ಬಗೆಗಿನ ಅಹಂಕಾರ ಮತ್ತು ಅದರಿಂದಾದ ಸಾಮಾಜಿಕ ವಿಷಮತೆಯನ್ನು ಸಾದರಪಡಿಸುವ ಈ ಕವಿತೆಗಳು ದಲಿತ ಬಂಡಾಯದ ಕಾವ್ಯದ ದಿಕ್ಕನ್ನು ಸ್ಪಷ್ಟವಾಗಿ ಸೂಚಿಸುವಂಥದ್ದಾಗಿವೆ. ಸಮಾನತೆಯ ವಿಷಯದಲ್ಲಿ ಬಸವಣ್ಣನ ಜೊತೆ ಸಹಕರಿಸಿದ ಅಲ್ಲಮ, ಚನ್ನಬಸವರನ್ನು ಗೌರವದಿಂದ ಸ್ಮರಿಸಿ ಮಹಾಮನೆಯ ಮಹತ್ವವನ್ನು ಹೇಳಿ ವರ್ತಮಾನದಲ್ಲಿ ಈ ಮಹಾಮನೆಗಾದ ದುಃಸ್ಥಿತಿಯನ್ನು 'ಹೊಲೆ ಮಾದರ ಮನೆಯ ಮಗ'ನಲ್ಲಿ ಚಿತ್ರಿಸಲಾಗಿದೆ. ಇಲ್ಲಿ ಚೆನ್ನ, ಕಕ್ಕರ ಮನೆಯ ಮಗ ಎಂದುಕೊಂಡ ಬಸವನನ್ನು ಆತನ 'ಹಿಂಬಾಲಕರು' ಮಹಾಮನೆಯಿಂದ ಹೊರದಬ್ಬಿದ ಸಂಗತಿಯನ್ನು ಕವಿ ಗೇಯ ಗುಣಸಂಪನ್ನವಾದ ಗಾನವನ್ನಾಗಿಸಿದ್ದಾರೆ. 'ಈಗಿರುವುದೊಂದೇ ತತ್ವ! ಚೆನ್ನಯ್ಯ ಕಕ್ಕಯ್ಯ ಬಸವಾತ್ಮ ಚೇತನವೇ ಹೊಲೆ ಮಾದರ ಬಂಡಾಯ,' ಹೀಗೆ ಅಂತ್ಯಗೊಳ್ಳುವುದರ ಮೂಲಕ ಕವಿತೆಯ ಆಶಯ ಮುಗಿಲು ಮುಟ್ಟುತ್ತದೆ. ಸಾಂಸ್ಥಿಕ ರೂಪ ಪಡೆದಿದ್ದ ವೀರಶೈವ ಹೇಗೆ ಗತಿಶೀಲತೆಯನ್ನು ಪಡೆದುಕೊಂಡಿತು ಎಂಬುದನ್ನು ಸೂಚಿಸುತ್ತದೆ.

'ಶಿವೈಕ್ಯ ಹೊಲೇರ ಶಿವನಂಜು' ಇಂದಿನ ವಿಷಮತೆಯನ್ನು, ಆ ವಿಷಮತೆ ನಿರ್ಮೂಲವಾಗುವುದು ಅಂಬೇಡ್ಕರರ ಆಲೋಚನೆಗಳು ಕಾರ್ಯರೂಪಕ್ಕಿಳಿದಾಗ ಮಾತ್ರ ಎಂಬ ಆಶಯವನ್ನು ಒಳಗೊಂಡಿದೆ. ಚಂಪೂ ಶೈಲಿಯಲ್ಲಿ ಮೂಡಿಬಂದಿರುವ 'ಗೋವಿಂದಪುರ' ಎಂಬ ದೀರ್ಘ ಕವಿತೆಯಲ್ಲಂತೂ ಹೊಸ ಪೌರಾಣಿಕ ಸಂಗತಿಯೇ ಮೂಡಿಬಂದಿದೆ. ಹಾಗೆ ನೋಡಿದರೆ ಅಡಿಗರ 'ಗೊಂದಲಪುರ'ಕ್ಕೆ ಇದು ಉತ್ತರವೇ ಇರಬೇಕು ಅನಿಸತೊಡಗುತ್ತದೆ. ಅಡಿಗರು ತಮ್ಮ 'ಗೊಂದಲಪುರ'ದಲ್ಲಿ ವಿಜೃಂಭಿಸಿರುವ ಮೌಲ್ಯಗಳನ್ನೆಲ್ಲ ಮನಜ ತಮ್ಮ 'ಗೋವಿಂದಪುರ'ದಲ್ಲಿ ಪ್ರಶ್ನಿಸಿದ್ದಾರೆ, ವಿಡಂಬಿಸಿದ್ದಾರೆ. ವೈದಿಕ ಪುರಾಣ ಪ್ರತಿಮೆಗಳನ್ನೆಲ್ಲ ಧ್ವಂಸ ಮಾಡಿದ್ದಾರೆ, ಅದನ್ನು ಕಾವ್ಯ ಮಾಡಿದ್ದಾರೆ. ಇಷ್ಟು ವಿಚಾರಗಳ ಹಿನ್ನೆಲೆಯಲ್ಲಿ ಪ್ರೊ. ಮ. ನ. ಜವರಯ್ಯ ಅವರ 'ಗುಲಾಮಿ' ಕವನ ಸಂಕಲನ ಗಮನಾರ್ಹವಾದ ಮತ್ತು ತುಂಬಾ ಶಕ್ತಿವತ್ತಾದ ಸಂಕಲನವೆಂದೇ ನನಗನಿಸುತ್ತದೆ. ಇದು ಅವರ ಮೂರನೆಯ ಸಂಕಲನ

ಎಂಬುದು ಸಹ ಅವರ ಕಾವ್ಯದ ಬೆಳವಣಿಗೆಯ ಹಿನ್ನೆಲೆಯಲ್ಲಿ ಗಮನಾರ್ಹ. ಜೀತ ಪದ್ಧತಿಯೇ ಆಗಲಿ, ಊಳಿಗಮಾನ್ಯ ಪದ್ಧತಿಯೇ ಜರುಗುತ್ತಿರಲಿ, ಬಹು ಸಂಖ್ಯಾತರು ಅಲ್ಪಸಂಖ್ಯಾತರ ಮೇಲೆ ದಬ್ಬಾಳಿಕೆ ಮಾಡಿಕೊಂಡೇ ಬಂದಿದ್ದಾರೆ. ಅಂಥ ಆಕ್ರಮಣಶೀಲ ಪ್ರವೃತ್ತಿಗಳನ್ನು ಹಿಮ್ಮೆಟ್ಟಿಸುವ ಹೋರಾಟದ ದಾಖಲೆಗಳು ಸಹ ಚರಿತ್ರೆಯ ಪುಟಗಳಲ್ಲಿ ಅಂತರ್ಗತವಾಗಿವೆ. ಶತ ಶತಮಾನಗಳಿಂದ ಜರುಗುತ್ತ ಬಂದ ಈ ಹೋರಾಟ, ಮಾನವನ ಮೇಲೆ ಮಾನವನೇ ಮಾಡುತ್ತಿರುವ ಶೋಷಣೆಯ ವಿರುದ್ಧ ಎಂಬುದು ಸತ್ಯಸ್ಯ ಸತ್ಯ ಸಂಗತಿ. ಕನ್ನಡ ಕಾವ್ಯ ಸಹ ಇಂಥ ಸಂಘರ್ಷದ ಜೀವನಾನುಭವಗಳನ್ನು ಗರ್ಭೀಕರಿಸಿಕೊಳ್ಳುವ ಮೂಲಕ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ತನಗೆ ತಾನೇ ಘನತೆಯನ್ನು ತಂದುಕೊಂಡಿದೆ. ದಲಿತ ಬಂಡಾಯ ಚಳವಳಿಯ ಭಾಗವಾಗಿಯೇ ಬಂದ ದಲಿತ ಕಾವ್ಯವಂತೂ ಈ ಬಗೆಯ ಸಂಗತಿಗಳಿಗೆ ಸಮರ್ಥ ರೀತಿಯಲ್ಲಿ ನ್ಯಾಯ ದೊರಕಿಸಿಕೊಡುತ್ತಲೇ ಬಂದಿದೆ. ಶೋಷಣೆಯನ್ನು ಇಲ್ಲವೇ ಅದಕ್ಕೆ ಕಾರಣವಾದ ಮೂಲ ವ್ಯವಸ್ಥೆಯನ್ನೇ ವಸ್ತುವಾಗಿಸಿಕೊಂಡಿರುವ ಮನಜ ಅವರ 'ಗುಲಾಮಿ' ಸಂಕಲನದ ೩೨ ಕವಿತೆಗಳು ವಸ್ತುವಿನ ವೈವಿಧ್ಯತೆಯಲ್ಲೂ, ಅಭಿವ್ಯಕ್ತಿಯ ಅನೇಕತೆಯಲ್ಲೂ, ಭಾಷಾ ಸರಳತೆಯ ಔಚಿತ್ಯದಲ್ಲೂ ಒಂದಕ್ಕಿಂತ ಒಂದು ಭಿನ್ನವಾಗಿವೆ. ಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿ ತುಳಿಯುವುದನ್ನೇ ಗುರಿಯಾಗಿಸಿಕೊಂಡವರ ವ್ಯಕ್ತಿತ್ವ ರಹಿತ ಬದುಕನ್ನು ಬಯಲು ಮಾಡುತ್ತಲೇ, ಅದಕ್ಕೆ ಬಲಿಯಾದವರ ದೀನಸ್ಥಿತಿಯನ್ನು ವಿವರಿಸಲು ಮನಜ ಅವರ ಕಾವ್ಯ ತವಕಿಸುವ ರೀತಿ ಅನನ್ಯವಾದದ್ದು. ಆ ತನಕದ ಹಿಂದಿನ ಜೀವನ ಪ್ರೀತಿ ಮಾತ್ರ ಕಳಂಕರಹಿತವಾದುದು. ಅದೇ ಸಂದರ್ಭದಲ್ಲಿ ಹಾಗೆ ಪ್ರಶ್ನಿಸಲ್ಪಟ್ಟ ವ್ಯವಸ್ಥೆಯನ್ನು ನಿರಾಕರಿಸುವ ಮತ್ತು ಆ ರೀತಿಯ ನಿರಾಕರಣೆಯ ನಂತರ ಪರ್ಯಾಯ ವ್ಯವಸ್ಥೆಯನ್ನು ಅರಸಲೆತ್ನಿಸುವ ಮನಜ ಕಾವ್ಯದ ಧಾಟಿಯೇ ವಿನೂತನವಾದುದು.

'ಯಾರೆಂದರಿಯದ / ಹೆಸರಿರದ / ಉಸಿರರಿಯದ /ಮಂಡೆಶೂನ್ಯ ರುಂಡಗಮ್ಯ/ ಗಂಡಾಂತರಿ/ಚಂಡರೂಪವದು/ ನಿಖಿಲ ನಿಶ್ಚಯದೆ/ಗರಳ ಕೊರಳಿನ/ದುರುಳ ದೈನ್ಯದ /ಕರುಳವೈರಿಯದು' – ಹೀಗೆ ಆಕಾರರಹಿತವಾದ ಶೋಷಣೆಯ ಸ್ವರೂಪವನ್ನು ರಬ್ಬು ರಬ್ಬಾದ ಚಿತ್ರಗಳಲ್ಲಿ ಚಿತ್ರಿಸುತ್ತಲೇ ಅದನ್ನು 'ಮಾರಣಹೋಮಗೈವ ಪರಮ ಪಾಪಿ' ಎಂಬಲ್ಲಿ ಕವಿಯ ಬಂಡಾಯ ತತ್ವದ ದರ್ಶನವಾಗುತ್ತದೆ. ಇಂಥ ಸಂದರ್ಭದಲ್ಲಿ ಪ್ರಚಂಡ ಚಂಡರೂಪದ, ಮಂಡೆರಹಿತವಾದ, ಕರಾಳ ರುಂಡದ ಶೋಷಣಾ ಮೂಲವನ್ನು ಅನ್ವೇಷಿಸುವ ರೀತಿಯೂ, ಅದರ ಬೇರನ್ನು ಬಗೆಯುವ ಬಗೆಯೂ ಕಾವ್ಯದಲ್ಲಿ ಅರ್ಥಪೂರ್ಣವಾದುದು. ತತ್ವ ಸಮರಕ್ಕೆ ಬದ್ಧವಾಗುತ್ತಲೆ ಸರ್ವೇಂದ್ರಿಯಗಳನ್ನು ಸಿದ್ಧಗೊಳಿಸುವ ಕಾಲ ಅನಿವಾರ್ಯ. ಅದಕ್ಕಾಗಿಯೇ ಕವಿ ಮನಜ 'ಕತ್ತಲೆಯ ಓಡಿಸಬೇಕು/ ಜೀವನೆಲೆಗಳ ಮೇಲೆ/ಹೊಸ ಬೆಳಕು ಹರಿಸಬೇಕು/ಕೈಗೆ ಸಿಗದೆ ಕದ್ದಾಡುತ್ತಿರುವ/ಈ ಕರಾಳ ವೈರಿಯ/ ಕರಿ ಬಾಹುಗಳ ಕಡಿಯಲೇಬೇಕು' – ಎಂಬ ನಿರ್ಧಾರಕ್ಕೆ ಬರುವುದಂತೂ ಸಹಜ. ಅಲ್ಲದೆ, ಆಕಾರ ರಹಿತವೆಂದು ನಿರಾಕರಿಸಲಾದ ಶೋಷಣೆಯನ್ನು ಧ್ವನಿಸಲು ಕಾವ್ಯದಲ್ಲಿ ಕಡೆಯಲಾಗಿರುವ ಚಿತ್ರವಂತೂ ಇಡೀ ದಲಿತ ಬಂಡಾಯ ಕಾವ್ಯದಲ್ಲೇ ಒಂದು ವಿನೂತನ ಪ್ರಯೋಗವೆಂದೇ ನನಗನಿಸುತ್ತದೆ. ಯಾವ ಪರಿಸರದವರೇ ಆಗಲಿ ನೋವನ್ನುಂಡವರು ಎಂದಾದರೂ ಪ್ರತಿಭಟನೆಯ ಕೂಗು ಎತ್ತಲೇಬೇಕಾಗುತ್ತದೆ. ಜ್ವಾಲಾಮುಖಿಗಳು ಬೋಂಕನುಗಿದ ಅಗ್ನಿರಸಗಳಂತೆ ಇದೂ ಸಹ ಸ್ಫೋಟವಾಗಲೇಬೇಕು. ಇದು ನಿಸರ್ಗ ನಿಯಮ. ಇಂಥ ಸಹಜ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ಕವಿ ಮನಜ ವರ್ಣಿಸಿರುವ ಮಾನವ ಸಹಜ ಬಂಡಾಯದ ರೀತಿ ನೂತನ ಚಿಂತನೆಗೆ ರಹದಾರಿಯಂತಿದೆ. ನಿಸರ್ಗ ವ್ಯಾಪಾರವನ್ನು ಬಂಡಾಯದ ಪ್ರತಿಮೆಗಾಗಿ ಬಳಸಿಕೊಂಡಿರುವ ಇಲ್ಲಿನ ಪ್ರತಿಮಾವಿಧಾನ ಔಚಿತ್ಯಪೂರ್ಣ: 'ನೆಲದಡಿಯ ಕುದಿ ಜಲವದು' ಘೋರ ನಿಜವು/ನೊಂದೆದೆಯಲಿ ಕುದಿಗೊಂಡ ಅಗ್ನಿರಸವು/ಅಡಿಯಿಂದ ಸಿಡಿಯಲೇಬೇಕೆಂದು ನಿಸರ್ಗ ನಿಜವು.' ಇಂಥ ನಿಸರ್ಗ ವ್ಯಾಪಾರದ ಮೂಲಕ ಬದುಕು ಬ್ಯಾಲೆನ್ಸ್ ಆಗಬೇಕಾದ ಕಾಲ ಸನಿಹವಾಗುತ್ತದೆಂದು ಹೇಳುವಾಗ, ಕವಿ ಮನಜ ಕಾಲಜ್ಞಾನಿಯಂತೆಯೂ, ಪರಿಸರ ವಿಜ್ಞಾನಿಯಂತೆಯೂ ಗೋಚರವಾಗಿಬಿಡುತ್ತಾರೆ.




ಕವಿ ಹೇಳುವ ಸಮತೋಲನ ಸಾಧ್ಯವಾಗಬೇಕಾದರೂ ಸಮಷ್ಟಿಗೆ ಸಮಸ್ಯೆಯ ಅರಿವಿರಬೇಕು. ಅದಕ್ಕಾಗಿ ದಲಿತರು ಅಕ್ಷರಜ್ಞಾನ ಪಡೆಯಬೇಕು. ಅದರ ನಡುವೆ ಬದುಕಿನ ರಹಸ್ಯಗಳನ್ನು ಅರಿಯುವ ಶಕ್ತಿಗಾಗಿ ತವಕಿಸಬೇಕು. ಇಲ್ಲದಿದ್ದರೆ 'ಜಾತಿ ಗುಲಾಮಿ ಜೀತವೊಂದೆ' ಗತಿಯಾಗಿ ಬಿಡುವ ಅಪಾಯದ ಸಾಧ್ಯತೆಯ ಸತ್ಯವನ್ನೇ ಸಾರುವುದರ ಮುಖೇನ, ಕವಿ ಭವಿಷ್ಯತ್ತಿನಲ್ಲಿ ಒದಗುವ ದುರಂತದ ಛಾಯೆಯ ಅರಿವನ್ನು ಮೂಡಿಸುತ್ತಾನೆ. ಯಾವುದೇ ಭಾಷೆಯ ಕಾವ್ಯ ಮಾಡಬೇಕಾಗಿರುವ ಕೆಲಸವೂ ಇದೇ ಬಗೆಯದಾಗಿರಬೇಕು. ಹೀಗೆ ಸಾಗುವ ಮನಜ ಅವರ ಆಧ್ಯಾತ್ಮಿಕ ಸಾಲುಗಳಲ್ಲಿ ಅಡಗಿರುವ ಆಕ್ರೋಶದ ಅರ್ಥಸೌಂದರ್ಯ ಅನನ್ಯವಾದುದೆಂದೇ ಅನಿಸುತ್ತದೆ.

ಭಾರತದ ಸಾಂಸ್ಕೃತಿಕ ಪರಿಸರದಲ್ಲಿ ಸ್ವಾತಂತ್ರ್ಯ ಸಮಾನತೆಗಳು ನಿಜವಾದ ಅರ್ಥದಲ್ಲಿ ಸಾಧ್ಯವಾಗಿಲ್ಲ. ಅಸ್ಪೃಶ್ಯತೆಯ ಸಮಸ್ಯೆ ಇದಕ್ಕೊಂದು ಜೀವಂತ ಉದಾಹರಣೆ. ಅಸ್ಪೃಶ್ಯತೆ ಎಂಬುದು ಮನುಷ್ಯನ ಅಂತರಂಗದಲ್ಲಿಯೇ ಮನೆ ಮಾಡಿಕೊಂಡಿದೆ.

ರಾಘವಾಂಕನ ಕಾವ್ಯದಲ್ಲಿ ಬರುವ ಸ್ಪೃಶ್ಯ-ಅಸ್ಪೃಶ್ಯತೆಯ ಚರ್ಚೆಯನ್ನು ನೆನಪಿಸುವ ಪ್ರಸಂಗ ಮನಜ ಅವರ 'ಗುಲಾಮಿ' ಸಂಕಲನದ 'ಮಂಡಿಗಿಂತ ಮೇಲೆ ಮೆದುಳು' ಎಂಬ ಕವಿತೆಯಲ್ಲಿದೆ.

ತರಗತಿಯಲ್ಲಿ ಶುಷ್ಕ ವ್ಯಾಕರಣದ ಪಾಠ ಕೇಳುವ ದಲಿತ ಹುಡುಗ, ತರಗತಿಯ ಹೊರಗೆ ಕಲಿಯುವ ಪಾಠವೇ ಬೇರೆ. ಆತ ಜಾತಿ ನಿಂದನೆಯನ್ನು ಅನುಭವಿಸುತ್ತಾನೆ. ನಿಂದಿಸಿದಾತ ದಲಿತ ಹುಡುಗನ ತೋಟದ ಮರದಲ್ಲಿಯೇ ಚಕ್ಕೋತವನ್ನು ಕದಿಯಲು ಬಂದು ಸಿಕ್ಕಿಬೀಳುತ್ತಾನೆ. ಅವನಿಗೆ ಈ ಹುಡುಗನ ತಂದೆಯೇ ಉಪಚಾರ ಮಾಡುತ್ತಾನೆ. ದೈಹಿಕ ಯಾತನೆಗೆ ಉಪಚರಿಸಿಕೊಳ್ಳುವಾಗ ಅಸ್ಪೃಶ್ಯತೆ ತಟ್ಟುವುದಿಲ್ಲವೇ ಎಂಬ ಪ್ರಶ್ನೆ ಇಲ್ಲಿ ಮೂಡುತ್ತದೆ.

ಕೊನೆಗೆ ಅನಿಸುತ್ತದೆ, ಗೋವಿಂದ ಎತ್ತಿದ ಪ್ರಶ್ನೆ (ಹೊಲೆ ಮಾದಿಗ ಅಂದದ್ದು) ಅವನ ಮಂಡಿಯ ಕೆಳಗಿನದು. ಅಂದರೆ 'ಅಪ್ಪ ರಿಪೇರಿ ಮಾಡಿದ್ದು ಅವನ ಮಂಡಿಯನ್ನು' ಎಂದು ಭಾವಿಸುವಲ್ಲಿ, ಈ ದೇಶದ ಬೌದ್ಧಿಕ ದಾರಿದ್ರ್ಯದಲ್ಲಿ ಯಾವುದು ರಿಪೇರಿಗೊಳಗಾಗಬೇಕಾಗುತ್ತದೆಂಬುದರ ಸೂಕ್ಷ್ಮತೆಯನ್ನು ಕವಿ ಎಚ್ಚರಿಸಿದ್ದಾನೆ. ಸಾಮಾನ್ಯವೆನಿಸುವ ದೇಹಾಂಗಗಳ ಸರಳ ಪ್ರತಿಮೀಕರಣದ ಇಂಥಲ್ಲಿ ಗಾಢವಾದ ಅರ್ಥಧ್ವನಿಗಳೇ ಅಡಗಿವೆ. ಹಾಗಾಗಿ ಕವಿ ರಾಘವಾಂಕನು ಎತ್ತುವ ಅಸ್ಪೃಶ್ಯತೆಯ ಪ್ರಶ್ನೆಯಾಗಲಿ, ಕವಿ ಮನಜ ಎತ್ತುವ ಅದೇ ಪ್ರಶ್ನೆಯಾಗಲಿ ಒಂದೇ ವ್ಯವಸ್ಥೆಯನ್ನು ಪ್ರಶ್ನಿಸುತ್ತಿರುವ ನಿರಂತರದ ಒಂದೇ ಪ್ರಶ್ನೆಯಾಗಿದೆ.

ಕೆ. ಎಸ್. ನರಸಿಂಹಸ್ವಾಮಿಯವರ 'ಮನೆಯಿಂದ ಮನೆಗೆ' ಕವಿತೆಯನ್ನು ನೆನಪಿಸುವ 'ಮನೆಯಿಂದ ಮನೆಗೆ' ಎಂಬ ಮನಜ ಅವರ ಕವಿತೆಯಲ್ಲೂ ಅಸ್ಪೃಶ್ಯತಾ ಸಮಸ್ಯೆ ಇದೆ. ಕೆ.ಎಸ್.ನ. ಕವಿತೆಯಲ್ಲಿ ಒಂದು ಬಾಡಿಗೆ ಮನೆಯಿಂದ ಇನ್ನೊಂದು ಬಾಡಿಗೆ ಮನೆಗೆ ವಸ್ತುಗಳನ್ನು ಬದಲಾಯಿಸುವ ಸಂದರ್ಭದಲ್ಲಿ ಉಂಟಾಗುವ ಶ್ರಮ ಹಾಗೂ ಲೌಕಿಕದ ನೆಲೆಯಿಂದ ಅಲೌಕಿಕ ನೆಲೆಯತ್ತ ಸಾಗುವ ಕಾವ್ಯ ಕ್ರಿಯೆಯನ್ನು ಕಾಣುತ್ತೇವೆ. ಆದರೆ ಮನಜರ ಕವಿತೆಯಲ್ಲಿ ಬಾಡಿಗೆಗೆ ಮನೆಯನ್ನು ಹುಡುಕುವಾಗ ಎದುರಾಗುವ ಜಾತಿ ಸಮಸ್ಯೆಯೇ ಪ್ರಧಾನವಾಗಿದೆ. ಅಂದರೆ 'ಮನೆಯಿಂದ ಮನೆಗೆ' ಎಂಬ ಕಾವ್ಯ ಕಲ್ಪನೆಯ ಧಾತುವಿನಲ್ಲೇ ಕೆ.ಎಸ್.ನ. ಕವಿತೆಗೂ ಮ.ನ.ಜ. ಕವಿತೆಗೂ ಉಂಟಾಗುವ ಸಾಂಸ್ಕೃತಿಕ ದೂರವನ್ನೂ ಸಾಮಾಜಿಕ ವಿಷಮತೆಯನ್ನೂ ಕಾಣಬಹುದಾಗಿದೆ. ಕೆ.ಎಸ್.ನ. ಅವರಲ್ಲಿ ಹಗುರವಾದ ಹಾಸ್ಯವಿದೆ. ಆದರೆ ಮನಜ ಅವರಲ್ಲಿ ಅಸಾಧ್ಯವಾದ ಯಾತನೆಯಿದೆ. ಏಕೆಂದರೆ, ಕಾವ್ಯದ ನಾಯಕನು 'ಮನೆಯ ಹೊರಗಿನ ಜಾತಿಯಾದುದರಿಂದ ಮನೆ ಸಿಗುವಂತಿರಲಿಲ್ಲ', ನೋಡಿದ ಮನೆಗಳೆಲ್ಲಾ ಜಾತಿಯ ಆಗರಗಳಾಗಿ ಕಾಣಿಸುತ್ತವೆ. ಕವಿ

ಒಳಗೇ ಸಿಡಿದೇಳುತ್ತ ಆ ಮನೆಗಳ 'ಗೇಟಿನಿಂದ ಗೇಟಿಗೆ' ಅಲೆಯುತ್ತಾನೆಯೇ ಹೊರತು 'ಮನೆಯಿಂದ ಮನೆಗೆ' ಅಲ್ಲವೇ ಅಲ್ಲ. ಮನೆಯಿಂದ ಮನೆಗೆ ವರ್ಣಿಸುವ ಕೆ.ಎಸ್.ನ. ಕವಿತೆ ಮಧ್ಯಮ ವರ್ಗದ ಒಂದು ಸರಳ ಜೀವನಾನುಭವ ನೀಡುತ್ತದೆ. 'ಆದರೆ ಗೇಟಿನಿಂದ ಗೇಟಿಗೆ' ಅಲೆಯುವ ಮನಜ ಕವಿತೆ ಅದೇ ಸಮಾಜದ ಅಧಮತನವನ್ನು ಅನಾವರಣಗೊಳಿಸುತ್ತದೆ. ಹಾಗಾಗಿ, ಮನಜ ಕಾವ್ಯದಲ್ಲಿ ಚಲನಶೀಲಗುಣ ಅನಿವಾರ್ಯವಾಗಿದೆ.

ಅನೇಕರು ಆಚರಣೆಗಳನ್ನು ಕೇವಲ ಆಚರಣೆಗಳನ್ನಾಗಿಯೇ ನೋಡಿ ಅದನ್ನು ಹಾಗೆಯೇ ಬೆಂಬಲಿಸುತ್ತ, ಅವನ್ನು ವೈಭವೀಕರಿಸುವುದರಲ್ಲಿಯೇ ಖುಷಿ ಪಟ್ಟುಕೊಳ್ಳುತ್ತಾರೆ. ಇನ್ನೂ ಕೆಲವರು ಆಚರಣೆಗಳನ್ನು ಆಚರಿಸುವ ಸಂದರ್ಭದಲ್ಲಿ ಅವುಗಳಿಗೆ ಸಂಬಂಧಿಸಿದವರ ತತ್ವಾದರ್ಶಗಳನ್ನು ಮೌಲ್ಯೀಕರಿಸಿ ನೋಡುತ್ತಾರೆ; ಮೌಲ್ಯಗಳ ತಲಸ್ಪರ್ಶಿಯಾದ ಅಧ್ಯಯನದಲ್ಲೂ ತೊಡಗಿ ವೈಚಾರಿಕ ವಿಶ್ಲೇಷಣೆಗೆ, ಜನಪರವಾದ ಆಲೋಚನೆಗೆ ದಾರಿ ಮಾಡಿಕೊಡುತ್ತಾರೆ. ಈ ಹಾದಿಯಲ್ಲಿ ಮನಜ ಅವರ ಕಾವ್ಯವೂ ಸಾಗುತ್ತದೆ. ಈ ಮಾತಿಗೆ 'ನೂರರ ನೆಹರು' ಕವನ ಉದಾಹರಣೆಯಾಗಿದೆ. ಈ ಕವಿತೆ ನೆಹರೂ ಶತಮಾನದ ಸಂದರ್ಭದಲ್ಲಿ ರಚಿತವಾದದ್ದು. ಇದರಲ್ಲಿ ನೆಹರೂ ಮತ್ತು ಅಂಬೇಡ್ಕರ್‌ರು ಭಾರತವನ್ನು ಕಾಣುವಲ್ಲಿ ಇಬ್ಬರ ದೃಷ್ಟಿ ಮತ್ತು ಧೋರಣೆಗಳು ಹೇಗೆ ಭಿನ್ನವಾಗುತ್ತವೆಂಬುದನ್ನು ಮನಜ ತುಂಬಾ ಮಾರ್ಮಿಕವಾಗಿ ಕಾವ್ಯ ಮಾಡಿದ್ದಾರೆ. 'ಡಿಸ್ಕವರಿ ಆಫ್ ಇಂಡಿಯಾ'ದಲ್ಲಿ ನೆಹರು ಅವರ ಭಾರತ ನೋಟ ಕೇವಲ ಚಂದ್ರ ಪ್ರಕಾಶನವೇ ಹೊರತು ಅದು 'ಸೂರ್ಯ ಪ್ರಕಾಶನ'ವಲ್ಲ. ಚಂದ್ರನ ಬೆಳಕು ಸೂರ್ಯನಿಂದ ಪ್ರಕಾಶ ಪಡೆದು ಪ್ರತಿಫಲಿತವಾಗುವುದು ವೈಜ್ಞಾನಿಕ ಸತ್ಯ. ಆದ್ದರಿಂದ ಚಂದ್ರ ಪ್ರಕಾಶನಕ್ಕೆ ಸೂರ್ಯ ಪ್ರಕಾಶನದಷ್ಟು ಸ್ವಂತಿಕೆ ಇರುವುದಿಲ್ಲ. ನೆಹರೂ ಕಂಡ ಭಾರತದರ್ಶನ ಕೇವಲ ಒಂದು ವರ್ಗದ ಪರವಾದದ್ದು. ಶ್ರೇಣೀಕೃತ ಸಮಾಜದ ನೆಲೆಯಿಂದ, ಪಂಡಿತ ವರ್ಗದ ನೆಲೆಯಿಂದ ಬಂದ ನೆಹರು ಮಾಡಿದ ಭಾರತ ದರ್ಶನ, ತೀರಾ ಸಂಕುಚಿತವಾಗಿ ಪರಿಮಿತ ದರ್ಶನವನ್ನು ಮಾತ್ರ ಕಾಣಿಸುತ್ತದೆ. ಆದರೆ ಅತ್ಯಂತ ಕೆಳವರ್ಗದ ನೆಲೆಯಿಂದ ಬಂದ ಅಂಬೇಡ್ಕರ್‌ರವರದು ಆಪಾದಮಸ್ತಕದ ಒಂದು ಅಖಂಡ ದರ್ಶನವಾಗಿ ಕಾಣಿಸುತ್ತದೆ. ಹೀಗಾಗಿ ಅಂಬೇಡ್ಕರ್ ನೆಲೆಗೂ, ನೆಹರೂ ನೆಲೆಗೂ ಅಜಗಜಾಂತರ ವ್ಯತ್ಯಾಸವಿದೆ. ಅಂಬೇಡ್ಕರ್ ಬಂದ ಸಾಂಸ್ಕೃತಿಕ ನೆಲೆ ಮಾನವ ಸ್ವಾತಂತ್ರ್ಯವಿಲ್ಲದ ನೆಲೆ, ನೆಹರೂ ನೆಲೆ ಮಾನವ ಸ್ವಾತಂತ್ರ್ಯದ ಉತ್ಕೃಷ್ಟ ಮಟ್ಟವನ್ನು ಅನುಭವಿಸಿದ್ದು. ಹಾಗಾಗಿ, ನೆಹರು ಮಾಡಿದ ಭಾರತದರ್ಶನ ಪರಿಪೂರ್ಣವಾದುದಲ್ಲ ಎಂಬುದು ವ್ಯಸನದ ಸಂಗತಿ. ಈ ಸಂದರ್ಭದಲ್ಲಿ ಭಾರತದ ಜನತೆಯನ್ನು ಕಾಣುವಾಗ ಅಂಬೇಡ್ಕರ್ ದೃಷ್ಟಿ ಸೂರ್ಯ ಪ್ರಕಾಶವೆನಿಸಿದರೆ, ನೆಹರೂ ದೃಷ್ಟಿ ಚಂದ್ರಪ್ರಕಾಶನವೆಂದು ಅರ್ಥೈಸಿಕೊಳ್ಳಲು ಸಾಧ್ಯವಾಗಿರುವುದು ಈ ಕವಿತೆಯ ಮಹತ್ವದ ಸಂಗತಿಯಾಗಿದೆ.

ಈ ಕವಿತೆಯಲ್ಲಿ ಬಳಸಲಾಗಿರುವ 'ಚಂದ್ರ' ಮತ್ತು 'ಸೂರ್ಯ' ಪ್ರತಿಮೆಗಳು ಜ್ವಲಂತವಾದ ಅರ್ಥಪರಂಪರೆಯನ್ನೇ ವ್ಯಂಜಿಸಿಬಿಡುತ್ತವೆ. ಹಾಗೆಯೇ ಇಲ್ಲಿ ಎರಡು ಸ್ಪಷ್ಟ ನೆಲೆಗಳನ್ನು ಕಂಡುಕೊಳ್ಳಬಹುದಾಗಿದ್ದು ಅವುಗಳ ಸ್ವರೂಪಗಳ ಅರಿವು ಸಹ ಮೂಡುತ್ತದೆ.

'ಜಾತ್ಯತೀತ ತೈಲತತ್ವ' ಸೆಕ್ಯುಲರಿಸಂಗೆ, ಸರಳ ವಸ್ತುವಿನ ಶಕ್ತಿವತ್ತಾದ ಕವಿತೆ. ಕವಿತೆಯ ವಸ್ತುವೂ ಸಾಮಾನ್ಯ. ಅದರ ಅಭಿವ್ಯಕ್ತಿ ವಿಧಾನವೂ ತುಂಬಾ ಸರಳವೇ. ಈ ಕವಿತೆಯ ಪ್ರತಿಮೆಯೂ ಸರಳವಾಗಿದೆ. ಆದರೆ ಅದರ ಮುಖಾಂತರ ಹೊರಡುವ ಧ್ವನಿ, ಅದರ ಅರ್ಥ ಮತ್ತು ತತ್ವ ಮಾತ್ರ ಅಸಾಧಾರಣವಾದುದು. ಮನಜ ಕಾವ್ಯದ ಸರಳ ಸಾಲುಗಳ ಮರ್ಮ ಪ್ರಾಯಶಃ ಇದೇ ಆಗಿದೆ ಎಂದೆನಿಸುತ್ತದೆ.

ಸಾಮಾನ್ಯರ ನಿತ್ಯ ಜೀವನ ಜಂಜಾಟದಲ್ಲಿ ಜೀವನಾವಶ್ಯಕವಾದ್ದು ಸೀಮೆಎಣ್ಣೆ. ಆ ಕ್ಯೂನಲ್ಲಿ ನಿಂತವರೆಲ್ಲರಿಗೂ ಸಿಗುತ್ತದೋ ಬಿಡುತ್ತದೋ ಆ ಪ್ರಶ್ನೆ ಬೇರೆ. ಮಡಿ ಮೈಲಿಗೆಯಂತೂ ಅಲ್ಲಿ ಕಾಣಿಸದು. ಗುಡಿ, ಚರ್ಚು, ಮಸೀದಿಯ ಕಲಹವೂ ಅಲ್ಲಿಲ್ಲ. ಅಲ್ಲಿ ಜಾತಿ ಧರ್ಮಗಳ ಗೊಂದಲವಿಲ್ಲ. ತುಡಿಯುವ ಜೀವಕ್ಕಾಗಿ ಪಡೆಯುವ ಮನಸ್ಸು ಮಾತ್ರ ಅಲ್ಲಿ ಜಾಗೃತವಾಗಿರುತ್ತದೆ. 'ನಮ್ಮ ಜನರನು/ ಒಂದೆಡೆ ಸೇರಿಸಿದೆ ಹೀಗೆ/ ವಂದನೆ ಜಾತ್ಯತೀತ ತೈಲ ನಿನಗೆ' ಎಂದಿರುವುದು ಸಮಂಜಸವಾಗಿದೆ. 'ನಾನೂ ನನ್ನಾತ್ಮವೂ', 'ಅಪ್ಪನ ಮಿತ್ರ ಪುರಾಣಿಕರು', 'ಲೋಕಸ್ನೇಹ' – ಮುಂತಾದ ಕವಿತೆಗಳಲ್ಲಿಯೂ ಅದೇ ಜಾತಿ ಸಮಸ್ಯೆಯ ಮತ್ತು ಗುಲಾಮಿ ಸಮಸ್ಯೆಯನ್ನು ಕುರಿತ ಕಾವ್ಯಾಭಿವ್ಯಕ್ತಿ ನಡೆದಿದೆ.

ಜಗತ್ಪ್ರಳಯದ ಬಗ್ಗೆಯೂ ನಮ್ಮಲ್ಲಿ ಅಸಾಧ್ಯವಾದ ಕಲ್ಪನೆಗಳಿವೆ. ಅಂಥವುಗಳ ಜೊತೆಗೆ ವೈಜ್ಞಾನಿಕ ಕಾರಣಗಳೂ ಬೆಸೆದುಕೊಂಡಿವೆ. 'ನನ್ನ ನಾಡಿಗಂಟಿಸಿರುವ/ ಗುಲಾಮಗಿರಿಯನ್ನು/ ಮರೆಯದೆ ಮುಳುಗಿಸಿಬಿಡು', ಎಂಬಲ್ಲಿನ ಕವಿಯ ಅದಮ್ಯ ರಾಷ್ಟ್ರೀಯವಾದ ಕುತೂಹಲಕರ (೨೧ನೇ ಶತಮಾನಕ್ಕೆ ನನ್ನದೊಂದು ಪ್ರಾರ್ಥನೆ). ದಲಿತ ಕಾವ್ಯದಲ್ಲಿ ದೇಶಪ್ರೇಮ, ಜನಪ್ರೇಮ ಅಥವಾ ನೆಲಜಲಗಳ ಮೇಲಿನ ಪ್ರೇಮದ ಕಾವ್ಯಾಭಿವ್ಯಕ್ತಿ ಇಲ್ಲವೆನ್ನುವ ಸಾಹಸವನ್ನು ಯಾರೂ ಮಾಡಲಾರರು ಎಂದು ಭಾವಿಸಬಹುದಾಗಿದೆ.

ವ್ಯಂಗ್ಯ ಮತ್ತು ವಿಡಂಬನೆಗಳು ಮನಜ ಅವರ ಕಾವ್ಯದ ಸ್ಥಾಯೀ ಭಾವಗಳು, ಹಾಗಾಗಿ, ಸ್ಥಗಿತ ಮೌಲ್ಯಗಳನ್ನು ಲೇವಡಿ ಮಾಡುವ ಶಬ್ದಚಳಕ ಅವರಿಗೆ ಕರಗತ. ಆ ರೀತಿಯ ಪೌರಾಣಿಕ ಮತ್ತು ಪಾರಂಪರಿಕ ಮೌಲ್ಯಗಳನ್ನು ಅಲುಗಾಡಿಸಿ, ವಿಡಂಬಿಸಿ, ಕೊನೆಗೆ ಧಿಕ್ಕರಿಸಿ, ಆ ಜಾಗದಲ್ಲಿ ಪ್ರತಿಮೌಲ್ಯಗಳನ್ನು ಸೃಷ್ಟಿಸುವ, ಮತ್ತು ಪ್ರತಿಸಂಸ್ಕೃತಿಯನ್ನು ಕಟ್ಟುವ ಕಾವ್ಯಕಲೆಯನ್ನು ಮನಜರ ಕಾವ್ಯದಲ್ಲಿ ಹೇರಳವಾಗಿ ಕಾಣಬಹುದಾಗಿದೆ. ಅಲ್ಲಿಯೂ ಅವರು ಜೀವ ಪ್ರೀತಿಯನ್ನು ಮಾತ್ರ ಬಿಟ್ಟುಕೊಡುವುದಿಲ್ಲ. ಹೀಗೆ ಪುರಾಣ ಪ್ರತಿಮೆಗಳನ್ನು ಧ್ವಂಸ ಮಾಡುತ್ತ, ನವಪುರಾಣ ಪ್ರತಿಮೆಗಳನ್ನೇ ಸೃಷ್ಟಿಸುವ ಈ ವಿಧಾನವನ್ನು ಪ್ರಾಯಶಃ ಕಪ್ಪು ಕವಿ ವೋಲೆ ಸೋಯೆಂಕಾನಲ್ಲಿ ಮಾತ್ರ ಕಾಣುತ್ತೇವೆ. ಪ್ರಾಚೀನ ಬೈಬಲ್ ಮೂಲದಲ್ಲಿನ ಪುರಾಣಪ್ರತಿಮೆಗಳನ್ನೆಲ್ಲಾ, ಹೆಜ್ಜೆ ಹೆಜ್ಜೆಗೂ ಪ್ರಶ್ನಿಸುತ್ತ, ಅವುಗಳನ್ನೆಲ್ಲ ಕವಿ ಸೋಯೆಂಕಾ ಧ್ವಂಸ ಮಾಡುತ್ತ ನಡೆಯುತ್ತಾನೆ.

ದಲಿತ ಪುರಾಣವನ್ನು ಸೃಷ್ಟಿಸುವಲ್ಲಿಯೂ ತಮ್ಮ ಕಾವ್ಯದ ಶಕ್ತಿಯನ್ನು ಮನಜ ಸಮರ್ಥವಾಗಿ ಬಳಸಿಕೊಳ್ಳುತ್ತಾರೆ. 'ಕೋತಿಗಳ ಕಾಟ' ಎಂಬ ಕವಿತೆಯಲ್ಲಿ ಈ ಬಗೆಯ ಪ್ರತಿಸಂಸ್ಕೃತಿ ನಿರ್ಮಾಣವಿದೆ. ಮೂಲಭೂತವಾದಿಗಳಿಂದ ಬಾಬ್ರಿ ಮಸೀದಿ ನಾಶವಾದುದು, ಅದಕ್ಕೆ ಕಾರಣರಾದವರ ಕುಬ್ಜ ವ್ಯಕ್ತಿತ್ವ ಇತ್ಯಾದಿಗಳನ್ನೆಲ್ಲ ಅತ್ಯಂತ ಸಾಂಕೇತಿಕವಾಗಿ ಮತ್ತು ಅಷ್ಟೇ ವ್ಯಂಗ್ಯವಾಗಿ ಮನಜ ಆ ಕವಿತೆಯಲ್ಲಿ ಚಿತ್ರಿಸಿದ್ದಾರೆ.

'ಲೋಕ ಸ್ನೇಹ', 'ಭಾರತ ಮಾತೆಯ ತನುಜಾತೆ', 'ಬಂಡಾಯ ಮತ್ತು ಹೆಣ್ಣು', 'ಜೀವನ', 'ಧ್ಯಾನನಾಯಕ' – ಈ ಮೊದಲಾದ ಕವಿತೆಗಳಲ್ಲಿಯೂ ವ್ಯಂಗ್ಯವೇ ಪ್ರಧಾನವಾಗಿದ್ದು ಮನಜ ಅವರ ಹಾಸ್ಯಪ್ರಜ್ಞೆ ಅವರ ಸರಸ ಸಾಲುಗಳ ಕಾವ್ಯದ ಕಲಾತ್ಮಕತೆಗೆ ಕಿರೀಟ ಇರಿಸಿದೆ.

ಜಿ. ಆರ್. ತಿಪ್ಪೇಸ್ವಾಮಿ
ಕನ್ನಡ ರೀಡರ್, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು-೫೭೦ ೦೦೬

ಸುದ್ದಿಚಿತ್ರ



ಮೇ ೧೧, ಭಾನುವಾರ ನಯನ ಸಭಾಂಗಣದಲ್ಲಿ ನಡೆದ ಸಮಾರಂಭದಲ್ಲಿ ಶ್ರೀ ವ್ಯಾಸರಾಯ ಬಲ್ಲಾಳರ ಮುಂಬಯಿ ಜೀವನದ ಅನುಭವ ಕಥನ **ಮುಂಬಯಿ ದಿನಾಂಕ...** ಕೃತಿಯನ್ನು ನ್ಯಾಯವಾದಿ ಶ್ರೀ ಕೋ. ಚೆನ್ನಬಸಪ್ಪ ಬಿಡುಗಡೆ ಮಾಡಿದರು. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಡಾ|| ಗುರುಲಿಂಗ ಕಾಪಸೆ ಅಧ್ಯಕ್ಷತೆ ವಹಿಸಿದರು. ಲೇಖಕ ಜಯಂತ ಕಾಯ್ಕಿಣಿ ಕೃತಿ ಪರಿಚಯ ಮಾಡಿಕೊಟ್ಟರು. (ಚಿತ್ರದಲ್ಲಿ ಎಡದಿಂದ-ಬಲಕ್ಕೆ) ಶ್ರೀಮತಿ ಮತ್ತು ಶ್ರೀ ವ್ಯಾಸರಾಯ ಬಲ್ಲಾಳ, ಡಾ|| ಗುರುಲಿಂಗ ಕಾಪಸೆ, ಶ್ರೀ ಕೋ. ಚೆನ್ನಬಸಪ್ಪ, ಶ್ರೀ ಆರ್. ಎಸ್. ರಾಜಾರಾಮ್, ಶ್ರೀ ಜಯಂತ ಕಾಯ್ಕಿಣಿ.

# ನಿಸರ್ಗ ಭಾಷೆಯಲ್ಲಿ ಬರೆದ ಕನ್ನಡ ಕಾವ್ಯ

— ಎ. ಚಂದ್ರಶೇಖರ ನಂಗಲಿ —

ವ್ಯವಸ್ಥಿತ ಸಾಹಿತ್ಯ ಚರಿತ್ರೆ ಮತ್ತು ಪ್ರತಿಷ್ಠಿತ ಶೈಕ್ಷಣಿಕ ವ್ಯಾಸಂಗ ವಲಯಗಳಲ್ಲಿ ಕವಿಯೊಬ್ಬನ ಕಾವ್ಯಕ್ಕೂ ಆಯಾಕಾಲದ ಸಾಹಿತ್ಯ ಚಳುವಳಿಗಳಿಗೂ ನೇರ ಸಂಬಂಧ ಕಲ್ಪಿಸುವ ವಾಡಿಕೆಯಿದೆ. ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯಗಳೆಂಬ ಹಣೆಪಟ್ಟಿಯನ್ನು ಸಲೀಸಾಗಿ ಹಚ್ಚುವ ಮಂದಿ ಎಷ್ಟೋ ವೇಳೆ ಈ ಹಣೆಪಟ್ಟಿಗಳಾಚೆಗೆ ನೋಡುವುದಿಲ್ಲ. ಯಾವ ಚಳುವಳಿಗೂ ಸಂಬಂಧಪಡದ ಬಿ. ಜಿ. ಎಲ್. ಸ್ವಾಮಿಯಂಥ ಲೇಖಕರು ಮತ್ತು ಯಾವೊಂದು ಚಳುವಳಿಗೂ ದಕ್ಕದ ತೇಜಸ್ವಿಯಂಥವರನ್ನು ವಿಮರ್ಶಿಸುವಾಗ ಸಾಹಿತ್ಯ-ಚಳುವಳಿಗಳ ಅದ್ವೈತ ಸಂಬಂಧವು ಹೋಳೆಯಲ್ಲಿ ಹಿಂಡಿದ ಹುಳಿಯಾಗುತ್ತದೆ... ಇದನ್ನು ಚೆನ್ನಾಗಿ ಮನಗಂಡ 'ಬುದ್ಧಿಜೀವಿ' ವಿಮರ್ಶಕರು ವಿಶೇಷವಾಗಿ ಜಿ. ಎಸ್. ಶಿವರುದ್ರಪ್ಪ ಮತ್ತು ಚನ್ನವೀರ ಕಣವಿ ಅವರುಗಳ ಕಾವ್ಯವನ್ನು ವಿವರಿಸಲು 'ಸಮನ್ವಯ'ವೆಂಬ ಮತ್ತೊಂದು ಸಾಹಿತ್ಯಕ ಪುರೋಹಿತಶಾಹಿ ಪರಿಭಾಷೆಯನ್ನು ಸೃಷ್ಟಿಸಿದರೆಂಬುದು ಇದೀಗ ಇತಿಹಾಸ.

ನವೋದಯದಿಂದ ಆದರ್ಶವಾದ ಮತ್ತು ಕನಸುಗಾರಿಕೆ, ಪ್ರಗತಿಶೀಲರಿಂದ ಪ್ರಗತಿಪರತೆ, ನವ್ಯರಿಂದ ವಾಸ್ತವ ಪ್ರಜ್ಞೆ, ದಲಿತ ಬಂಡಾಯದವರಿಂದ ಚಾರಿತ್ರಿಕ ಮತ್ತು ಸಾಮಾಜಿಕ ಪ್ರಜ್ಞೆ – ಹೀಗೆ ಅವರಿವರಿಂದ ನಾನಾ 'ವಾದ' ಮತ್ತು 'ಪ್ರಜ್ಞೆ'ಗಳನ್ನು ಬೇಡಿಕೊಂಡು ಸಾಹಿತ್ಯ ರಚನೆ ಮಾಡಿದ್ದಾರೆಂಬ ವಿವರಣೆಗಳನ್ನು ಜಿ. ಎಸ್. ಎಸ್. ಮತ್ತು ಕಣವಿ ಕಾವ್ಯಕ್ಕೆ ಸಂಬಂಧಪಟ್ಟಂತೆ ನಾನು ಗಮನಿಸಿದ್ದೇನೆ. ''ಭಕ್ತಿಗೆ ಲಕ್ಷಣವನರಸಲಾಗದು'' – ಎಂಬಂತೆ ನಿಜ ಕಾವ್ಯಕ್ಕೆ ಯಾವುದೇ ರೀತಿಯ ಪುರೋಹಿತಶಾಹಿ ವ್ಯಾಖ್ಯಾನಗಳನ್ನು ನೀಡಲಾಗುವುದಿಲ್ಲ. ಬೇಂದ್ರೆ ಕಾವ್ಯದಿಂದ ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯ ಮಾದರಿಯ ಎಲ್ಲ ಕವಿತೆಗಳನ್ನು ಎತ್ತಿ ತೋರಿಸಬಹುದು. 'ಕಾಡುಕವಿ' ಕುವೆಂಪು ಅವರನ್ನು ಯಾವುದೊಂದು ಸಾಹಿತ್ಯ ಚಳುವಳಿಗೂ ಗಂಟು ಹಾಕಲಾಗದು! ನೃತ್ಯಕ್ಕೆ ಲಕ್ಷಣಗಳು ನಾಟ್ಯಶಾಸ್ತ್ರದಲ್ಲಿರಬಹುದಾದರೂ ಗಿರಿಜನರ ಮುಗ್ಧ ಕುಣಿತಕ್ಕೆ, ಗಿರಿಶಿವನ ತಾಂಡವಕ್ಕೆ 'ಲಕ್ಷಣವನರಸಲಾಗದು.'

೨

'ನಿಸರ್ಗ' ಮತ್ತು 'ಸಂಸ್ಕೃತಿ' ಕಣವಿ ಕಾವ್ಯದ ಎರಡು ದಡ. ನಿಸರ್ಗದ ಧಾತು ಮತ್ತು ಧೋರಣೆಗಳಿಂದ ಸಂಸ್ಕೃತಿಗೆ ಕಾಯಕಲ್ಪ ಚಿಕಿತ್ಸೆ ನೀಡುವ ಅಂತೆಯೇ ಸಂಸ್ಕೃತಿಯ ಸಾವಿರದ ಬಗೆಗಳನ್ನು ನಿಸರ್ಗದೊಂದಿಗೆ ಮೇಳೈಸುವ ಮನೋಧರ್ಮವನ್ನು ಕಣವಿ ಕಾವ್ಯದಲ್ಲಿ ಮನಗಾಣಬಹುದು. ನಿಸರ್ಗದ ಮತ್ತು ಸಂಸ್ಕೃತಿಯ ಕಣ-ಕಣದಲ್ಲು ವಿಶಿಷ್ಟ ಕಾಣ್ಕೆಯನ್ನು ಬಿಂಬಿಸುವ ಕಾಲಾತೀತ ಪ್ರಜ್ಞೆ ಕಣವಿಯವರಲ್ಲಿದೆ. ಇದನ್ನು ಕೆಲವೊಂದು ಕವಿತೆಗಳ ಮೂಲಕ ಸ್ಪಷ್ಟೀಕರಿಸುವುದಷ್ಟೆ ಈ ಲೇಖನದ ಉದ್ದೇಶ. ಕಣವಿ ಕಾವ್ಯದ ಸಮಗ್ರ ದರ್ಶನ ಇಲ್ಲಿಲ್ಲ.

ನಿಸರ್ಗ, ಬದುಕು, ಚರಿತ್ರೆ, ಕಾಲ, ಧರ್ಮ, ಸಾಹಿತ್ಯ, ವಿಜ್ಞಾನ ಮುಂತಾದವುಗಳನ್ನು ಪ್ರತ್ಯೇಕವೆಂಬಂತೆ ನೋಡುವವರಿಗೆ ಇವೆಲ್ಲ ಒಂದಕ್ಕೊಂದು ಸಂಬಂಧವಿಲ್ಲದಂತೆ ಬೇರೆ ಬೇರೆಯಾಗಿಯೇ ಕಾಣುತ್ತವೆ. ಆದರೆ, ಕಣವಿಯವರ ಪಾಲಿಗೆ ಮೇಲಿನ ಪ್ರತಿಯೊಂದು ಮತ್ತೊಂದರ ಜೊತೆ ಸಂಬಂಧವನ್ನು ಹೊಂದಿದೆ. ಇದನ್ನು ಹೀಗೂ ವಿವರಿಸಬಹುದು. ಕಣವಿಯವರು ನಿಸರ್ಗವನ್ನು ಕುರಿತು ಬರೆದ ಕವಿತೆಯೊಂದರಲ್ಲಿ ಉಳಿದೆಲ್ಲ ಕ್ಷೇತ್ರಗಳು ಅಂದರೆ ಬದುಕು, ಚರಿತ್ರೆ, ಕಾಲ, ಧರ್ಮ, ಸಾಹಿತ್ಯ, ವಿಜ್ಞಾನ ಮುಂತಾದವುಗಳೆಲ್ಲ ನೇಯ್ದ ಅರಿವೆಯಂತೆ ಹಾಸುಹೊಕ್ಕು ಐಕ್ಯಸ್ಥಲವಾಗಿರುತ್ತದೆ. ಇಂಥ ಕವಿತೆಗಳನ್ನು ಸಾಂಪ್ರದಾಯಿಕ ಲಕ್ಷಣಗಳಾದ ಶಬ್ದಾಲಂಕಾರಗಳು ಅಥವಾ ಅರ್ಥಾಲಂಕಾರಗಳೆಂಬ ಪರಿಭಾಷೆಗಳಿಂದಾಗಲಿ, ಸಾಹಿತ್ಯ ಚಳುವಳಿಗಳೆಂಬ ಪುರೋಹಿತಶಾಹಿ ಹಣೆಪಟ್ಟಿಗಳಿಂದಾಗಲಿ ವಿವರಿಸಲಾಗದು. ಉದಾಹರಣೆಗೆ 'ಮಣ್ಣಿನ ಮೆರವಣಿಗೆ' ಎಂಬ ಕವನ ಪರಿಶೀಲಿಸೋಣ :

ತಿರುಗುತ್ತಿದೆ : ಎಂದೋ ಸಿಡಿದಾರಿದ
ಅಗ್ನಿಯ ಪಿಂಡ
ಆರಿದೆಯೆಂದವರಾರೋ ಇನ್ನೂ ನಿಗಿ ನಿಗಿ ಉರಿಯುತ್ತಿದೆ
ಅದರೆದೆಯಾಳದ ಕುಂಡ.
ಹರಿಯುತ್ತಿದೆ ಬೆಂಕಿಯ ಹೊಳೆ
ತಣ್ಣನೆ ಕಡಲೊಳಗೆ;
ಹೊಗೆಯಾಡುತ್ತಿದೆ ಸುಮ್ಮನೆ ನುಣ್ಣನೆ ಬಾನೊಳಗೆ
ಬಿದ್ದಿವೆ
ಒಡಮುರಿದೆದ್ದಿವೆ ಗಿರಿ ಗಹ್ವರ
ಯುಗಯುಗಗಳ ನೋವೆ!
ದರಿ ಕಂದರದೊಳಗಿನ್ನೂ ಹರಿದಾಡಿದೆ ಸಂಶಯವೆ.

ಮೇಲಿನ ಸಂಕೀರ್ಣ ಸಮಾವಿಷ್ಟ ಬಹುರೂಪಾತ್ಮಕ ನುಡಿಮುತ್ತುಗಳಲ್ಲಿ ಭೂಮಿಯ ಉತ್ಪತ್ತಿಗೆ ಸಂಬಂಧಪಟ್ಟ ವೈಜ್ಞಾನಿಕ ವಿವರಣೆ ಮಾತ್ರ ಇದೆಯೆಂದು ಹೇಳಲಾಗದು. ಇದರಲ್ಲಿ ಎಂದಿಗೂ ಆರದ, ಸದಾ ಹರಿಯುತ್ತಿರುವ, ಬದುಕು-ಚರಿತ್ರೆ-ಕಾಲ-ಧರ್ಮ- ಸಾಹಿತ್ಯಗಳ ನಿತ್ಯನೂತನತೆ, ಒಡಲಾಳ, ಸುಪ್ತಭಾವ, ನೋವಿನ ಎಚ್ಚರಗಳೆಲ್ಲ ಹೃದ್ಯವಾಗಿ ಮೂಡಿ ಬಂದಿವೆ. ಇದನ್ನು ಇದೇ ಕವನದ ಎರಡು ಮತ್ತು ಮೂರನೆ ಭಾಗದಲ್ಲಿ ವಿಸ್ತೃತವಾಗಿ ಮನಗಾಣಬಹುದು. ವಿಕಾಸದ ಜೊತೆಗೂಡಿಯೇ ವಿನಾಶವೂ ಪ್ರಕಟಗೊಳ್ಳುವ ಪರಿ ನಿಸರ್ಗದಲ್ಲೂ ಇದೆ; ಸಂಸ್ಕೃತಿಯಲ್ಲೂ ಇದೆ.

ಬಂದುಹೋದವು ಬಂಡುಹೂಡಿ ಒಂದರ ಮೇಲೆ ಒಂದು ಮಳೆಗಾಲ-
ಗುಡುಗಿ, ಗದ್ದಲಿಸಿ, ಮದ್ದಳೆ ಬಡಿದು ಕುಣಿದಾಡಿ
ಹಿಡಿದು ಹೆಂಡದ ಬುಂಡಿ ಎತ್ತಿ ಕುಡಿದು-ಹಾಗೂ ಹೀಗೂ ಗೋಡೆ ನಿಂತಿಹವು
ಜೋಲಿ ಹೊಡೆದು;
ಕುಸಿಯತೊಡಗಿದೆ ಕೆಳಗೆ ನೆಲಗಟ್ಟು; ಮೇಲೆ ಬಿದ್ದಿದೆ ಭಾರ ನೀಗದಷ್ಟು
ಎಷ್ಟು ಮಣ್ಣನು ಹಾಕಿ ಮೆತ್ತಿದರು ಪ್ರತಿ ವರುಷ ಇದರ ಹಾಡೇ ಇಷ್ಟು
ಮಾಳಿಗೆಯ ಮೇಲೆ ಇರುವೆಗಳ ಸಾಲುದುರ್ಗ
ಜಂತಿಯಲಿ ಇಲಿಗಳೋಡಾಡಿ ದಿನವೂ ಬುಟ್ಟಿ ಬುಟ್ಟಿ ಮಣ್ಣುದುರಿ
ಎಲ್ಲಿ ನೋಡಿದರಲ್ಲಿ ಸುರಂಗಮಾರ್ಗ.

– 'ಮಣ್ಣಿನ ಮೆರವಣಿಗೆ' ಯಿಂದ.

ನಿಸರ್ಗದ ಭಾಷೆಯ ಮೂಲಕ ಸಂಸ್ಕೃತಿಯನ್ನು ಮಾತನಾಡಿಸುವ ಮತ್ತು ಸಂಸ್ಕೃತಿಯ ಆಚ್ಛಾದನಗಳನ್ನು ಸರಿಸಿ ನಿಸರ್ಗದ ಮೂಲಧಾತುಗಳಿಗೆ ತಲುಪಿಸುವ ಎರಡು ದಡಗಳ ಕಾವ್ಯ ಸೇತುವೆಗೆ ಮನಸ್ವೇಚ್ಛೆಯ ಆಯ್ಕೆಗಳಿರುವುದಿಲ್ಲ. ಅಂತೆಯೇ ಈ ಕವನ ಭಿನ್ನಾಭಿಪ್ರಾಯಗಳನ್ನು ಜೀರ್ಣಿಸಿಕೊಳ್ಳುವ ಮುಕ್ತಾಯ ಪಡೆದಿದೆ :

ಚಳಿಗಾಲದಲ್ಲಿ ಸೆಟೆದುಕೊಂಡಿದ್ದ ತರು
ಬಂದು ನಿಂತಿದೆ ಬೀದಿ ಮಧ್ಯದಲಿ ಸಿಂಗಾರಗೊಂಡ ತೇರು!
ಬೇಡವೆಂದವರಾರು ?
ಹಲಗೆ ಬಾರಿಸಿ, ಕಹಳೆಯೂದಿ, ಸಾಗಲಿ ಮುಂದೆ
ದುಂದು ಮೆರವಣಿಗೆ –
ಓ ಜೀವನವೆ!
ಶುಭಮಸ್ತು ನಿನಗೆ.

ಜೀವನದ ವಿಸ್ತಾರ-ವೈವಿಧ್ಯಗಳ ಅರಿವುಳ್ಳವರು ತಮ್ಮ ನಾಸಾಪುಟದ ರೇಖೆಗನುಗುಣವಾಗಿ ಜಗತ್ತು ಚಲಿಸಬೇಕೆಂಬ ಹಠ ಹೊಂದಿರುವುದಿಲ್ಲ. ಬದುಕಿನ ಮೇಲೆ ತಮ್ಮದೇ ತೀರ್ಮಾನ-ನಿರ್ಣಯಗಳನ್ನು ಹೇರುವುದಿಲ್ಲ; ಬದುಕನ್ನು ಅದರ ಎಲ್ಲ ವಿಸ್ತಾರ-ವೈವಿಧ್ಯಗಳೊಂದಿಗೆ ಗ್ರಹಿಸುವ, ನಿರೂಪಿಸುವ ನಿರ್ಮಮತೆಯ ಮುಕ್ತ ಸಂವಿಧಾನ ಇಲ್ಲಿರುತ್ತದೆ.

ಇದಕ್ಕೆ 'ಎರಡು ದಡ' ಎಂಬ ಕವನವನ್ನು ಗಮನಿಸಿರಿ :

ಮಂಜಿನಾಚೆಗೆ ಜಡೆಗಟ್ಟಿ ಕುಳಿತ ಬೆಟ್ಟದಡಿ ಏಳು -
ಕೊಳ್ಳದಲಿ ಹುದುಗಿದೆ ಭೂತ, ಪಾತಾಳದಿಂದ
ಪುಟಿದು, ನೆಲದ ವಾಸನೆ ಹಿಡಿದು, ಮುಗಿಲ ಕೆಚ್ಚಲ
ಗುಮ್ಮಿ, ಹಗಲ ಬೆಳಕನು ನೆಕ್ಕಿ, ಇರುಳ ಕತ್ತಲೆ -
ಯೊಡನೆ ಬಿದ್ದು ತೆಕ್ಕೆಮುಕ್ಕಿ, ಕಂಡು ಕಾಣದ ಕಾಡು -

ಮೇಡಿನ ನೂರು ಝುರಿ-ತೊರೆಗೆ ಸೊಕ್ಕಿ, ಉಕ್ಕಿ ಹರಿ -
ದಿದೆ ಊರೂರು ಮೈಗೆ ತಾಗಿ ತಿಕ್ಕಿ. ಹೊಸನೀರು
ಹಳೆನೀರ ಕೊಚ್ಚಿ ಹುಚ್ಚೆದ್ದು ಎರಡೂ ದಡವ ಬಾಚಿ
ಬಗ್ಗಡವಾಗಿ, ತಟಸ್ಥ ತರು-ಮರದ ಬೇರಿಗೂ
ಕೈಚಾಚಿ ಉರುಳಿ ಹೊರಳಾಡಿ ಮೈತುಂಬ ರಾಡಿಯ
ಬಡಿದು, ಈಗೀಗ ಶರತ್ಕಾಲದ ನಿಧಿಧ್ಯಾಸದಲಿ ಮೆಲ್ಲ
ತಿಳಿಗೊಂಡಿಹುದು.

ದೂರ ದಿಗಂತದಲ್ಲಿ ಗರಗಸದ ಹಲ್ಲುಗಳಂತೆ ತೋರುವ ಗಿರಿಶ್ರೇಣಿಗೂ ಊರೂರುಗಳ ಬಗ್ಗಡ-ತಿಳಿನೀರಿಗೂ ಇರುವ ಸರಪಳಿ ಸಂಬಂಧವನ್ನು ಹಸಿರು ಪಿರಮಿಡ್ಡಿನ ಹಿನ್ನೆಲೆಯಲ್ಲಿ ಸರಳ-ಸುಂದರವಾಗಿ ಹೇಳುತ್ತಲೇ ಸಂಕೀರ್ಣ ದರ್ಶನವನ್ನು ನೀಡುತ್ತಿರುವ ಈ ಕವನವನ್ನು ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯ – ಯಾವುದಕ್ಕೆ ಸೇರಿಸೋಣ ? ಈ ಪ್ರಶ್ನೆಯ ಹಿಂದೆ ವ್ಯವಸ್ಥಿತವಾಗಿ ಬೇರೂರಿದ ಸಾಹಿತ್ಯಕ ಪುರೋಹಿತಶಾಹಿಯ ಬಿಗಿ ಹಿಡಿತವನ್ನು ಸಡಲಿಸುವ ದೃಷ್ಟಿಯಿದೆಯೆಂಬುದನ್ನು ಸಹೃದಯರು ಮನಗಾಣಬೇಕು.

ಆಧುನಿಕ ಜೀವನಕ್ರಮದಿಂದ ತಪ್ಪಿಸಿಕೊಂಡು ಗುಹಾಮಾನವನ ಜೀವನಶೈಲಿಯನ್ನು ಅಳವಡಿಸಿಕೊಳ್ಳಲು ಯಾರಿಗೂ ಸಾಧ್ಯವಿಲ್ಲ, ಆದರೆ, ಆಧುನಿಕತೆಯ ವಿಕಾರಗಳನ್ನು ಅರಿತು ಮೀರುವ ಬಗೆಯನ್ನು ಧ್ವನಿಪೂರ್ಣವಾಗಿ ನಿರೂಪಿಸಲಾಗಿದೆ :

ಮಳಲ ದಂಡೆಯಲಿ ಕುಸಿದಿವೆ ಕಾಲು, ಆಚೆ ತೋಪಿನಲಿ
ಕೋಗಿಲೆಯ ಜೋಗುಳ ಲಾಲಿ, ಎದುರಿಗೆ ನೀರ
ಭೋರ್ಗರೆತ : ಎಳೆತ-ಸೆಳೆತ : ಸ್ವಚ್ಛಂದ ಛಂದೋಬಂಧ
ಕ್ಷಿತಿಜದಂಚಿಗೆ ಕಡಲ ಕುಡಿವೆನೆಂದು, ಹಿಡಿದು ಕಡೆವೆ-
ನೆಂದು, ತಳ ಸೋಸಿ ಮುತ್ತುಗಳ ಪಡೆವೆನೆಂದು.

ಎರಡು ದಡಗಳ ನಡುವೆ ಹಾಯಿಬಿಚ್ಚಿವೆ ದೋಣಿ
ಮುಳುಗಿ ಮಿನುಗಾಡುತಿವೆ ಮೀನು; ದೂರ ನೀಲ ಶ್ರೇಣಿ.

ದೂರದೃಷ್ಟಿಯಿಲ್ಲದ ಆಧುನಿಕ ಜೀವನಶೈಲಿಯ ಕುಸಿತ, ಭೋರ್ಗರೆತ, ಸ್ವಚ್ಛಂದತೆಲೊಂದಿಗೆ, ಆಧುನಿಕರ ಭೋಗಾಕಾಂಕ್ಷೆ - ತೀರದ ದಾಹ - ಲೋಲುಪಭಾವಗಳನ್ನು ಸಾಗರಭಾಷೆಯ ಮೂಲಕ ಹೇಳುತ್ತಿರುವುದನ್ನಿಲ್ಲಿ ಗ್ರಹಿಸಬೇಕು. ಕಡಲನ್ನು ತುತ್ತುವ ಅಗಸ್ತ್ಯ ದಾಹ ಮತ್ತು ಮೀನಿನ ತಟಸ್ಥ ತಲ್ಲೀನತೆಗಳೇ ಈ ಕವನದ ಎರಡು ದಡಗಳೆಂಬುದು ಭಾವೋಜ್ವಲ ಸತ್ಯವಾಗಿದೆ. ವೇಗ - ನಿಧಾನ, ಸಶಬ್ದ - ನಿಶ್ಶಬ್ಧ, ಬೃಹತ್ತು - ಕಿಂಚಿತ್ತುಗಳೆಂಬ ಎರಡು ದಡಗಳನ್ನು ದ್ವಂದ್ವಾತ್ಮಕ ನೆಲೆಯಲ್ಲಿ ನಿರೂಪಿಸಿರುವ 'ಎರಡು ದಡ' ಕಣವಿಯವರ ಬಹುಮುಖ್ಯ ಕವನವಾಗಿದೆ.

೩

ನಿಸರ್ಗ ಮತ್ತು ಸಂಸ್ಕೃತಿಗಳ ನಡುವಣ ಮುಖಾಮುಖಿ ಜಿ. ಎಸ್. ಎಸ್. ಮತ್ತು ಕಣವಿ ಕಾವ್ಯದ ಸಾಧಾರಣ ಧರ್ಮವೆನ್ನಬಹುದು. ಕಣವಿಯವರ 'ಋತು ಸಂಸಾರ' ಕವನವನ್ನು ಪರಿಶೀಲಿಸೋಣ. 'ಋತು ಸಂಸಾರ' ಎಂಬ ಶೀರ್ಷಿಕೆಯೇ ಇಡೀ ಕವನದ ಆಶಯವನ್ನೂ, ಸ್ವರೂಪವನ್ನೂ ಸಮರ್ಥವಾಗಿ ಸೂಚಿಸುತ್ತದೆ. 'ಋತು' ನಿಸರ್ಗದ ವಿದ್ಯಮಾನ, 'ಸಂಸಾರ'ವು ಮಾನವ ನಿರ್ಮಿತ ಸಂಸ್ಕೃತಿಯ ಫಲ. ಋತು ಮತ್ತು ಸಂಸಾರಗಳ ಮಿಲನ ಪ್ರಕೃತಿ - ಸಂಸ್ಕೃತಿಗಳ ಸಂಯೋಜನೆಯ ಸೂಚಕವಾಗಿದೆ. ''ನರನ ಒಂದೊಂದು ಕೃತಿ - ವಿಕೃತಿ ಋತು ಋತುವಿನೊಡನಿಂತು ಬೆಸುಗೆಯಾಗಿ'' – ಎಂಬ ಕವನದ ಕೊನೆಯ ಸಾಲುಗಳು ಕೂಡ ಪ್ರಕೃತಿಯ ಲಯಕ್ಕನುಗುಣವಾಗಿ ಬದಲಾಗುವ ಮಾನವ ಜೀವನದ ಅವಸ್ಥಾಂತರಗಳನ್ನು ಹೇಳುತ್ತಿದೆ. ಈ ಕವನದಲ್ಲಿರುವ ನಾಲ್ಕು ಭಾಗಗಳು ಕ್ರಮವಾಗಿ ಚಳಿಗಾಲ (ವೃದ್ಧಾಪ್ಯ) – ಬೇಸಗೆ (ಹದಿಹರೆಯ) - ಗಾಳಿಕಾಲ (ಯೌವನ) - ಮಳೆಗಾಲ (ದಾಂಪತ್ಯ)ಗಳನ್ನು ಪರಸ್ಪರ ಬೆಸೆಯುತ್ತಾ ಎಲ್ಲಾ ಒಂದೇ ಎಂಬಂತೆ, ಅದ್ವೈತ ಭಾವದಿಂದ ಪ್ರಕೃತಿ-ಸಂಸ್ಕೃತಿಗಳ ಸಂಯೋಜನೆಯನ್ನು ನಿರೂಪಿಸುತ್ತಿದೆ.



೨೮-೦೬-೨೦೦೩ಕ್ಕೆ ಕವಿ
ಚನ್ನವೀರ ಕಣವಿಯವರಿಗೆ
ಎಪ್ಪತ್ತೈದು ವರ್ಷವಾಗುವ
ಸಂದರ್ಭದಲ್ಲಿ
'ಹೊಸತು' ಅವರಿಗೆ
ಶುಭಾಶಯ ಕೋರುತ್ತದೆ.

ಮೊದಲ ಮೂರು ಭಾಗಗಳಲ್ಲಿ ಕಂಡುಬರುವ ಒಬ್ಬಂಟಿಯಾದ ಮುದುಕಿ, ಒಬ್ಬೊಂಟಿಯಾದ ಕಾಲೇಜು ಹುಡುಗ, ಒಬ್ಬೊಂಟಿಯಾದ ಸಂತೆಯ ಹೋರಿಗಳು ಬದುಕನ್ನು ಒಳಗೊಳ್ಳುವ ಕ್ರಮದ ವಿವರಗಳಿವೆ. ನಾಲ್ಕನೆಯ ಭಾಗ ಮಾತ್ರ ಇಂಥ ಒಬ್ಬಂಟಿತನವನ್ನು ಮೀರಿದಂತೆ, ಆಕಾಶ (=ಗಂಡು) ಮತ್ತು ಭೂಮಿ (=ಹೆಣ್ಣು)ಗಳ ದಿವ್ಯ ದಾಂಪತ್ಯವನ್ನೂ, ಇದರ ಫಲವಾದ ಸಮೃದ್ಧಿಯನ್ನೂ ಹೇಳುತ್ತಿದೆ. ಇಲ್ಲಿ ಕಂಡುಬರುವ ಮುದುಕಿಯು ಚಳಿಗಾಲದ ಸಂಕೇತ ! ಮಗಳ ಮನೆಯಲ್ಲಿ ಮೂರು ತಿಂಗಳು ಕಳೆಯುವ ಈಕೆಯ ಪರಿ ಚಳಿಗಾಲವನ್ನೇ ಹೋಲುವಂತಹುದು. ಗಾಳಿಯಲ್ಲಿ ಹಾರಿಹೋಗುವ ಬತ್ತಿದೆಲೆ, ಗದಗುಟ್ಟಿ ನಡುಗಿ ಕಟಕಟ ಹಲ್ಲು ಕಡಿಯುವ ಮಂದಿ – ಇವೆಲ್ಲ ಚಳಿಗಾಲದ ರಗಳೆಯ ವಿವರಗಳಾಗಿರುವುದರ ಜೊತೆಗೆ ಮುದುಕಿಯ ಕೌಟುಂಬಿಕ ಸಂಬಂಧಗಳನ್ನೂ ಸೂಚಿಸುತ್ತಿವೆ.

'ಕಾಲೇಜು ಕಟ್ಟೆಯ ಹುಡುಗ' – ಬಾಳಬೇಸಗೆಯ ವಸಂತ ಮಾಸದ ಸಂಕೇತ. ಕನಸು - ಪ್ರಣಯ - ಶೃಂಗಾರದ ವಿವರಗಳಿಲ್ಲಿವೆ. ಇವನದು ಸ್ವವಿರಚಿತ ಜಗತ್ತು. ಕನಸುಗಳ ತೋರಣ, ನಿತ್ಯ ಸ್ವಗತ, ಎದೆಯ ಬಾಗಿಲು, ಮನದ ಮಹಡಿ ಇವೆಲ್ಲ ಇವನ ಏಕ ಮಾತ್ರ ಜಗತ್ತಿನ ವಿವರಗಳಾಗಿವೆ. ಯೌವನದ ಅಭದ್ರತೆ, ಆಕರ್ಷಣೆಗಳ ನಶ್ವರತೆ, ಬಾಳಿನ ಸಂಯಮದ ಅನಿವಾರ್ಯತೆಗಳನ್ನಿಲ್ಲಿ ನುಗ್ಗೆ ಹೂವಿಗೆ ಲಗ್ಗೆಯಿಟ್ಟ ದುಂಬಿ, ಕರ್ಪೂರ ಗೊಂಬಿ, ತಾಳಲಾರದ ಬಿಸಿದು ರಕ್ತನಾಡಿ ಎಂಬಂಥ ನುಡಿಗಳ ಮೂಲಕ ಅಭೇದ ಕಲ್ಪನೆಯಲ್ಲಿ ಅಭಿವ್ಯಕ್ತಿಸಲಾಗಿದೆ.

ಮೂರನೆಯ ಭಾಗದಲ್ಲಿ ಗಾಳಿಕಾಲದ ಭರಾಟೆ - ಆರ್ಭಟಗಳನ್ನು ಕೃಷಿ ಪ್ರತಿಮೆಗಳ ಮೂಲಕ ಸೂಚಿಸಲಾಗಿದೆ. ಇಲ್ಲಿ ಕಂಡುಬರುವ 'ಗಾಳಿ ಗೂಳಿ'ಯ ವಿವರಗಳು ನಿಸರ್ಗಕ್ಕೆ ಅನ್ವಯಿಸುವಂತೆಯೇ ಮಾನವ ಜೀವನದ ಯೌವನಕ್ಕೂ ಅನ್ವಯಿಸುತ್ತವೆ. ಯೌವನದ ಉತ್ಕಟದಾಹ, ಆಲಸ್ಯಭಾವ, ವ್ಯರ್ಥ ಕಾಲಹರಣಗಳನ್ನು ತೇಕುತ್ತಿರುವ ತಳಿರು ನಾಲಗೆ, ಮೈ ಚಾಚಿ ಮಲಗಿರುವ ನೆರಳು, ಓಡುತ್ತಿರುವ ಬಿಸಿಲು ಗುದುರೆಗಳು ಬಹುಚೆನ್ನಾಗಿ ಬಿಂಬಿಸುತ್ತವೆ.

ಕವನದ ಕೊನೆಯ ಭಾಗದಲ್ಲಿ ಭೂಮಿ - ಆಕಾಶಗಳ, ಮರ್ತ್ಯ - ಅಮರ್ತ್ಯಗಳ, ಮಣ್ಣು-ಮಳೆಗಳ ದಿವ್ಯ ಮಿಲನವಿದೆ. ನರನ ಒಂಟಿ ಬಾಳು ದಾಂಪತ್ಯದಿಂದ ಪಡೆದುಕೊಳ್ಳುವ ಸಾರ್ಥಕತೆಯನ್ನು ಇಲ್ಲಿ ಕಾಣಬಹುದು. ''ಜಗದ ಧೂಳು ತೊಡೆದು ಧಾರೆ ಎರೆಯುತ ಬಂದ ನವ ನೀರದ'' – ಎಂಬ ನಿಸರ್ಗರೂಪಕವು ಜಡ್ಡುಗಟ್ಟಿದ ಬಾಳನ್ನು ಬೆಳಗುವ ನವ ಚೈತನ್ಯಕ್ಕೂ ಅನ್ವಯಿಸುತ್ತದೆ. ಜಗದ ಪ್ರೀತಿಯ ಮೂಲಕ ಜೀವನ ಪ್ರೀತಿಯನ್ನು ಹೇಳುತ್ತಿರುವ 'ಋತು ಸಂಸಾರ'ವು ಪ್ರಕೃತಿ-ಸಂಸ್ಕೃತಿಯ ಗತಿಶೀಲತೆಗಳನ್ನು ಒಟ್ಟೊಟ್ಟಿಗೆ ಹೇಳುತ್ತಿದೆ. ಈ ಗತಿಶೀಲತೆಯಲ್ಲಿ ನಿರಂತರ ಚಲನೆ - ಪರಸ್ಪರ ವೈರುಧ್ಯ - ಪರಿವರ್ತನೆಗಳಿರುತ್ತವೆಯೆಂಬ ದೃಷ್ಟಿ - ಧೋರಣೆಗಳನ್ನಿಲ್ಲಿ ಮನಗಾಣಬಹುದು.

ಆಧುನಿಕತೆಯ ಅಗಸ್ತ್ಯ ದಾಹದ ಪ್ರಸ್ತಾಪ 'ಎರಡು ದಡ' ಕವನದಲ್ಲಿರುವುದನ್ನು ಆಗಲೇ ವಿಶ್ಲೇಷಿಸಲಾಗಿದೆ. ಈ ಅಗಸ್ತ್ಯ ದಾಹದ ಪ್ರತಿಮೆ 'ಚಿರಂತನದಾಹ'ವೆಂಬ ಕವನದಲ್ಲೂ ಕಾಣಿಸಿಕೊಳ್ಳುತ್ತದೆ. ಹೊಗೆ ನಟ್ಟುಹೋಗಿರುವ ಮನಸ್ಸು, ಸುಣ್ಣ ಬಣ್ಣವಿಲ್ಲದ ಗೋಡೆ, ಜೇಡಬಲೆ ನೂತಿರುವ ಬೆಳಕಿಂಡಿಯಲಿ ''ಬೆಳಕದೆಂತುಬಹುದು ?'' – ಎಂಬ ಪ್ರಶ್ನೆ ಇಲ್ಲಿದೆ. ''ಜಗವ ತುಂಬಿದ ಬೆಳಕು ನಮಗೇಕೋ ಸಾಲದಿದೆ. ಎನಿತು ಮಾನವ ನೆದೆಯ ಆಳ ಅಗಲ'' – ಎಂಬ ಚಿಂತನೆಯೂ ಇಲ್ಲಿದೆ. ಬೆಳಕಿನ 'ಚಿರಂತನ ದಾಹ'ವಿಲ್ಲದಿದ್ದರೆ, ಆಧುನಿಕ ಜೀವನ ಶೈಲಿ ಭವಿಷ್ಯದಲ್ಲಿ ಎದುರಿಸುವ ದುರಂತವೇನೆಂಬುದನ್ನು ಈ ಸಾಲುಗಳು ಪರಿಣಾಮಕಾರಿಯಾಗಿ ಹೇಳುತ್ತಿವೆ :

ಪಂಚಭೂತಗಳೆಲ್ಲ ಮಾನವನ ದೇಹದಲಿ-
ಹೊಂಚುಹಾಕುತ ದಾರಿ ಕಾಯುತಿಹವು;

ಕಿಂಚಿತಾದರೂ ಕರುಣೆ ಕೊನರೊಡೆದು ಬಾರದಿರೆ
ಈ ಪ್ರಪಂಚವೆ ಚಿತೆಯನೇರಲಿಹುದು.

ಪರಿಸರ ಮಾಲಿನ್ಯ, ಪರಿಸರ ಚಳುವಳಿ ಮುಂತಾದ ರಾಜಕೀಯ ವಾಸನೆಯುಳ್ಳ ಪರಿಭಾಷೆಗಳ ಮಾತಿಲ್ಲದೆಯೂ ಇಲ್ಲಿ ಸಾಧಿಸಿರುವ 'ಹಸಿರು ಕಾಣ್ಕೆ' ವಿಶಿಷ್ಟವಾಗಿದೆ. ಬಾಗಿಲ ತೆರೆದು ಬೆಳಕು ಹರಿದು – ಎಂಬ ಕವಿ ಬೇಂದ್ರೆಯವರ ಬೆಳಕಿನ ಧಾರೆಗೆ ಅಡ್ಡಿಯುಂಟಾಗುವಂತೆ ಇಲ್ಲಣಗಳು, ಜೇಡರಬಲೆಗಳು ನಿರ್ಮಾಣವಾಗಿರುವುದನ್ನು ಗಮನಿಸಿದರೆ, ಕವಿಯೊಡನೆ ಕವಿ ನಡೆಸುವ ಸಂವಾದದ ಹೊಳಹು ಕಾಣಿಸುತ್ತದೆ.

೪

'ಶಬ್ದ-ನಿಶ್ಶಬ್ದ' – ಕಣವಿಯವರ 'ಶಿಶಿರದಲ್ಲಿ ಬಂದ ಸ್ನೇಹಿತ' ಸಂಕಲನದ ಕವನವಾಗಿದೆ. ರಾಮಮಂತ್ರ, ಮಂದಿರ ಮಂತ್ರಗಳೆಂಬ ಶಬ್ದ ಸಾಧನಗಳಿಂದ ವಿಜೃಂಭಿಸುತ್ತಿರುವ ರಾಜಕೀಯ, ಹೆಚ್ಚುತ್ತಿರುವ ಕೋಮುವಾದಗಳಿಗೆ ಪ್ರತಿದ್ವಂದ್ವಿಯಾಗಿ ನಿಶ್ಶಬ್ದ ಧ್ಯಾನದ ಮಹತ್ವವನ್ನು ಸಾರುವ ಆಶಯ ಈ ಕವನದಲ್ಲಿದೆ. ವಾಲ್ಮೀಕಿಯ ಪೂರ್ವಾಶ್ರಮದ 'ಮರಾ' ಮಂತ್ರಕ್ಕೂ ಅಯೋಧ್ಯೆಯ ರಾಜಕೀಯವೆನ್ನಬಹುದಾದ 'ರಾಮ' ಮಂತ್ರಕ್ಕೂ ಮುಖಾಮುಖಿಯಿದೆ. ಈ ಕವನದಲ್ಲಿ ಇದಕ್ಕಿಂತಲೂ ಬಹುಮುಖ್ಯವಾದದ್ದೆಂದರೆ, ಅಗ್ನಿ ಸಂಸ್ಕೃತಿ ಮತ್ತು ಜಲ ಸಂಸ್ಕೃತಿಗಳ ಮುಖಾಮುಖಿಯು ಹೀಗಿದೆ :

ಸೇಡಿನ ಹೋಮ ಹವನಕ್ಕೆ ಪ್ರೀತಿ, ಮೈತ್ರಿಯ ಕವನ
ಎಲ್ಲಾ ಆಹುತಿಯಾಗಿ ಹೋದ-
ವಲ್ಲಾ
ತಿಳಿವಿನ ತುಪ್ಪ ಸುಟ್ಟ ಕಮಟು ವಾಸನೆಯಲ್ಲಿ
ಶ್ವಾಸೋಚ್ಛ್ವಾಸಕ್ಕೆ ಕೂಡ ದಾರಿಯಿಲ್ಲ.
ಗೂಢ ಗುಮ್ಮಟದೊಳಗೆ
ಗುಟುಕಿಟ್ಟು, ಪಟ ಪಟ ರೆಕ್ಕೆ ಬಡಿವಾಗ
ಬಿಳಿ ಪಾರಿವಾಳ,
ಸುತ್ತಿಗೆ ಹಿಡಿದು ಬಡಿದು ಕತ್ತರಿಸಿ
ತಾಯ ಮೊಲೆ ತೊಟ್ಟು
(ಮಕ್ಕಳಿವರೇನಮ್ಮ... ಮಕ್ಕಳಿವರೇನಮ್ಮ)
ಚರಿತ್ರೆಯ ಪುಟ ಪುಟದಲ್ಲಿ ಮತ್ತೆ
ರಕ್ತ ತಟಗುಟ್ಟಿ
ಸರಯೂ ನದಿಯು ಮುಂದೆ ಹರಿಯಲಿಲ್ಲ.

ಅಗ್ನಿಸಂಸ್ಕೃತಿಯ ಪ್ರತಿಷ್ಠಾಪನಾಚಾರ್ಯರಾದ ಪುರೋಹಿತಶಾಹಿಯ ಅನರ್ಥ ಪರಂಪರೆಯನ್ನು ಅದೇ ಅಗ್ನಿರೂಪಕದ ಮೂಲಕ ಹೇಳುತ್ತಾ ಪ್ರೀತಿ - ಮೈತ್ರಿಗಳ ಆಹುತಿ, ಉಸಿರುಕಟ್ಟುವ ವಾತಾವರಣಗಳನ್ನು ಬಿಂಬಿಸಿರುವ ಬಗೆ ಧ್ವನಿಪೂರ್ಣವಾಗಿದೆ. ಹೋಮ ಹವನಗಳಿಗೆ ಸಂಬಂಧಿಸಿದ ಈ ಅಗ್ನಿರೂಪಕ ಮುಂದುವರಿದು ಲೋಹಶಾಲೆಯ ಕಮ್ಮಟದ ಚಿತ್ರವನ್ನು ಕೊಡುತ್ತದೆ: ''ಸುತ್ತಿಗೆ ಹಿಡಿದು ಬಡಿದು ಕತ್ತರಿಸಿ'' – ಎಂಬ ಮಾತುಗಳಲ್ಲಿ ಲೋಹಶಿಲ್ಪದ ನಿರ್ಮಾಣದ ಧ್ವನಿಯಿದೆ. ಆದರೆ ಇದರಿಂದ ಚರಿತ್ರೆಯ ಪುಟಗಳಲ್ಲಿ ಮತ್ತೆ ಮತ್ತೆ ರಕ್ತ ತೊಟ್ಟಿಕ್ಕಿದೆಯೇ ಹೊರತು, ಜೀವನದಿ ಮುಂದೆ ಹರಿಯಲಿಲ್ಲವೆಂಬ ಗ್ರಹಿಕೆಯಲ್ಲಿ 'ಜಲಸಂಸ್ಕೃತಿ'ಯು ಎದುರಿಸಬೇಕಾದ ಬಿಕ್ಕಟ್ಟಿನ ನೆಲೆಗಳಿವೆ. ಈ ಕವನದ ಕೊನೆ ಹೀಗಿದೆ :

ಬೆಂಕಿಯಾರಿಸಿ ಕಣ್ಣೀರನೊರೆಸಿ ಅಕಲಂಕವಾಗಿ
ಬನ್ನಿ ಬನ್ನಿ ಕನಸುಗಳೇ ಮರಳಿ ತಲೆಯ ಗುಮ್ಮಟಕೆ
ಕಾದಿರುವ ಹೃದಯ ಕಮ್ಮಟಕೆ :
ಸೌಹಾರ್ದದ ಮುದ್ರೆ ಪಡೆದು ಚಲಾವಣೆಯಾಗಿ
ದೇಶದುದ್ದಗಲಕ್ಕೂ ಸಂಚರಿಸಿ
ಸಮ... ರಸ... ಧ್ವನಿಯಾಗಿ.

ಯಾಗ ಪ್ರಧಾನ, ವಿಗ್ರಹ ಪ್ರಧಾನ ಅಗ್ನಿ ಸಂಸ್ಕೃತಿಯು ಅಳಿದು ಹೃದಯ ಪರಿವರ್ತನೆಗೆ ಒಳಗಾಗಬೇಕೆಂಬುದನ್ನು ಇಲ್ಲಿ ನಾಣ್ಯಗಳ ನಿರ್ಮಾಣ ಮತ್ತು ಚಲಾವಣೆಯ ರೂಪಕದ ಮೂಲಕ ಹೇಳಲಾಗಿದೆ. ಬುದ್ಧಿ-ಭಾವಗಳು ಸೌಹಾರ್ದದ ಮುದ್ರೆ ಪಡೆದು ಚಲಾವಣೆಯಾಗಬೇಕು, ನಾಡಿನಾದ್ಯಂತ ಸಂಚರಿಸಬೇಕೆಂಬ ಸದಾಶಯವೂ ಇಲ್ಲಿದೆ.

ಕೊನೆಯದಾಗಿ, 'ನಂಬಿಕೆ' ಎಂಬ ಕವನವನ್ನು ನೋಡಬಹುದು. ಕಣವಿಯವರ ಕಾವ್ಯವು ನಿಸರ್ಗ ಭಾಷೆಯಲ್ಲಿ ಬರೆಯುವ ರಚನೆಗಳೆಂಬುದನ್ನು ಆರಂಭದಲ್ಲೆ ಪ್ರಸ್ತಾಪಿಸಿದ್ದೇನೆ. ನಿಸರ್ಗವನ್ನೆ 'ಪ್ರಿಸಂ' ಮಾಡಿಕೊಂಡು ಸಂಸ್ಕೃತಿಯ ಬಗೆ ಬಗೆ ಬಣ್ಣಗಳನ್ನು ಬಗೆದುನೋಡುವ ಮನೋಧರ್ಮವನ್ನೆ 'ನಿಸರ್ಗಭಾಷೆ'ಯೆಂದು ಇಲ್ಲಿ ಕರೆದಿದ್ದೇನೆ. ಆಕಾಶ ಮತ್ತು ಭೂಮಿಗಳ ಒಡನಾಟ, ನಿರಂತರ ನಂಟನ್ನು ಹೇಳುವ ಈ ಸಾಲುಗಳಿಂದ ಕವನ ಆರಂಭವಾಗುತ್ತದೆ :

ಅನಂತವೆಂದರೂ ಆಕಾಶಕೊಂದು ಆಕೃತಿಯುಂಟು
ನೀಲವೆಂದರೂ ನೂರು ಬಣ್ಣದ ಲೀಲೆಗವಕಾಶವುಂಟು.
ಭೂಮಿಯ ಮೇಲೆ ಕಾಲೂರಿ ನಡೆದಿದ್ದರೂ ಇದರ
ಸ್ತರಗಳ ನಡುವೆ ಸ್ಥಿರಗೊಂಡ ಒಡನಾಟ, ನಿರಂತರ ನಂಟು.

ಹಗಲಿನಲ್ಲಿ ಗಿಡಮರಗಳೆಲ್ಲ ಸಂಜೆ ಬಾನಿನ ರಂಗುರಂಗಿನ ಚಿತ್ತಾರವನ್ನು ಪಡೆದಿದ್ದು ರಾತ್ರಿಯಲ್ಲಿ ಕಪ್ಪು ಮುಸುಕಿನೊಳಗೆ ಹುದುಗಿಬಿಡುತ್ತವೆ. ಇರುಳಿನಲಿ ಒಮ್ಮೆಲೇ ಚಿಗುರೊಡೆಯುವ ಬಾನು ತನ್ನ ಅಂತರಂಗವನ್ನೆ ಬಿಚ್ಚಿ ಬಯಲಿಗಿಡುತ್ತದೆ; ಎಚ್ಚರಾಗದಂತೆ ನೆಲದ ಮೈದಡವಿ ಮುದ್ದಿಸುತ್ತದೆ. ಆಗ ಎಲ್ಲರಿಗೂ ನಿದ್ದೆ, ಬೆಳಗು ಜಾವದ ಕನಸು, ಬೆಳಗಾದಮೇಲೆ ಮರೆವು-ನೆನಪು, ಗೆಳೆಯರೊಂದಿಗೆ ತಿರುಗಾಟ – ನಕ್ಕು ನಲಿವಾಟ, ಹೂ ಗಿಡಕೆ ನೀರು ಹಣಿಸುವಾಟ ಇತ್ಯಾದಿಗಳಿರುತ್ತವೆ.

ಮುಂದಿನ ಭಾಗದಲ್ಲಿ ನಿಸರ್ಗದ ಅಜ್ಞಾತ ಚಿತ್ರಗಳನ್ನು ಬಿಂಬಾತ್ಮಕವಾಗಿ ವರ್ಣಿಸುತ್ತಲೇ, ಬಾಳಿನ ಬಗೆ ಬಗೆ ಬಣ್ಣಗಳನ್ನು ಪರಿಚಯಿಸಲಾಗಿದೆ: ಯಾರಿಗೂ ಕಾಣದಂತೆ ಬೇರುಗಳಿಂದ ರಸ ಹೀರಿ ನಿಂತ ಚಿಗುರು, ಎದ್ದ ಬಿರುಗಾಳಿ – ಬಿದ್ದ ಮಳೆಯಲ್ಲಿ ಭೂಗರ್ಭಕ್ಕೆ ಜಿನುಗಿದ ಅಂತರ್ಜಲ, ಬೇಲಿಗುಂಟ ಹೊಮ್ಮಿದ ಕಿಲಕಿಲ ಹೂನಗೆ, ನಿರ್ಮಲವಾಗಿ ನಿಂತ ಮೋಡ ಇನ್ನೆಲ್ಲೊ ಇಳಿದಾಗ ಗುಟುಕರಿಸುವ ಭೂಮಿ, ಅಂತರಿಕ್ಷದಲ್ಲಿ ಮಿಂಚುವ ಹೊಳಪು, ಯಾವುದೋ ಗಳಿಗೆಯಲ್ಲಿ ಹಠಾತ್ತನೆ ಹೊಳೆವ ಒಂದೊಂದು ಅನ್ನಿಸಿಕೆ, ಗಿರಿಮುಡಿಯ ಕಲ್ಲುಬಂಡೆಯಲ್ಲಿ ಚಿಲ್ಲನೆ ಚಿಮ್ಮುವ ಬುಗ್ಗೆಯ ಅಜ್ಞಾತ ಪಯಣ – ಇವು ತರ್ಕಬದ್ಧ ವಿಶ್ಲೇಷಣೆಗೆ, ಪುರೋಹಿತಶಾಹಿಯ ಬೌದ್ಧಿಕ ವ್ಯವಸ್ಥೆಗೆ ದಕ್ಕುವುದಿಲ್ಲ. ಜೀವನವು ಒಂದು ಜೇಂಗೊಡವಿದ್ದಂತೆ! ಪ್ರತಿದಿನ ಹೂಗಳನ್ನು ಹೀರಿದವರು ಯಾರು ? ಪತ್ತೆಯಿಲ್ಲದ ಹಾಗೆ ಜೇನು ಬಿಡಿಸಿಕೊಂಡವರು ಯಾರು ? ಈ ಜೇಂಗೊಡವನ್ನು ಕಂಡು ಅಚ್ಚರಿಗೊಂಡರೂ ಅವಸರ ಪಡುವ ಹಾಗಿಲ್ಲ, ಏಕೆಂದರೆ ಅದು ಜೇನು! ದಾಹ ತೀರಿಸಲು ನೀರಲ್ಲ, ಮತ್ತು ಬರಿಸುವ ಮದ್ಯವಲ್ಲ. ಬಾಳಿನ ಸವಿಯಲ್ಲಿ ಪಾಲ್ಗೊಳ್ಳಬೇಕಾದರೆ ವೇಗಕ್ಕೆ ಬದಲು ನಿಧಾನ, ಸಶಬ್ದಕ್ಕೆ ಬದಲು ನಿಶ್ಶಬ್ದ ಬೃಹತ್ತಿಗೆ ಬದಲು ಕಿಂಚಿತ್ತು ಬದುಕಿನ ಹಾದಿಯಲ್ಲಿ ಗುರಿಯಾಗಬೇಕು. ''ಅಂಗೈಯಲ್ಲಿ ಹನಿ ಹನಿ ಹಾಕಿ, ನೆಕ್ಕಿ ನಾಲಿಗೆ ತುಂಬ ಸವಿದು, ಕಣ್ಮುಚ್ಚಿ ತೆರೆಯಬೇಕು'' – ಎಂಬ ಸಾಲುಗಳಲ್ಲಿ ನಿಧಾನ, ನಿಶ್ಶಬ್ದ, ಕಿಂಚಿತ್ತುಗಳ ಸಾರಸತ್ವವಿದೆ.

''ನನ್ನ ನಂಬಿಕೆಯೊಂದು ಆಕಾಶ; ನಿಜ, ಅದಕೆ ತಳಬುಡವಿಲ್ಲ'' ಎಂಬ ಸಾಲಿನೊಂದಿಗೆ ''ಅನಂತವೆಂದರೂ ಆಕಾಶಕೊಂದು ಆಕೃತಿಯುಂಟು'' ಎಂಬ ಮೊದಲ ನುಡಿಯನ್ನು ಹೋಲಿಸಿದಲ್ಲಿ, 'ಆಕಾಶದೈವ'ದ ಅದ್ವಯತೆಯು ಬೋಧೆಯಾಗುತ್ತದೆ. ಆಕಾಶದ ಮೂಲಕ ದೈವವನ್ನು ಕುರಿತ ಚಿಂತನೆ ಇಲ್ಲಿರುವುದು ಸುಸ್ಪಷ್ಟ. ''ನಾನೆಷ್ಟು ಬೆಳೆದರೂ ನನಗೆ ನಿಲುಕುವುದಿಲ್ಲ'' – ಎಂಬ ನುಡಿಯಲ್ಲಿ ಆಧುನಿಕ ಮನುಷ್ಯನ ವಿರಾಟ್ ಸ್ವರೂಪಕ್ಕೆ ಮಿತಿಯೊಂದನ್ನು ಕಲ್ಪಿಸಲಾಗಿದೆ. ''ನಾನೇ ಸೃಷ್ಟಿಕರ್ತ'' ಅಥವಾ ''ನಾನೇ ದೇವರು'' ಎಂದು ಬೀಗುವ ಅದ್ವೈತದ ಅಹಂಕಾರವು ಇಲ್ಲಿ ನಿರಾಕರಿಸಲ್ಪಟ್ಟಿದೆ. 'ಆಕಾಶ'ವನ್ನು ದೂರದಿಂದಲ್ಲದೆ, ನಾನು ಅದನ್ನು ಮುಟ್ಟಿ ಅನುಭವಿಸಿಲ್ಲ – ಎಂಬ ಮಾತು ಕೈಗೆಟುಕದ ಆಕಾಶದೈವದ ಅಭಿವ್ಯಕ್ತಿಯೇ ಆಗಿದೆ. ಯೌವನದ ರಭಸಮತಿಗೆ ಊರ್ಧ್ವಗಾಮಿತ್ವದ ಲಕ್ಷ್ಯವಿರುವುದಿಲ್ಲ:

ಮೇಲೆ ನೋಡದೆ, ಸೆಟೆದುಕೊಂಡೇ
ನಡೆದರೂ ಅದು ಸದಾ ನನ್ನ ತಲೆಯಮೇಲೆ
ಹಗಲು ಹೊತ್ತಿನಲಿ ಅದರೆಡೆಗೆ ಲಕ್ಷ್ಯವಿಲ್ಲ.

''ನಮ್ಮ ಬದುಕಿನಲಿ ನಾವು ಮಗ್ನರಾದರೆ ಸಾಕು, ಅದಕೆ ಚಿಂತೆಯಿಲ್ಲ'' ಎಂಬ ನುಡಿಯಲ್ಲಿ ಬಾಳಿನ ಸಮರಸ ಧ್ವನಿಯಿದೆ. ಆದರೆ ಸಂಕಟ ಬಂದಾಗ, ''ರಾತ್ರಿ ವಿದ್ಯುದ್ದೀಪ ಕೈಕೊಟ್ಟು, ಮಿಣಿ ಮಿಣಿ ಮೇಣಬತ್ತಿ ಹಚ್ಚಿ, ಅಂಜಿ ಆಕಳಿಸುತ್ತ ಕುಳಿತಾಗಲೂ – ಆಕಾಶದಲ್ಲಿ ಹೊಳೆವ ನಕ್ಷತ್ರಕ್ಕೆ ಲೆಕ್ಕವಿಲ್ಲ'' ಆಕಾಶದ ಅಗಣಿತ ದರ್ಶನದಲ್ಲಿ 'ನಂಬಿಕೆ' ಯಾರಿಗೆ ಬೇಡ ?

ವಿ. ಚಂದ್ರಶೇಖರ ನಂಗಲಿ
೩.೨೮೪, ಪಿ. ಸಿ. ಬಡಾವಣೆ, ಕೋಲಾರ - ೫೬೩ ೧೦೧




# ನೀರು ನೀರು ನೀರು

ಡಾ|| ದಯಾನಂದ

**ನೀ**ರು, ನೀರು, ನೀರು..... ಎಲ್ಲೆಲ್ಲಿಯೂ ನೀರಿನ ಹಾಹಾಕಾರ. ಏನಿದು ? ಏಕೀ ಹಾಹಾಕಾರ ? ನೀರು ಪ್ರಕೃತಿಯ ಅದ್ಭುತ ಕೊಡುಗೆಯಾದ ದ್ರವ ವಸ್ತು. ಪೃಥ್ವಿಯಲ್ಲಿ ನೀರಿರುವುದು ಅದರ ವಿಶಿಷ್ಟ ಲಕ್ಷಣ. ಇದರಿಂದ ಈ ಧರೆಯಲ್ಲಿ ಜೀವಿಗಳಿರಲು ಸಾಧ್ಯವಾಗಿದೆ. ಈ ಇಳೆಯ ಎಲ್ಲಾ ಜೀವಿಗಳ ಅಸ್ತಿತ್ವಕ್ಕೆ ನೀರೇ ಮೂಲಾಧಾರ. ಹಾಗಾಗಿ ಈ ಭೂಮಿಯನ್ನು ಜೀವಗ್ರಹವೆಂದೂ ಇಲ್ಲಿರುವ ಜಲವನ್ನು ಜೀವದ್ರವವೆಂದೂ ಬಣ್ಣಿಸಲಾಗಿದೆ.

ಪೃಥ್ವಿಯಲ್ಲಿ ಅಪಾರ ಪ್ರಮಾಣದ ನೀರಿದ್ದರೂ ಮಾನವನ ಬಳಕೆಗೆ ಲಭ್ಯವಿರುವ ಶುದ್ಧ ನೀರಿನ ಪ್ರಮಾಣ ದಿನೇ ದಿನೇ ಕಡಿಮೆಯಾಗುತ್ತಿದೆ ! ಈ ಭುವಿಯ ಒಟ್ಟು ವಿಸ್ತೀರ್ಣದಲ್ಲಿ ಶೇ. ೭೧ರಷ್ಟು ಭಾಗ ಜಲಾವೃತವಾಗಿದ್ದರೆ ಉಳಿದದ್ದು ಭೂಭಾಗವಾಗಿದೆ. ಭೂಮಿಯ ಮೇಲೆ ಬೀಳುವ ಮಳೆ ನೀರಿನ ಸಿಂಹಪಾಲು ತಗ್ಗಿನ ಕಡೆಗೆ ಹರಿದು ಕಡಲು ಸೇರುತ್ತಿದೆ. ಕಡಲುಗಳಲ್ಲಿ ಭೂಮಿಯ ಒಟ್ಟು ನೀರಿನ ದಾಸ್ತಾನಿನಲ್ಲಿ ಶೇ. ೯೭ರಷ್ಟು ನೀರಿದ್ದರೆ, ಧ್ರುವಗಳಲ್ಲಿ ಹಿಮದ ಗೆಡ್ಡೆಗಳ ರೂಪದಲ್ಲಿ ಶೇ. ೨ರಷ್ಟಿದೆ. ಇನ್ನುಳಿದ ಶೇ. ೧ರಷ್ಟು ಪ್ರಮಾಣ (ಶುದ್ಧನೀರು) ನದಿ, ಕೆರೆ-ಕಟ್ಟೆ, ಜಲಾಶಯ ಮತ್ತು ಭೂಮಿಯಲ್ಲಿ ಅಂತರ್ಜಲವಾಗಿ ಸಂಗ್ರಹವಾಗಿದೆ. ಕಡಲುಗಳ ನೀರೆಲ್ಲಾ ಕ್ಷಾರಯುಕ್ತವಾಗಿದ್ದು ಬಳಕೆಗೆ ಯೋಗ್ಯವಾಗಿಲ್ಲ. ಧ್ರುವಗಳ ನೀರು ಹೆಪ್ಪುಗಟ್ಟಿದ್ದು ಬಳಕೆಗೆ ಲಭ್ಯವಿಲ್ಲ. ಅಲ್ಪ ಪ್ರಮಾಣದ ನದಿ, ಕೆರೆ - ಕಟ್ಟೆ ನೀರು ಹಾಗೂ ಅಂತರ್ಜಲವೇ ಜನ-ಜೀವಿಗಳ ಬಳಕೆಗೆ ಅಮೂಲ್ಯವಾದ ಜೀವ ಜಲವಾಗಿದೆ. ಆದರೆ ಈ ಅಮೂಲ್ಯ ಜಲನಿಧಿ ಕ್ಷಿಪ್ರಗತಿಯಲ್ಲಿ ಮಾನವರ ದುಂದು ಬಳಕೆ ಮತ್ತು ದುರ್ಬಳಕೆಗಳಿಂದ ವಿನಾಶದ ಹಾದಿ ಹಿಡಿದಿರುವುದು ಆತಂಕದ ಸಂಗತಿ.

**ನೀರಿನ ಆತಂಕದ ಅಂಕಿ - ಅಂಶಗಳು :** ಗಾಳಿ ಈ ಜೀವಗ್ರಹದ ಜೀವದುಸಿರಾದರೆ, ನೀರು ಜೀವ ದ್ರವ. ಈ ದ್ರವದ ನಿರ್ವಹಣೆಯಲ್ಲಿ ನಾವು ಸೋತಿದ್ದೇವೆ. ಪರಿಶುದ್ಧ ನದಿಗಳಿಂದು ಅಶುದ್ಧವಾಗಿ ತೆರೆದ ಚರಂಡಿಗಳಂತಾಗಿವೆ. ಕೆರೆಗಳು ಹೂಳು ತುಂಬಿ ನಶಿಸುತ್ತಿವೆ. ಅಮೂಲ್ಯವಾದ ಅಂತರ್ಜಲವನ್ನು ನಾವು ಬೇಕಾಬಿಟ್ಟಿ ಹೊರತೆಗೆದು, ಸಿಕ್ಕಾಪಟ್ಟೆ ಹರಿಯಬಿಟ್ಟು ಪೋಲು ಮಾಡುತ್ತಿದ್ದೇವೆ. ಇತ್ತ ನಿಸರ್ಗವೂ ಮುನಿದಿದೆ. ಮಳೆ ಅನಿಶ್ಚಿತವಾಗುತ್ತಿದೆ. ಜಲ ಮೂಲಗಳು ಬತ್ತಿಹೋಗುತ್ತಿವೆ. ಭೂಮಿ ಬರಡಾಗುತ್ತಿದೆ. ಜಲಕ್ಷಾಮದಿಂದ ಈ ಭುವಿಯ ಹಲವು ಭಾಗಗಳು ಬರಗಾಲ ಎದುರಿಸುತ್ತಿವೆ. ಸತತ ಬರಗಾಲದಿಂದ ಜನರು ಬಸವಳಿದು ಬಡತನದ ಬೇಗೆಯಲ್ಲಿ ಬೆಂದು ಹೋಗುತ್ತಿದ್ದಾರೆ. ಪರಿಸ್ಥಿತಿ ಹೀಗೆಯೇ ಮುಂದುವರಿದರೆ ಇಡೀ ಪೃಥ್ವಿ ಮರುಭೂಮಿಯಾಗಬಹುದು. ದಿ ವರ್ಲ್ಡ್ ವಾಚ್ ಇನ್‌ಸ್ಟಿಟ್ಯೂಟ್, ವಿಶ್ವ ಆರೋಗ್ಯ ಸಂಸ್ಥೆ, ಯುನೈಟೆಡ್ ನೇಷನ್ಸ್ ಫುಡ್ ಆ್ಯಂಡ್ ಅಗ್ರಿಕಲ್ಚರಲ್ ಆರ್ಗನೈಸೇಶನ್, ವಿಶ್ವಬ್ಯಾಂಕ್ ಇತ್ಯಾದಿ ಸಂಸ್ಥೆಗಳು ಜಗತ್ತಿನ ನೀರಿನ ಸ್ಥಿತಿಗತಿ ಕುರಿತು ಆಗಿಂದಾಗ್ಗೆ ಅಧ್ಯಯನ ಮತ್ತು ಸಂಶೋಧನೆಗಳಲ್ಲಿ ತೊಡಗಿವೆ. ಇವು ಜಲದ ಪರಿಸ್ಥಿತಿ ಮತ್ತು ಬಳಕೆ ಕುರಿತು ಅಭ್ಯಸಿಸಿ ವರದಿ ಮಾಡಿರುವ ಕೆಲವು ಅಂಶಗಳು ಹೀಗಿವೆ.

೧) ಪ್ರಪಂಚದಲ್ಲಿ ಪ್ರತಿ ವರ್ಷ ಸುಮಾರು ೧೬೪ ಶತ ಕೋಟಿ ಘನ ಮೀಟರ್ ಶುದ್ಧ ನೀರಿನ ಕೊರತೆಯಿದೆ. ಇದರಲ್ಲಿ ಸುಮಾರು ೧೦೪ ಶತಕೋಟಿ ಘನ ಮೀಟರ್ ಶುದ್ಧ ನೀರಿನ ಕೊರತೆ ಭಾರತದಲ್ಲಿಯೇ ಇದೆ.

೨) ಜಗತ್ತಿನ ಪ್ರತಿ ವ್ಯಕ್ತಿಯ ಬಳಕೆಗೆ ದೊರಕುತ್ತಿರುವ ಶುದ್ಧ ನೀರಿನ ಸರಾಸರಿ ಪ್ರಮಾಣ ದಿನಕ್ಕೆ ಕೇವಲ ಎರಡೂವರೆ ಲೀಟರಿನಷ್ಟಿದೆ. ಆದರೆ ತೃಪ್ತಿಕರ ಪೂರೈಕೆಗೆ ಕನಿಷ್ಠ ೧೫೦ ಲೀಟರ್ ನೀರು ಬೇಕೆಂದು ತಜ್ಞರ ಅಂದಾಜು.

೩) ಜಗತ್ತಿನ ಪ್ರತಿ ಆರು ಜನರಲ್ಲಿ ಒಬ್ಬರಿಗೆ ಅಂದರೆ ಸುಮಾರು ಒಂದು ನೂರು ಕೋಟಿ ಜನರಿಗೆ ಕುಡಿಯಲು ಶುದ್ಧ ನೀರು ದೊರೆಯುತ್ತಿಲ್ಲ. ಪ್ರಪಂಚದ ಶೇ. ೪೦ರಷ್ಟು ಜನ ಪ್ರತ್ಯೇಕ ನಲ್ಲಿ ಅಥವಾ ಬಾವಿ ಇಲ್ಲದ ಮನೆಗಳಲ್ಲಿ ವಾಸಿಸುತ್ತಿದ್ದಾರೆ. ಇದರಿಂದ ಸುಮಾರು ೨೦೦ ಕೋಟಿ ಜನರು ಪ್ರತಿವರ್ಷ ಮಲಿನ ನೀರನ್ನು ಕುಡಿದು ಅನಾರೋಗ್ಯಕ್ಕೆ ತುತ್ತಾಗುತ್ತಿದ್ದಾರೆ.

೪) ಭಾರತದ ಎಲ್ಲ ಪ್ರಮುಖ ನದಿಗಳು ಮತ್ತು ಕೆಲವು ಕಾಲುವೆಗಳು 'ತೆರೆದ ಚರಂಡಿ'ಗಳಂತಾಗಿವೆ. ಮಹಾನಗರಗಳ ಮೂಲಕ ಹರಿಯುವ ನದಿಗಳಂತೂ ರೋಗಕಾರಕವಾದವು.

೫) ಜಗತ್ತಿನಾದ್ಯಂತ ಶೇ. ೨೦ರಷ್ಟು ನಗರವಾಸಿಗಳು ನೀರನ್ನು ಕೊಳ್ಳುತ್ತಾರೆ. ಜಗತ್ತಿನ ೮೦ ರಾಷ್ಟ್ರಗಳಲ್ಲಿ ಶುದ್ಧವಾದ ಕುಡಿಯುವ ನೀರನ್ನು ಜನರಿಗೆ ಸರಬರಾಜು ಮಾಡುವ ವ್ಯವಸ್ಥೆಯಿಲ್ಲ. ಬಾವಿಗಳ ನೀರು ಕುಡಿಯಲು ಯೋಗ್ಯವಾಗಿಲ್ಲ. ಉದಾಹರಣೆಗೆ ಇಂಡೋನೇಶ್ಯಾದ ಜಕಾರ್ತಾದ ಶೇ. ೭೩ರಷ್ಟು ಬಾವಿಗಳ ನೀರು ಮಾನವರ ಮಲ ಮೂತ್ರಗಳಿಂದ ಕಲುಷಿತಗೊಂಡಿವೆ.

೬) ಪ್ರಪಂಚದ ಎಲ್ಲ ಕಡೆ ವಿಶೇಷವಾಗಿ ಬಡರಾಷ್ಟ್ರಗಳಲ್ಲಿ ಅಂತರ್ಜಲದ ಮಟ್ಟ ವಿಪರೀತ ಕುಸಿದಿದೆ. ಪ್ರಗತಿ ಹೊಂದಿದ ರಾಷ್ಟ್ರಗಳ ನಗರಗಳಲ್ಲೂ ಶೇ. ೬೦ರಷ್ಟು ಶುದ್ಧ ಜಲದ ಸೆಲೆಗಳು ಈಗಾಗಲೇ ಬತ್ತಿಹೋಗಿವೆ. ಇಸವಿ ೨೦೨೫ರ ವೇಳೆಗೆ ಭಾರತವೂ ಸೇರಿದಂತೆ ಸುಮಾರು ೩೦೦ ಕೋಟಿ ಜನರು ನೀರಿಗಾಗಿ ಪರಿತಪಿಸಬಹುದು.

೭) ನೀರಿನ ಹಂಚಿಕೆಗಾಗಿಯೇ ಈ ಶತಮಾನದಲ್ಲಿ ದೇಶ ದೇಶಗಳ ನಡುವೆ ಸಮರಗಳಾಗಬಹುದಾದ ಸಾಧ್ಯತೆಗಳಿವೆ.

**ಜಲಕ್ಷಾಮಕ್ಕೆ ಕಾರಣಗಳು**

ಜಲ-ನೆಲಗಳ ಅಸಮರ್ಪಕ ನಿರ್ವಹಣೆ ಸೇರಿದಂತೆ ಅನೇಕ ಅಂಶಗಳು ಜಲಕ್ಷಾಮಕ್ಕೆ ಕಾರಣಗಳಾಗುತ್ತವೆ. ಅವುಗಳೆಂದರೆ –

೧. ಶೀಘ್ರವಾಗಿ ಬೆಳೆಯುತ್ತಿರುವ ಜನಸಂಖ್ಯೆಯಿಂದ ಪ್ರತಿವರ್ಷ ನೀರಿಗಾಗಿ ಬೇಡಿಕೆ ಹೆಚ್ಚುತ್ತಿದೆ. ಪ್ರತಿ ೨೧ ವರ್ಷಗಳಿಗೊಮ್ಮೆ ನೀರಿನ ಅಗತ್ಯ ಇಮ್ಮಡಿಯಾಗುತ್ತದೆ.

೨. ಅವೈಜ್ಞಾನಿಕ ಬೇಸಾಯ ಕ್ರಮ ಅನುಸರಿಸುತ್ತಿರುವ ರೈತರು ಕಡಿಮೆ ನೀರು ಬಳಸುವ ಕಡೆ ಅಪಾರ ನೀರು ಉಪಯೋಗಿಸಿ ನೀರನ್ನು ವ್ಯರ್ಥ ಮಾಡುತ್ತಿದ್ದಾರೆ. ಇದರಿಂದ ಕೆರೆ-ಕಟ್ಟೆ ಜಲಾಶಯಗಳು ಬರಿದಾಗಿ ಕೃತಕ ಜಲಕ್ಷಾಮ ಉಂಟಾಗುತ್ತಿದೆ. ಮಳೆ ನೀರು ಸಂಗ್ರಹ ಮಾಡುವ ಕಲೆ ಜನರಿಗೆ ತಿಳಿದಿಲ್ಲದೆ ಅಪಾರ ನೀರು ಹರಿದು ಸಮುದ್ರ ಸೇರುತ್ತಿದೆ.

೩. ನಗರ-ಪಟ್ಟಣಗಳಲ್ಲಿ ಗೃಹಕೃತ್ಯ ಮತ್ತು ಕೈಗಾರಿಕಾ ಚಟುವಟಿಕೆಗಳಿಗೆ ಹೆಚ್ಚು ನೀರು ಬಳಕೆಯಾಗುತ್ತಿದ್ದು, ನಿತ್ಯವೂ ಅಪಾರ ಪ್ರಮಾಣದ ನೀರು ಅಶುದ್ಧವಾಗಿ ಒಳಚರಂಡಿ ಸೇರಿ ಪೋಲಾಗುತ್ತಿದೆ. ಮೂಲತಃ ನಮ್ಮ ಜನರಿಗೆ ಯಾವುದನ್ನೂ ಹಿತ-ಮಿತವಾಗಿ ಬಳಸಬೇಕೆನ್ನುವ ಪರಿಪಾಠ ಬಂದಿಲ್ಲ. ನೀರು ಲಭ್ಯವಿರುವಾಗ ಅದರ ಮಿತವ್ಯಯದ ಕಡೆ ಗಮನವೇ ಇರುವುದಿಲ್ಲ. ಕೊರತೆಯು ಉಂಟಾದಾಗ ಮಾತ್ರ ಕ್ರಿಯಾಶೀಲರಾಗುತ್ತಾರೆ !

೪. ಒಳಚರಂಡಿ ವ್ಯವಸ್ಥೆ ಬಹುವಾಗಿಲ್ಲದಿರುವುದರಿಂದ ಜನರ ಕೊಳಚೆಗಳೆಲ್ಲ ನದಿ, ಕಾಲುವೆ, ಬಾವಿಗಳಿಗೆ ತಲುಪಿ ಶುದ್ಧ ನೀರಿನ ಸೆಲೆಗಳೆಲ್ಲ ಹೊಲಸಾಗುತ್ತಿವೆ. ನಮ್ಮ ದೇಶದಲ್ಲೇ ಪ್ರತಿದಿನ ಸುಮಾರು ಹನ್ನೆರಡು ಸಾವಿರ ದಶಲಕ್ಷ ಲೀಟರ್‌ನಷ್ಟು ಕೊಳಕು

ನೀರು ನೇರವಾಗಿ ನದಿಗಳಿಗೆ ಬೆರೆಯುತ್ತಿದೆ.

೫. ಕೈಗಾರಿಕಾ ರಾಸಾಯನಿಕ ತ್ಯಾಜ್ಯ ನೀರು ನೇರವಾಗಿ ನದಿ ಕಾಲುವೆಗಳಿಗೆ ಸೇರಿ ಭಾರೀ ಪ್ರಮಾಣದಲ್ಲಿ ನೀರು ಕಲುಷಿತವಾಗುತ್ತಿದೆ. ಪವಿತ್ರ ಗಂಗಾ ನದಿಗೆ ಅದು ಹರಿಯುವ ಮಾರ್ಗದಲ್ಲಿ ಸುಮಾರು ೧೩೭ ವಿವಿಧ ಕೈಗಾರಿಕೆಗಳ ವಿಷಮಯ ಹೊಲಸು ನೀರು ಸೇರುತ್ತಿದೆ.

೬. ಕೃಷಿ ಭೂಮಿಯಿಂದ ಬಸಿಯುತ್ತಿರುವ ಕೀಟನಾಶಕಗಳ ಮತ್ತು ರಸಗೊಬ್ಬರಗಳ ಶೇಷಾಂಶಗಳು ಶುದ್ಧ ಜಲದ ಸೆಲೆಗಳಲ್ಲಿ ವಿಷ ಬೆರೆಸುತ್ತಿವೆ. ಇವಲ್ಲದೆ ಅರಣ್ಯನಾಶ ಭೂಮಿಯ ಕೊರೆತ, ಅನಿಶ್ಚಿತ ಮಳೆ ಇವೆಲ್ಲವೂ ನೀರಿನ ದುಸ್ಥಿತಿಯನ್ನು ಹೆಚ್ಚಿಸುತ್ತಿವೆ.

**ಜಲಸಂವರ್ಧನೆ**

ಮಳೆ ನೀರು ಸಂಗ್ರಹ, ಭೂಮಿಯೊಳಕ್ಕೆ ನೀರಿಳಿಸಿ ಅಂತರ್ಜಲ ವೃದ್ಧಿಸುವುದು, ಅಂತರ್ಜಲ ಮಾಲಿನ್ಯ ನಿಯಂತ್ರಣ, ಕೆರೆ-ಕಟ್ಟೆ ಬಾವಿ ಜಲಮೂಲಗಳ ಸಂರಕ್ಷಣೆ ಮತ್ತು ನದಿ, ಕಾಲುವೆಗಳ ನೀರಿನ ಶುದ್ಧತೆ ಕಾಪಾಡುವುದೇ ಜಲಸಂವರ್ಧನೆ. ನೆಲ-ಜಲ ಸಂವರ್ಧನೆಗಾಗಿ ಜನಜಾಗೃತಿ ಮೂಡಿಸುವುದು ಜಲಸಂವರ್ಧನೆಯ ಮುಖ್ಯ ಅಂಗ. ಜಲ ಸಂವರ್ಧನೆಯಿಂದ ನೆಲ-ಜಲ, ಜನ-ಜಾನುವಾರು, ಕೃಷಿ, ವನ ಮತ್ತು ವನ್ಯ ಮೃಗಗಳ ಸಮೃದ್ಧ ಬೆಳವಣಿಗೆ ಸಾಧ್ಯ. ಇದು ಸುಸ್ಥಿರ ಅಭಿವೃದ್ಧಿಗೆ ನಾಂದಿಯಾಗುತ್ತದೆ.

**ಜಲಸಂರಕ್ಷಣೆ ಹೇಗೆ ?**

ಎಲ್ಲ ಜೀವಿಗಳ ಉಳಿವು ಜಲ ಸಂರಕ್ಷಣೆಯಿಂದ ಮಾತ್ರ ಸಾಧ್ಯ. ಜನರು ಜಾಗೃತರಾಗಿ ಕೆರೆ-ಕಟ್ಟೆ ಬಾವಿಗಳ ಪುನಃಶ್ಚೇತನಗೊಳಿಸುವ, ನದಿ ಕಾಲುವೆಗಳ ಸ್ವಚ್ಛತೆ ಕಾಪಾಡುವ ಹಾಗೂ ಅಂತರ್ಜಲ ವೃದ್ಧಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರಿಂದ ಜಲ ಸಂರಕ್ಷಣೆ ಸಾಧ್ಯ.

**ಮಳೆ ನೀರು ಕೊಯಿಲು**

ಮಳೆ ನೀರು ಸಂಗ್ರಹಿಸುವುದೇ ಜಲ ಕೊಯಿಲು. ಮನೆಗಳ ಭೂಗತ ಟ್ಯಾಂಕುಗಳಲ್ಲಿ ಮಳೆ ನೀರನ್ನು ಸಂಗ್ರಹಿಸಿ ಬಳಸುವುದು ಮತ್ತು ಭೂಮಿಯಲ್ಲಿ ನೀರಿಂಗಿಸಿ ಅಂತರ್ಜಲ ಮಟ್ಟವನ್ನು ಹೆಚ್ಚಿಸಬಹುದು. ''ಜಲ ಕೊಯಿಲಿಗೆ ಯಂತ್ರ ಬೇಡ, ತಂತ್ರಜ್ಞಾನ ಬೇಡ, ಭಾರಿ ಮೊತ್ತದ ಹಣ ಬೇಡ. ಬೇಕಾಗಿರುವುದು ದೃಢ ಮನಸ್ಸು, ನಂಬಿಕೆ ಹಾಗೂ ಸ್ವಲ್ಪ ಮಾಹಿತಿ'' ಎನ್ನುತ್ತಾರೆ ಖ್ಯಾತ ಜಲತಜ್ಞ ಶ್ರೀ ಪಡ್ರೆ. ಮಳೆ ಬಿದ್ದಲ್ಲೇ ಇಂಗು ಗುಂಡಿಗಳನ್ನು ನಿರ್ಮಿಸಿ ನೀರನ್ನು ಇಂಗಿಸುವುದು, ಮಳೆ ನೀರಿನ ಹರಿಯುವ ವೇಗವನ್ನು ನಿಯಂತ್ರಿಸುವುದರಿಂದ ನೀರು ಮತ್ತು ಮಣ್ಣಿನ ಫಲವತ್ತತೆ ಎರಡನ್ನೂ ಕಾಪಾಡಬಹುದು.

ಮನೆ ಸೂರುಗಳಲ್ಲಿ ಬೀಳುವ ಮಳೆ ನೀರನ್ನು ಭೂಗತ ಟ್ಯಾಂಕುಗಳಲ್ಲಿ ಶೇಖರಿಸಿಕೊಂಡು ಬಳಸುವ ಕಲೆ ಬಹು ಹಿಂದಿನಿಂದಲೂ ನಮ್ಮ ರಾಷ್ಟ್ರದ ಗುಜರಾತ್ ಮತ್ತು ರಾಜಾಸ್ತಾನ್‌ಗಳಲ್ಲಿ ರೂಢಿಯಲ್ಲಿದೆ. ಸುಣ್ಣ ತುಂಬಿದ ಚೀಲಗಳನ್ನೂ ಭೂಗತ ಟ್ಯಾಂಕುಗಳಲ್ಲಿ ಬಿಟ್ಟು ಅದರ ಸ್ವಚ್ಛತೆಯನ್ನು ದೀರ್ಘಕಾಲದವರೆಗೆ ಕಾಪಾಡಿಕೊಳ್ಳುತ್ತಿರುವುದು ಕಂಡುಬಂದಿದೆ. ದ್ವಾರಕಾ ನಗರದ ಸುಮಾರು ಮೂರು ಸಾವಿರ ಮತ್ತು ಅಹಮದ್ ನಗರದ ಹತ್ತು ಸಾವಿರ ಮನೆಗಳಲ್ಲಿ ಭೂಗತ ಟ್ಯಾಂಕುಗಳಿವೆ. ಜಲ ಕೊಯಿಲು ಎಲ್ಲೆಡೆ ವ್ಯಾಪಕವಾಗಿ ಜಾರಿಗೊಂಡರೆ ನೀರಿನ ಕೊರತೆ ತಗ್ಗಿ, ನೀರು ಸಂಗ್ರಹಿಸಿಟ್ಟುಕೊಳ್ಳುವ ಜವಾಬ್ದಾರಿ ಪ್ರತಿಯೊಬ್ಬರದಾಗುತ್ತದೆ.

**ಕೆರೆ-ಕಟ್ಟೆ, ಬಾವಿ ಮತ್ತು ಜಲಾಶಯಗಳ ಸಂರಕ್ಷಣೆ**

ಕೆರೆ-ಕಟ್ಟೆಗಳಲ್ಲಿ ತುಂಬಿರುವ ಹೂಳು (ಕೃಷಿಗೆ ಫಲವತ್ತಾದ ಮಣ್ಣು) ತೆಗೆದು ಪುನಃಶ್ಚೇತನಗೊಳಿಸಿದರೆ ಅವುಗಳ ನೀರಿನ ಸಂಗ್ರಹ ಸಾಮರ್ಥ್ಯ ವೃದ್ಧಿಸುತ್ತದೆ. ಮೀನು ಸಾಗಾಣಿಕೆಗೂ ಚಾಲನೆ ದೊರೆಯುತ್ತದೆ. ಕೃಷಿ ಚಟುವಟಿಕೆಗೆ ನೀರು ಸರ್ವಕಾಲಿಕವಾಗಿ ದೊರೆಯುತ್ತದೆ. ಕೆರೆಗಳ ಸಂರಕ್ಷಣೆಗಾಗಿ ಪ್ರಪಂಚ ಬ್ಯಾಂಕ್ ಹಣಕಾಸಿನ ಸಹಾಯವನ್ನು ಭಾರತವೂ ಸೇರಿದಂತೆ ಹಲವು ದೇಶಗಳಿಗೆ ನೀಡುತ್ತಿದೆ. ಜಲಾಶಯಗಳ ಜಲಾನಯನ ಪ್ರದೇಶಗಳಲ್ಲಿ ಗಿಡ ಮರಗಳನ್ನು ಬೆಳೆಸುವುದರಿಂದ ಮಣ್ಣಿನ ಕೊರೆತ ನಿಯಂತ್ರಣಗೊಂಡು ಜಲಾಶಯಗಳಲ್ಲಿ ಹೂಳು ಸೇರ್ಪಡೆ ಕಡಿಮೆಯಾಗುವುದಲ್ಲದೆ ನೀರು ಸಂಗ್ರಹಣಾ ಸಾಮರ್ಥ್ಯವೂ ಹೆಚ್ಚುತ್ತದೆ.

ಜಲ ಸಂರಕ್ಷಣೆಯಲ್ಲಿ ಕಡಿಮೆ ಮಳೆ ಪಡೆಯುವ ರಾಜಾಸ್ತಾನ ದಾಖಲೆಯ ಸಾಧನೆ ಮಾಡಿ ಮಾದರಿಯಾಗಿದೆ. ಅಲ್ಲಿ ಬೀಳುವ ಮಳೆಯ ಹನಿ ಹನಿ ನೀರನ್ನೂ ಜೋಪಾನ ಮಾಡುವಲ್ಲಿ ಮ್ಯಾಗ್ಸೆಸ್ಸೇ ಪ್ರಶಸ್ತಿ ವಿಜೇತ, ಬರದ ನಾಡಿನ ಭಗೀರಥನೆಂದೇ ಕರೆಸಿಕೊಳ್ಳುವ ರಾಜೇಂದ್ರಸಿಂಗ್ ಗಮನಾರ್ಹ ಕೆಲಸ ಮಾಡಿದ್ದಾರೆ. 'ತರುಣ ಭಾರತಿ' ಯುವ ಸಂಘಟನೆ ಜಲ ಜಾಗೃತಿ ಅಭಿಯಾನ ಕೈಗೊಂಡಿದೆ. ಅಲ್ಲದೆ ಶ್ರಮದಾನದಿಂದ ೩೦೦೦ ಮಣ್ಣಿನ 'ಜೋಹಾಡ್' (ಅಣ್ಣೆಕಟ್ಟು)ಗಳನ್ನು ನಿರ್ಮಿಸಲಾಗಿದೆ. ಇದರ ಫಲವಾಗಿ ಇಂದು ಆ ರಾಜ್ಯದ ಆರಾವಳಿ ಪರ್ವತ ಶ್ರೇಣಿ ಬಳಿಯ ೬೫೦ಕ್ಕೂ ಹೆಚ್ಚು ಹಳ್ಳಿಗರ ಭೂಮಿ ಮತ್ತು ಬದುಕು ಹಸಿರಾಗಿದೆ. ಅಂತರ್ಜಲದ ಮಟ್ಟ ವೃದ್ಧಿಸಿದೆ. ಸರಿಸ್ಕಾ ಹುಲಿ ಅಭಯಾರಣ್ಯದಲ್ಲಿ ಹುಲಿ ಚಿರತೆಗಳ ಘರ್ಜನೆ, ಹಕ್ಕಿಗಳ ಚಿಲಿಪಿಲಿ ಧ್ವನಿ ಕೇಳಿ ಬರುತ್ತಿದೆ. ಹಾಲಿನ ಉತ್ಪಾದನೆ ಹತ್ತು ಪಟ್ಟು ಹೆಚ್ಚಾಗಿದೆ. ಹಳ್ಳಿಗರು ಆರ್ಥಿಕವಾಗಿ ಸಬಲರಾಗುತ್ತಿದ್ದಾರೆ.

ಮಧ್ಯಪ್ರದೇಶ ರಾಜ್ಯದ ಬರಗಾಲ ಪೀಡಿತ ಪಾಟಿ ಕಣಿವೆಯ ಆದಿವಾಸಿಗಳು ಶ್ರಮದಾನದಿಂದ ಅನೇಕ ಚಿಕ್ಕ ಚಿಕ್ಕ ಕಟ್ಟೆಗಳನ್ನು ನಿರ್ಮಿಸಿ ಜಲ ಸಂಗ್ರಹಣೆಯಲ್ಲಿ ತೊಡಗಿದ್ದಾರೆ. ಇವು ಪರಿಸರಕ್ಕೆ ಹಾನಿಯಾಗದ ಕೋಟ್ಯಂತರ ರೂ. ಬೇಡದ ಜಲ ಸಂಗ್ರಹ ಒಡ್ಡುಗಳಾಗಿ ಗಮನ ಸೆಳೆದಿವೆ.

ಕರ್ನಾಟಕ ಸರ್ಕಾರ ಜಲ ಸಂವರ್ಧನೆಗಾಗಿ ವಿಶ್ವಬ್ಯಾಂಕ್ ಆರ್ಥಿಕ ಸಹಕಾರದಿಂದ ಸಮುದಾಯ ಆಧಾರಿತ ಕೆರೆ ಅಭಿವೃದ್ಧಿ ಮತ್ತು ನಿರ್ವಹಣೆ ಯೋಜನೆಯನ್ನು ಜಾರಿಗೆ ತಂದಿದೆ. ಇದರಿಂದ ಕೆರೆಗಳ ಜಲ ಸಂಗ್ರಹಣಾ ಸಾಮರ್ಥ್ಯ ವೃದ್ಧಿಸಿ - ಕೃಷಿ ಉತ್ಪಾದನೆ ತನ್ಮೂಲಕ ಕೌಟುಂಬಿಕ ಆದಾಯದಲ್ಲಿ ಹೆಚ್ಚಳವಾಗುವ ಸಾಧ್ಯತೆಯಿದೆ. ಜಲ ಮಾಲಿನ್ಯ ತಡೆ ಮತ್ತು ಹಸುರೀಕರಣ ಚಟುವಟಿಕೆಗಳೂ ಸಹ ಸುಸ್ಥಿರ ಜಲ ಸಂರಕ್ಷಣೆಗೆ ಸಹಾಯವಾಗುತ್ತವೆ.

**ನೀರಿನ ಬೇಕು ಬೇಡಗಳು**

ಜನರು ನೀರಿನ ಹಕ್ಕಿಗಾಗಿ ಹೋರಾಡುವುದರ ಜೊತೆಗೆ ಜಲ ಸಂರಕ್ಷಣೆಯ ಜವಾಬ್ದಾರಿ ಹೊರಬೇಕು. ನೆಲ-ಜಲ ಸಂರಕ್ಷಣೆ ಜನಾಂದೋಲನವಾಗಿ ರೂಪುಗೊಳ್ಳಬೇಕಾದ ಅಗತ್ಯ ಇಂದು ಹೆಚ್ಚಾಗಿದೆ. ಜಲ ಸಂರಕ್ಷಣೆಗಾಗಿ ಕೆಲವು ನಿರ್ದಿಷ್ಟ ಕ್ರಮಗಳನ್ನು ಕಡ್ಡಾಯವಾಗಿ ಕೈಗೊಳ್ಳಬೇಕಾದ ಅನಿವಾರ್ಯವಿದೆ. ಅವುಗಳೆಂದರೆ –

▪ ರೈತರು ಕೃಷಿಗೆ ನೀರಿದ್ದಾಗ ಅತಿ ಬಳಕೆ ಮಾಡದೆ, ನೀರಿನ ಮಿತವ್ಯಯ ಮಾಡಬೇಕು. ಭೂಮಿಯಲ್ಲಿ ನೀರಿಂಗಿಸಬೇಕು. ಹನಿ ನೀರಾವರಿ ಮತ್ತು ತುಂತುರು ನೀರಾವರಿಗೆ ಒತ್ತು ನೀಡಬೇಕು.

▪ ಮನೆ ಕಟ್ಟುವವರು ಮಳೆ ನೀರು ಸಂಗ್ರಹ ಮಾಡಲು ಭೂಗತ ಟ್ಯಾಂಕುಗಳನ್ನು ಕಡ್ಡಾಯವಾಗಿ ನಿರ್ಮಿಸುವಂತೆ ಕಾನೂನು ಜಾರಿಗೊಳ್ಳಬೇಕು. ತಮಿಳುನಾಡಿನ ಚೆನ್ನೈ ನಗರ ಮಳೆ ನೀರು ಶೇಖರಣೆಯಲ್ಲಿ ಉತ್ತಮ ಸಾಧನೆ ಮಾಡಿರುವುದು ನಮಗೂ ಮಾದರಿಯಾಗಲಿ. ಶಾಲಾ-ಕಾಲೇಜು ಮತ್ತು ಕಛೇರಿಗಳು ವರ್ಷಪೂರ್ಣ ತಮಗೆ ಬೇಕಾದ ನೀರಿನ ಅಗತ್ಯವನ್ನು ಮಳೆ ನೀರು ಸಂಗ್ರಹಿಸಿ ಬಳಸಬೇಕು.

▪ ಕಾಂಕ್ರೀಟ್‌ಮಯ ನಗರಗಳಲ್ಲಿ ಮಳೆ ನೀರು ಇಂಗುವುದು ಬಹಳ ಕಡಮೆ. ಇಂಗುವ ಅಲ್ಪ ಸ್ವಲ್ಪ ನೀರೆಲ್ಲ ನೈಟ್ರೇಟ್ ಬೆರೆತ ಕೈಗಾರಿಕಾ ಕೊಳಚೆಯಾಗಿದ್ದು ಅಂತರ್ಜಲ ಕಲುಷಿತಗೊಳ್ಳುತ್ತಿರುವುದನ್ನು ತಡೆಗಟ್ಟಬೇಕು.

• ನೀರಿನ ಮಹತ್ವ ಮತ್ತು ಸಂಗ್ರಹಣೆಯ ಅಗತ್ಯವನ್ನು ಕುರಿತು ಜನಜಾಗೃತಿಯಲ್ಲಿ ತೊಡಗಿರುವ ದಕ್ಷಿಣ ಕನ್ನಡ ಜಿಲ್ಲೆಯ ಮೈತ್ರಿ ಸಂಘ ಮತ್ತು ಬೆಂಗಳೂರಿನ ಮಳೆ ನೀರಿನ ಕ್ಲಬ್ಬುಗಳಂತಹವು ಎಲ್ಲೆಡೆ ಅಸ್ತಿತ್ವಗೊಳ್ಳಬೇಕು.

▪ ಜಲ ಸಂವರ್ಧನೆ ಮತ್ತು ಪರಿಸರ ಕುರಿತ ಪಾಠಗಳು ಶಾಲಾ-ಕಾಲೇಜುಗಳ ಪಠ್ಯದಲ್ಲಿ ಸೇರ್ಪಡೆಯಾಗಬೇಕು. ರಾಷ್ಟ್ರೀಯ ಸೇವಾ ಯೋಜನೆಯ ವಿದ್ಯಾರ್ಥಿಗಳು ಜಲ ಸಂವರ್ಧನೆಗಾಗಿ ಜನಾಂದೋಲನ ಕೈಗೊಳ್ಳಬೇಕು.

▪ ಕೊಳವೆ ಬಾವಿಗಳು ಅಂತರ್ಜಲವನ್ನು ಬರಿದು ಮಾಡುವ ಸಾಧನಗಳು. ಭೂಮಿಯಲ್ಲಿ ನೀರಿಂಗಿಸದೆ, ಅಂತರ್ಜಲ ವೃದ್ಧಿಸದೆ, ನೀರಿಗಾಗಿ ಕೊಳವೆ ಬಾವಿ ತೆಗೆದರೆ ಆಯ್ತು ಎಂಬ ಭಾವನೆ ಬೇಡ.

ಕೆಲವು ದೇಶಗಳಲ್ಲಿ ನೀರಿನ ಖಾಸಗೀಕರಣದಿಂದ ಜಲ ಕೊಯಿಲಿನ ಹಕ್ಕನ್ನು ಜನರು ಕಳೆದುಕೊಳ್ಳುತ್ತಿದ್ದಾರೆ. ಕುಡಿಯುವ ನೀರಿನ ಖಾಸಗೀಕರಣದ ಅನಾಹುತ ತಪ್ಪಬೇಕು.

▪ ಮಣ್ಣಿನ ಸವಕಳಿ ತಡೆಯಲು ಮತ್ತು ಮಳೆಯನ್ನು ಆಕರ್ಷಿಸಲು ಸಾಧ್ಯವಿರುವ ಕಡೆಗಳಲ್ಲೆಲ್ಲ ಹೆಚ್ಚು ಹೆಚ್ಚು ಮರ-ಗಿಡಗಳನ್ನು ಬೆಳೆಸಬೇಕು. ಅರಣ್ಯಗಳನ್ನು ಸಂರಕ್ಷಿಸಬೇಕು.

▪ ನಿರಂತರವಾಗಿ ಹರಿದು ಪ್ರವಾಹ ಉಂಟುಮಾಡುವ ನದಿಗಳನ್ನು ಋತುಕಾಲಿಕ ನದಿಗಳೊಡನೆ ಸಂಪರ್ಕಿಸುವುದರಿಂದ ಜಲ ಸಮಸ್ಯೆಯನ್ನು ಶಾಶ್ವತವಾಗಿ ಪರಿಹರಿಸಬಹುದು. ನೀರಿನ ವಿಷಯದಲ್ಲಿ ರಾಜಕಾರಣಿಗಳು ಕೃಷಿ ಉದ್ದೇಶಕ್ಕಿಂತ ರಾಜಕೀಯ ಉದ್ದೇಶ ಇಟ್ಟುಕೊಳ್ಳುತ್ತಿರುವುದು ಮತ್ತು ಜಲ ಸಮಸ್ಯೆಯನ್ನು ಜಟಿಲಗೊಳಿಸುವುದು ಬೇಡ.

ಜಲಕ್ಷಾಮದ ದಿನಗಳಲ್ಲಿ ಅಂತರರಾಜ್ಯ ನದಿ ನೀರನ್ನು ತಾಳ್ಮೆಯಿಂದ ಹಂಚಿಕೊಳ್ಳುವುದು, ಸಂಕಷ್ಟ ಸಂದರ್ಭದ ಜಲ ಹಂಚಿಕೆ ಸೂತ್ರ ಕಂಡುಕೊಳ್ಳುವುದು ಸೂಕ್ತ. ನೀರು ಹಂಚಿಕೆಗೆ ಜಲ ಸಮರ ಕಾನೂನು ಪರಿಹಾರವಲ್ಲ, ಬದಲಾಗಿ ಪರಸ್ಪರರು ಕುಳಿತು, ಚರ್ಚಿಸಿ ಕೊಡು-ಕೊಳ್ಳುವ ನೀತಿ ಅನುಸರಿಸಿ ಪರಿಹಾರ ಕಂಡುಕೊಳ್ಳಬಹುದು. ರಾಷ್ಟ್ರೀಯ ಜಲ ನೀತಿ ರಚನೆ ಅಂತರರಾಜ್ಯ ಜಲ ಸಮಸ್ಯೆಗೆ ಪರಿಹಾರವಾಗಬಹುದು. ಏನೇ ಆದರೂ ಜಾಗರೂಕತೆಯ ಜಲ ನಿರ್ವಹಣೆಯಿಂದಲೇ ಜಲ ವಿವಾದಗಳನ್ನು ತಪ್ಪಿಸಬಹುದು. ಬನ್ನಿ ಇದಕ್ಕಾಗಿ ಆ ಅಮೂಲ್ಯ ಜಲವನ್ನು ಹನಿಗೂಡಿಸೋಣ.

ದಯಾನಂದ
ಉಪನ್ಯಾಸಕ, ಮಹಾರಾಣಿ ಸ. ಪ. ಪೂ. ಕಾಲೇಜು, ಮೈಸೂರು

# ಬಯೋ-ಇಂಫರ್ಮ್ಯಾಟಿಕ್ಸ್

ಪ್ರೊ॥ ಎಂ. ಆರ್. ಎನ್. ಮೂರ್ತಿ

ಬಯೋ ಇಂಫರ್ಮ್ಯಾಟಿಕ್ಸ್ (Bio Informatics, BI) ಬೆಂಗಳೂರಿನಲ್ಲಿ ಪದೇ ಪದೇ ಕೇಳಿಬರುತ್ತಿರುವ ಹೊಸ ಮಂತ್ರ. ಇದನ್ನು ಕಲಿಸುತ್ತೇವೆ ಎಂದು ಹೇಳುವ ಅನೇಕ ಸಂಸ್ಥೆಗಳು ನಾಯಿ ಕೊಡೆಗಳಂತೆ ಬೆಳೆಯುತ್ತಿವೆ. ಈ ಸಂಸ್ಥೆಗಳು ಅಮೆರಿಕೆಯಲ್ಲಿ ಹಣಗಳಿಸುವ ಕನಸು ಕಾಣುತ್ತಿರುವ ವಿದ್ಯಾರ್ಥಿಗಳಿಂದ ಲಕ್ಷಾಂತರ ರೂಪಾಯಿಗಳನ್ನು ವಸೂಲು ಮಾಡುತ್ತಿವೆ. ಇಂತಹ ಅನೇಕ ಸಂಸ್ಥೆಗಳಲ್ಲಿ ಬಯೋ ಇಂಫರ್ಮ್ಯಾಟಿಕ್ಸ್ ಎಂದರೇನು, ಅದರ ಬಳಕೆ ಎಲ್ಲಿದೆ, ಅದನ್ನು ಕಲಿತವರಿಗೆ ಎಂತಹ ಉದ್ಯೋಗಾವಕಾಶಗಳು ದೊರೆಯಬಹುದು, ಮುಂತಾದುವನ್ನು ಸ್ಪಷ್ಟವಾಗಿ ತಿಳಿದವರೇ ಇಲ್ಲ. ಯಾವ ಪರಿಣತಿ ಇಲ್ಲದಿದ್ದರೂ, ಕಂಪ್ಯೂಟರ್ ಸಾಫ್ಟ್‌ವೇರಿನಂತೆ BI ಕೂಡಾ ಸದ್ಯದಲ್ಲೇ ಕ್ರಾಂತಿ ಮಾಡಲಿದೆ, ತಮ್ಮ ಕೋರ್ಸುಗಳನ್ನು ಮುಗಿಸಿದ ವಿದ್ಯಾರ್ಥಿಗಳಿಗೆ ಹಣ ದೋಚಿಕೊಳ್ಳುವ ಅವಕಾಶಗಳೂ ದೊರಕಲಿವೆ ಎನ್ನುವ ಭ್ರಾಂತಿಯನ್ನು ವಿದ್ಯಾರ್ಥಿಗಳಲ್ಲಿ ಬಿತ್ತುವ ಇವರ ಸಾಮರ್ಥ್ಯ ಹಣಗಳಿಸಲು ಸಾಕಾಗುತ್ತದೆ. ಬರುವ ವರ್ಷಗಳಲ್ಲಿ BI ಜೀವ ವಿಜ್ಞಾನಕ್ಕೆ, ವೈದ್ಯಕೀಯಕ್ಕೆ ಬಹಳ ಬೇಕಾದುದು ಎನಿಸಬಹುದು. ನಮ್ಮ ದೇಶದ ವಾಣಿಜ್ಯ ಮಾರುಕಟ್ಟೆಗೆ ಇದರ ಅವಶ್ಯಕತೆ ಎಷ್ಟು ಎನ್ನುವುದು ನಿಶ್ಚಿತವಿಲ್ಲ. ನಿಶ್ಚಿತ ಸಂಗತಿ, BI ಸಂಸ್ಥೆಗಳು ಈ ನಡುವೆ ಸಾಕಷ್ಟು ಸಂಪಾದಿಸುವುದು! ಈ ಸಂಸ್ಥೆಗಳ ಜೊತೆಗೇ, ಅನೇಕ ಕಾಲೇಜುಗಳು B.Sc ಮತ್ತು B.E. ಓದುತ್ತಿರುವ ವಿದ್ಯಾರ್ಥಿಗಳಿಗೆ BIನ್ನು ಐಚ್ಛಿಕ ವಿಷಯವನ್ನಾಗಿಯೋ, ಮುಖ್ಯ ವಿಷಯವನ್ನಾಗಿಯೋ ಬೋಧಿಸಲು ಪ್ರಾರಂಭಿಸಿವೆ. ಈ ಸಂಸ್ಥೆಗಳಲ್ಲಿ ಕೂಡಾ BIನಲ್ಲಿ ಆಳ ತರಬೇತಿ ಹೊಂದಿದ ಅಧ್ಯಾಪಕರು ಅಪರೂಪ. BI ಎಂದರೆ ಏನು? ಇದರ ವ್ಯಾಪ್ತಿ ಎಷ್ಟು ಇದನ್ನು ವಿವೇಚಿಸುವುದೆ ಪ್ರಸ್ತುತ ಲೇಖನದ ಉದ್ದೇಶ.

### BI ಎಂದರೇನು?

ಪ್ರಪಂಚದ ಎಲ್ಲ ಜೀವಿಗಳ ಆನುವಂಶಿಕ ಮಾಹಿತಿ ಅಡಗಿರುವುದು ಅವುಗಳ ಜೀವಕೋಶಗಳಲ್ಲಿರುವ ಡಿ.ಎನ್.ಎ. (DNA) ಅಣುಗಳಲ್ಲಿ. ಈ ಅಣುಗಳಲ್ಲಿ ಜೈವಿಕ ಮಾಹಿತಿ ನಾಲ್ಕು ಅಕ್ಷರಗಳ ಲಿಪಿಯಲ್ಲಿ ಬರೆಯಲಾಗಿದೆ ಎನ್ನಬಹುದು. ಈ ಅಕ್ಷರಗಳಿಗೆ ರಸಾಯನ ಶಾಸ್ತ್ರದ ಸಂಕೇತ A, T, G ಮತ್ತು C. ಒಂದು ಲೇಖನದಲ್ಲಿರುವ ಅಕ್ಷರ ಮಾಲೆಯಿಂದ ಆ ಲೇಖನ ಅರ್ಥ ಪಡೆಯುವಂತೆ, ಡಿ.ಎನ್.ಎ. ಅಣುವಿನಲ್ಲಿ ಹುದುಗಿರುವ A, T, G ಮತ್ತು Cಗಳ ಸರಣಿ ಅದರಲ್ಲಿರುವ ಮಾಹಿತಿಯನ್ನು ಸೂಚಿಸುತ್ತದೆ. ಡಿ.ಎನ್.ಎ. ಅಣುಗಳಲ್ಲಿರುವ ಮಾಹಿತಿ ಬಳಸಿ, ಜೀವಕೋಶಗಳು ಪ್ರೋಟೀನ್ ಅಣುಗಳನ್ನು ಸಂಶ್ಲೇಷಿಸುತ್ತವೆ. ಪ್ರೋಟೀನಿನ ಅಣುಗಳು ಜೀವಕೋಶದ ಎಲ್ಲ ಕ್ರಿಯೆಗಳನ್ನೂ ನಿರ್ವಹಿಸುತ್ತವೆ. ಕೋಶಗಳಿಗೆ ರಚನೆ ಕೊಡುವುದರಲ್ಲಿಯೂ ಪ್ರೋಟೀನುಗಳು ಪ್ರಮುಖ ಪಾತ್ರ ವಹಿಸುತ್ತವೆ. ಜೀವಕೋಶಗಳ ನಡುವೆ ನಡೆಯುವ ಸಂದೇಶ ವಿನಿಮಯವನ್ನೂ ಪ್ರೋಟೀನುಗಳೇ ನಿಯಂತ್ರಿಸುತ್ತವೆ. ಹಾಗೆಯೇ, ಪ್ರೋಟೀನುಗಳು ಜೀವಕೋಶಗಳ ಪೊರೆಯಲ್ಲಿ ಕಾವಲು ಕುಳಿತು, ಜೀವಕೋಶಗಳಿಗೆ ಬೇಕಾದ ಅಣುಗಳನ್ನು ಮಾತ್ರ ಕೋಶದೊಳಕ್ಕೆ ಬಿಡುತ್ತವೆ. ಇತರ ಅಣುಗಳಿಗೆ ತಡೆಗೋಡೆ ಒಡ್ಡುತ್ತವೆ. ಹೀಗೆಯೇ, ಜೀವಕೋಶಗಳ ಸಮಸ್ತ ಕ್ರಿಯೆಗಳ ನಿಯಂತ್ರಣದಲ್ಲಿ ಪ್ರೋಟೀನುಗಳು ಬಹು ಮುಖ್ಯ ಪಾತ್ರ ವಹಿಸುತ್ತವೆ. ಜೀವಕೋಶಗಳ ನಿಯಂತ್ರಿತ ಕಾರ್ಯ, ಕೋಶಗಳ ಗುಂಪುಗಳು ಒಟ್ಟಾಗಿ, ಪೂರಕವಾಗಿ ನಡೆಸುವ ಕ್ರಿಯೆಗಳಿಂದ ಜೈವಿಕ ಕಾರ್ಯ ಮುನ್ನಡೆಯುತ್ತದೆ. ಆದ್ದರಿಂದ, A, T, G ಮತ್ತು C ಲಿಪಿಗಳಲ್ಲಿರುವ ಡಿ.ಎನ್.ಎ. ಅಣುಗಳ ಸಂದೇಶವೇ ಎಲ್ಲ ಜೈವಿಕ ಕ್ರಿಯೆಗಳನ್ನೂ ಸೂಚಿಸುತ್ತದೆ ಎನ್ನಬಹುದು. ಈ ಎಲ್ಲ ಮಾಹಿತಿಗಳನ್ನು ಒದಗಿಸುವುದು, ಮಾಹಿತಿಗಳ ಅರ್ಥ ಗೊತ್ತು ಮಾಡುವುದು, ನಮ್ಮ ಒಳಿತಿಗೆ ಅದನ್ನು ಬಳಸಿಕೊಳ್ಳುವುದು ಮುಂತಾದುವು BIನಲ್ಲಿ ಚರ್ಚಿತವಾಗುವ ವಿಷಯಗಳು. ಜೀವಶಾಸ್ತ್ರದ ಎಲ್ಲ ವಿಭಾಗಗಳಿಗೂ ಇಂದು BI ಬೇಕಾಗಿದೆ. ಸಸ್ಯ ಹಾಗೂ ಪ್ರಾಣಿಗಳ ತಳಿ ಗುಣಗಳು, ಪ್ರೋಟೀನುಗಳ ರಚನೆ ಹಾಗೂ ವರ್ತನೆ, ಆರೋಗ್ಯದಿಂದಿರುವ ಜೀವಕೋಶ ರೋಗಗ್ರಸ್ತವಾದಾಗ ಆಗುವ ರಾಸಾಯನಿಕ ಬದಲಾವಣೆಗಳು, ಸ್ತನಿಗಳ ಕಾಯಿಲೆ ತಡೆಗಟ್ಟುವ ಇಮ್ಯೂನ್ ವ್ಯವಸ್ಥೆ, ಜೀವ ವಿಕಾಸ, ಸೂಕ್ಷ್ಮ ಜೀವಿಗಳಿಂದ ಕಾಯಿಲೆ ಬರಲು ಕಾರಣ ಇವೇ ಮುಂತಾದ ನೂರಾರು ಬಗೆಯ ಸಂಶೋಧನೆಗಳೂ BIನ ಅಂಗಗಳು.

ಕೋಶಕೇಂದ್ರದಲ್ಲಿ ತಳಿ ಮಾಹಿತಿ ಇದ್ದ ಮಾತ್ರಕ್ಕೇ ಜೈವಿಕ ಕ್ರಿಯೆ ನಡೆಯುವುದಿಲ್ಲ. ಜೈವಿಕ ಕ್ರಿಯೆ ಸುಸೂತ್ರವಾಗಿ ಸಾಗಬೇಕಾದರೆ, ಆಯಾ ಕೋಶಕೆಲಸಕ್ಕೆ ಬೇಕಾದ ತಳಿ ಮಾಹಿತಿಯನ್ನು ಕೋಶಕೇಂದ್ರದಿಂದ ಶೇಖರಿಸಿ ಹೊರತಂದು, ಅದರ ಆಣತಿಯಂತೆ ಕಾರ್ಯ ಕೈಗೊಳ್ಳುವ ಯಂತ್ರಾಗಾರ ಬೇಕು. ಸ್ಥೂಲವಾಗಿ ಹೇಳಬಹುದಾದರೆ, ಪ್ರೋಟೀನ್ ಬೃಹದಣುಗಳೇ ಈ ಯಂತ್ರಾಗಾರ ಎನ್ನಬಹುದು. ಪ್ರೋಟೀನುಗಳು, ಡಿ.ಎನ್.ಎ.ಯಲ್ಲಿರುವ ತಳಿ ಸಂಕೇತವನ್ನು ಯಶಸ್ವಿಯಾಗಿ ಬಳಸಿಕೊಂಡು ಜೀವಕೋಶದ ಎಲ್ಲ ಕ್ರಿಯೆಗಳನ್ನೂ ನಡೆಸುತ್ತವೆ. ಪ್ರೋಟೀನುಗಳ ಗುಣ ಅವುಗಳ ಮೂರು - ಆಯಾಮ ರಚನೆಯ ಪರಿಣಾಮ (three-dimensional structure). ಆದ್ದರಿಂದಲೇ, ಜೀವಕೋಶಗಳ ವರ್ತನೆಯನ್ನು ಅರ್ಥಮಾಡಿಕೊಳ್ಳಲು, ಪ್ರೋಟೀನುಗಳ ರಚನೆ, ಕಾರ್ಯ ವಿಧಾನ ಮುಂತಾದುವನ್ನು ತಿಳಿಯಬೇಕಾಗುತ್ತದೆ. ಪ್ರೋಟೀನುಗಳ ಮೂರು ಆಯಾಮ-ರಚನೆಗಳನ್ನು ಎಕ್ಸ್-ಕಿರಣ ಸ್ಫಟಿಕ ತಂತ್ರಜ್ಞಾನದ (X-ray crystallography) ಸಹಾಯದಿಂದ ನಿರ್ಧರಿಸುತ್ತಾರೆ. ನಮ್ಮ ದೇಹಕ್ಕೆ ಬೇಕಾದ ಆಕ್ಸಿಜನ್ ಪೂರೈಸುವಲ್ಲಿ ಬಹು ಮುಖ್ಯವಾದ ಎರಡು ಪ್ರೋಟೀನುಗಳ ರಚನೆಗಳನ್ನು (ಹೀಮೊಗ್ಲಾಬಿನ್ ಮತ್ತು ಮಯೊಗ್ಲಾಬಿನ್) ೧೯೬೦-೧೯೬೨ರಲ್ಲಿ ಕಂಡುಕೊಳ್ಳಲಾಯಿತು. ಈ ಸಂಶೋಧನೆಗಳಿಗೆ ಮೂವತ್ತು ವರ್ಷಗಳೇ ಬೇಕಾದವು. ಅನಂತರದ ಪ್ರಾಯೋಗಿಕ, ಸೈದ್ಧಾಂತಿಕ ಬೆಳವಣಿಗೆಗಳಿಂದಾಗಿ, ಈಗ ಪ್ರೋಟೀನುಗಳ ರಚನೆಯನ್ನು ನಿರ್ಧರಿಸಲು ೧ ವಾರದಿಂದ ೧ ವರ್ಷ ಸಾಕಾಗುತ್ತದೆ. ಈಗಾಗಲೇ ಸುಮಾರು ೨೦,೦೦೦ ಪ್ರೋಟೀನುಗಳ ರಚನೆ ತಿಳಿದಿದೆ. ಪ್ರೋಟೀನುಗಳ ರಚನೆಯನ್ನು ಅಭ್ಯಸಿಸುವುದರಿಂದ ಅವುಗಳ ಗುಣಗಳ ಆಳ ಪರಿಚಯವಾಗಿ, ಜೀವಕೋಶಗಳ ವರ್ತನೆಯನ್ನು ಅಣುಮಟ್ಟದಲ್ಲಿ ಅರಿಯಲು ಸಾಧ್ಯವಾಗುತ್ತದೆ. ಈ ಎಲ್ಲ ತಂತ್ರಗಳೂ BIಯ ಅವಿಭಾಜ್ಯ ಅಂಗಗಳು.

### ಇದೊಂದು ಪ್ರಯೋಗಾಲಯವೇ?

BI ಪ್ರಯೋಗಾಲಯಕ್ಕೂ (ಇವುಗಳನ್ನು ಪ್ರಯೋಗಾಲಯಗಳು ಎಂದು ಕರೆಯಬಹುದಾದರೆ!), ಇತರ ಜೀವಶಾಸ್ತ್ರ ಪ್ರಯೋಗಾಲಯಗಳಿಗೂ ಹೋಲಿಕೆಯೇ ಇಲ್ಲ. ಜೀವಶಾಸ್ತ್ರ ಪ್ರಯೋಗಾಲಯಗಳಲ್ಲಿ ನಾವು ಸಾಧಾರಣವಾಗಿ ಕಾಣುವುದು ಸಹಸ್ರಾರು ರಾಸಾಯನಿಕ ವಸ್ತುಗಳ ಬಾಟಲಿಗಳು, ಪ್ರಯೋಗ ಪಾತ್ರೆಗಳು, ನಳಿಕೆಗಳು, ದೊಡ್ಡ ತಿರುಗು ಯಂತ್ರಗಳು (centrifuges), ಬ್ಯಾಕ್ಟೀರಿಯಾಗಳನ್ನು ಶೀಘ್ರವಾಗಿ ಬೆಳೆಸಲು ಬೇಕಾದ ಸ್ಥಿರ ಉಷ್ಣಾಂಶ ಕಾವುಪೆಟ್ಟಿಗೆಗಳು (shaker incubators), ಏಕಕೋಶ ಹಾಗೂ ಇತರ ಸೂಕ್ಷ್ಮಾಣು ಜೀವಿಗಳನ್ನು ನಾಶ ಮಾಡಲು ಬೇಕಾದ ಉಗಿಪಾತ್ರೆಗಳು (autoclaves), ಶೈತ್ಯಾಗಾರಗಳು (cold rooms) ಮುಂತಾದುವು. ಅನತಿ ದೂರದಲ್ಲೇ ಇಲಿ, ಮೊಲ, ಮಂಗ ಮುಂತಾದ ಸಹಸ್ರಾರು ಪ್ರಯೋಗ ಪಶುಗಳಿರುವ ಕೋಣೆಗಳು (animal houses) ಮತ್ತು ಸಸ್ಯಗಳ ನಿಯಂತ್ರಿತ ಬೆಳವಣಿಗೆಗೆ ಬೇಕಾದ, ಕೀಟರಹಿತ ಗಾಜಿನ ಮನೆಗಳು (glass house) ಕಾಣಸುತ್ತವೆ. BI ಪ್ರಯೋಗಾಲಯವಾದರೋ ಸ್ವಲ್ಪವೂ ಧೂಳಿಲ್ಲದ, ಅನೇಕ ಕಂಪ್ಯೂಟರುಗಳಿರುವ ಸುಸಜ್ಜಿತ ಹವಾ ನಿಯಂತ್ರಿತ ಕೋಣೆ. ಜೀವಕೋಶಗಳಲ್ಲಿರುವ ದೈತ್ಯಾಣುಗಳ ಮೂರು-ಆಯಾಮ ರಚನೆಗಳನ್ನು (three-dimensional structures) ಯಾವ ಬಣ್ಣದಲ್ಲಾದರೂ ಚಿತ್ರಿಸಿ, ಯಾವ ದಿಕ್ಕಿನಲ್ಲಾದರೂ ತಿರುಚಿ ನೋಡಲು ಸಹಾಯಕವಾಗುವ ಗ್ರಾಫಿಕ್ಸ್ ತೆರೆಗಳನ್ನು (computer graphics terminals) ಈ ಕೋಣೆಗಳಲ್ಲಿ ಕಾಣಬಹುದು. BIನಲ್ಲಿ ಕೆಲಸ ಮಾಡುವ ವಿಜ್ಞಾನಿಗಳು ಯಾವ ದೈಹಿಕ ಪರಿಶ್ರಮವನ್ನೂ ಪಡದೆಯೇ ತಮ್ಮ ಸಂಶೋಧನೆಗಳನ್ನು ನಡೆಸುತ್ತಾರೆ. ಇವರು ಕಂಪ್ಯೂಟರ್ ಪ್ರೋಗ್ರಾಮುಗಳನ್ನು ಬರೆಯಬಹುದು, ಪ್ರಪಂಚದ ಬೇರೆಡೆಗಳಿಂದ ತಮಗೆ ಬೇಕಾದ ಮಾಹಿತಿಯನ್ನು ಇಂಟರ್‌ನೆಟ್ ಮೂಲಕ ಪಡೆಯಬಹುದು. ಒಟ್ಟಿನಲ್ಲಿ, ಜೀವಶಾಸ್ತ್ರದ ಇತರ ಪ್ರಯೋಗಾಲಯಗಳಿಗೂ, BI ಪ್ರಯೋಗಾಲಯಕ್ಕೂ

ಇರುವ ವ್ಯತ್ಯಾಸವನ್ನು, ಬೆವರು ಹರಿಸಿ ಮಾಡುವ ಕೂಲಿ ಕೆಲಸಕ್ಕೂ, ಹವಾ ನಿಯಂತ್ರಿತ ಕೋಣೆಯಲ್ಲಿ ಕಾಲ ಕಳೆಯುವ ಆಫೀಸರರ ಕೆಲಸಕ್ಕೂ ಹೋಲಿಸಬಹುದು. ಆದರೂ, ಈ ಎರಡೂ ಬಗೆಯ ವಿಜ್ಞಾನಿಗಳ ಗುರಿಯೂ ಜೈವಿಕ ಕ್ರಿಯೆಗಳನ್ನು ಅರ್ಥ ಮಾಡಿಕೊಳ್ಳುವುದೇ ಎಂಬುದನ್ನು ಮರೆಯಬಾರದು !

**ಮಾಹಿತಿಯ ಸಂಗ್ರಹ, ಪ್ರಚಾರ**

BI ಸಂಬಂಧಿತ ಚಟುವಟಿಕೆಗಳನ್ನು ಮೂರು ಹಂತಗಳಲ್ಲಿ ಪರಿಶೀಲಿಸುವುದು ಅನುಕೂಲ. ಮೊದಲನೆಯ ಹಂತ, BIಗೆ ಬೇಕಾದ ಮಾಹಿತಿಯನ್ನು ಪ್ರಾಯೋಗಿಕವಾಗಿ ಪಡೆಯುವುದು. ವಿವಿಧ ಜೀವಿಗಳ ತಳಿ ಸಂದೇಶವನ್ನು ನಿರ್ಧರಿಸುವುದು ಈ ಭಾಗದ ಕೆಲಸ. ಜೀವಕೋಶಗಳ ಡಿ.ಎನ್.ಎ. ಅಣುಗಳಲ್ಲಿರುವ ನ್ಯೂಕ್ಲಿಯೋಟೈಡ್ ಅಕ್ಷರಗಳ ಸರಣಿಯೇ (nucleotide sequence or genomic sequence) ತಳಿ ಮಾಹಿತಿ. ಈ ಮಾಹಿತಿ ಗಳಿಸುವುದಕ್ಕೆ ಬೇಕಾದ ಪ್ರಾಯೋಗಿಕ ವಿಧಾನಗಳು ೧೯೭೦-೧೯೮೦ರ ದಶಕದಲ್ಲಷ್ಟೇ ಅಭಿವೃದ್ಧಿಯಾದುವು. ನಂತರ ಈ ಕೆಲಸವನ್ನು ತಪ್ಪುಗಳು ಬಾರದಂತೆ ಅತ್ಯಂತ ತ್ವರಿತವಾಗಿ ನಿರ್ಧರಿಸಲು ಕಂಪ್ಯೂಟರ್‌ಗಳ, ಸ್ವಯಂಚಾಲಿತ ಯಂತ್ರಗಳ ಸಹಾಯ ಪಡೆಯಲಾಗಿದೆ. ಈ ಯಂತ್ರಗಳ ಬಳಕೆಯಿಂದ ಅನೇಕ ಸೂಕ್ಷ್ಮಾಣುಗಳ, ಕೀಟ, ಸಸ್ಯ ಹಾಗೂ ಪ್ರಾಣಿಗಳ ತಳಿ ಸಂಕೇತ ಉಸಿರುಗಟ್ಟಿಸುವ ವೇಗದಲ್ಲಿ ಹರಿದುಬರುತ್ತಿದೆ. ಈ ಲೇಖನ ಬರೆದ ದಿನ, ಎಂದರೆ, ಮಾರ್ಚಿ ೨೭, ೨೦೦೩ರಂದು ಲಭ್ಯವಿರುವ ತಳಿ ಮಾಹಿತಿ ಹೀಗಿದೆ: ೯೮ ಬ್ಯಾಕ್ಟೀರಿಯಾಗಳ ಪೂರ್ಣ ತಳಿ ಮಾಹಿತಿ ಈಗಾಗಲೇ ಲಭ್ಯವಿದೆ. ಇನ್ನೂ ೧೩೧ ಬ್ಯಾಕ್ಟೀರಿಯಾಗಳ ತಳಿ ಮಾಹಿತಿ ಸದ್ಯದಲ್ಲಿಯೇ ದೊರೆಯಲಿದೆ. ೨೪ ಆರ್ಕಿಯಾಗಳ (ಬ್ಯಾಕ್ಟೀರಿಯಾಗಳನ್ನು ಹೋಲುವ ಸೂಕ್ಷ್ಮಾಣುಗಳು) ತಳಿ ಮಾಹಿತಿ ತಿಳಿದಿದೆ. ಇನ್ನೂ ೨ ಆರ್ಕಿಯಾಗಳ ತಳಿ ಮಾಹಿತಿ ಹೊರಬರುವುದರಲ್ಲಿದೆ. ಹಾಗೆಯೇ, ಎರಡು ಸಸ್ಯಗಳ, ಮೂರು ಸ್ತನಿಗಳ, ೨ ಕೀಟಗಳ, ಇತರ ನಾಲ್ಕು ಪ್ರಾಣಿಗಳ, ಆರು ಮಲೇರಿಯಾದಂತಹ ಕಾಯಿಲೆ ಬರಿಸುವ ಸೂಕ್ಷ್ಮಾಣುಗಳ, ೧ ಹುಳದ ಪೂರ್ಣ ತಳಿ ಮಾಹಿತಿ ದೊರೆಯುತ್ತದೆ. ಒಂದೊಂದು ತಳಿ ಸಂಕೇತವೂ, ದಶಲಕ್ಷ ನ್ಯೂಕ್ಲಿಯೋಟೈಡುಗಳಿಂದ ಹಿಡಿದು ೫೦೦ ಕೋಟಿ ನ್ಯೂಕ್ಲಿಯೋಟೈಡುಗಳಷ್ಟು (A, T, G, C ಅಕ್ಷರಗಳು) ಉದ್ದನೆಯ ಮಾಹಿತಿ. ಹಿಂದೆ ಮಾಹಿತಿಯನ್ನು ಸಂಗ್ರಹಿಸುತ್ತಿದ್ದಂತೆ ತಳಿ ಮಾಹಿತಿಯನ್ನು ಪುಸ್ತಕಗಳಲ್ಲಿ ಪ್ರಕಟಿಸುವುದು ಸಾಧ್ಯವಿಲ್ಲ. ಅಂತಹ ಪುಸ್ತಕಗಳನ್ನು ಮುದ್ರಿಸಿದ್ದೇ ಆದರೆ, ದೊಡ್ಡ ವಾಚನಾಲಯಗಳನ್ನೂ ತುಂಬುತ್ತವೆ. ಜೊತೆಗೆ ಅಂತಹ ಪುಸ್ತಕಗಳ ಉಪಯೋಗ ಪಡೆಯುವುದೂ ದುಸ್ಸಾಹಸದ ಕೆಲಸ ಎನ್ನಿಸುತ್ತದೆ. ನ್ಯೂಕ್ಲಿಯೋಟೈಡ್ ಪ್ರತ್ಯಾಮ್ಲಗಳ ಸರಣಿಗಳನ್ನು ಈಗ ನೇರವಾಗಿ ಕಂಪ್ಯೂಟರ್ ಡಿಸ್ಕುಗಳಿಗೆ ವರ್ಗಾಯಿಸಿ, 'ಬ್ಯಾಂಕುಗಳಲ್ಲಿ' ಸಂಗ್ರಹಿಸಲಾಗುತ್ತಿದೆ. ಜೀವವಿಜ್ಞಾನಿಗಳ ಹಿರಿಮೆಯಿಂದಾಗಿ, ಈ ಬ್ಯಾಂಕುಗಳ ತಳಿ ಮಾಹಿತಿ ಎಲ್ಲರಿಗೂ ಉಚಿತವಾಗಿ ಲಭ್ಯವಿದೆ. ಇಂಟರ್‌ನೆಟ್ ಮೂಲಕ, ಈ ಮಾಹಿತಿಯನ್ನು ಯಾರು ಬೇಕಾದರೂ ಪಡೆಯಬಹುದು. ಈ ಕೆಲಸವನ್ನೆಲ್ಲಾ ಸುಸೂತ್ರವಾಗಿ ನಿರ್ವಹಿಸಲು, ಜೀವ ಶಾಸ್ತ್ರಜ್ಞರಲ್ಲದೇ, ಕಂಪ್ಯೂಟರ್ ಪರಿಣತರ ಅವಶ್ಯಕತೆಯೂ ಇದೆ. ಆದ್ದರಿಂದ, ನೂರಾರು IT (Information Technology) ಪರಿಣತರು ಈ ದಿಸೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ಈ ಮಾಹಿತಿಯನ್ನೆಲ್ಲ ಕ್ಷಣಮಾತ್ರದಲ್ಲಿ, ಬೇಕಾದ ಭಾಗ ಹೊರತೆಗೆಯಲು ಸೂಕ್ತ ಕಂಪ್ಯೂಟರ್ ಪ್ರೋಗ್ರಾಮುಗಳ ತಯಾರಿಕೆಯಲ್ಲಿ ತೊಡಗಿದ್ದಾರೆ. ಈ ಅಗತ್ಯದಿಂದಾಗಿ, ಅನೇಕ ಕಂಪ್ಯೂಟರ್ ಪರಿಣತರಿಗೆ BI ಉದ್ಯೋಗಾವಕಾಶ ನಿರ್ಮಿಸಿದೆ. ಇಂತಹ ಕೆಲಸಗಳಿಗೆ ಅತ್ಯಲ್ಪ ಜೀವ ಶಾಸ್ತ್ರದ ಪರಿಚಯ ಸಾಕಾಗುತ್ತದೆ. ಆದರೆ ಕಂಪ್ಯೂಟರ್ ಜ್ಞಾನ ಮಾತ್ರ ಧಾರಾಳವಾಗಿ ಬೇಕು.

**ಮೋಡಿ ಬರಹವನ್ನೂ ಮೀರಿಸುವ ಜಿಗುಟು**

BI ಚಟುವಟಿಕೆಗಳ ಎರಡನೆಯ ಭಾಗ, ಈಗಾಗಲೇ ತಿಳಿದುಬಂದಿರುವ ತಳಿ ಮಾಹಿತಿಯನ್ನು (ನ್ಯೂಕ್ಲಿಯೋಟೈಡುಗಳ ಸರಣಿ) ಅರ್ಥಮಾಡಿಕೊಳ್ಳುವುದು. ಕುಮಾರ ವ್ಯಾಸ ಭಾರತವನ್ನು ಕೊಂಡ ಮಾತ್ರಕ್ಕೇ ಅದರ ಸವಿ ನಮಗೆ ತಿಳಿಯುವುದಿಲ್ಲ, ಅದನ್ನು ಆಸ್ವಾದಿಸಲು ವಿಶೇಷ ಪ್ರಯತ್ನ ಅಗತ್ಯವಾಗುತ್ತದೆ. ಇದೇ ರೀತಿ ತಳಿ ಮಾಹಿತಿ ಸಂಗ್ರಹಿಸುವುದರಿಂದಲೇ ಉಪಯುಕ್ತ ಜೈವಿಕ ಮಾಹಿತಿ ದೊರಕುವುದಿಲ್ಲ, ಸಂದೇಶಕ್ಕೂ, ಜೈವಿಕ ಕ್ರಿಯೆಗೂ ಇರುವ ನಿಕಟ ಸಂಬಂಧ ತಿಳಿಯಲು ವಿಶೇಷ ಪ್ರಯತ್ನ ಸಂಶೋಧನೆಗಳು ಅಗತ್ಯ. ಇಂತಹ ಸಂಶೋಧನೆಯ ಹಾದಿಯಲ್ಲಿ ಅನೇಕ ಸಮಸ್ಯೆಗಳು ಎದುರಾಗುತ್ತವೆ. ಬ್ಯಾಕ್ಟೀರಿಯಾದಂತಹ ಸೂಕ್ಷ್ಮಾಣು ಜೀವಿಗಳ ತಳಿ, ಅದಕ್ಕೆ ಬೇಕಾದ ಸಂದೇಶವನ್ನು ಮಾತ್ರ ಹೊಂದಿ, ಗಾತ್ರದಲ್ಲಿ ಸಣ್ಣದಾಗಿರುತ್ತದೆ. ನಮ್ಮ ತಳಿ ಸಂಕೇತದಲ್ಲಿ ಸುಮಾರು ೩೦೦ ಕೋಟಿ ಪ್ರತ್ಯಾಮ್ಲಗಳಿವೆ. (A, T, G, C ಅಕ್ಷರಗಳ ಮಾಲೆ), ಇದನ್ನು ೩೦೦ ಕೋಟಿ ಅಕ್ಷರಗಳ ಉದ್ಗ್ರಂಥವೆನ್ನಬಹುದು. ಈ ಮಾಹಿತಿಯಲ್ಲಿ ಶೇ. ೯೮-೯೯ ಭಾಗಕ್ಕೆ ಯಾವ ಉಪಯೋಗವೂ ಇದ್ದಂತೆ ಕಾಣುವುದಿಲ್ಲ. ಇದು ಬರಿಯ ಅಸಂಬದ್ಧ ಪ್ರಲಾಪದಂತೆ ತೋರುತ್ತದೆ. ನಮ್ಮ ಜೀವಕೋಶಗಳು ಬಳಸಿಕೊಳ್ಳುವ ಮಾಹಿತಿ, ತಳಿಯ ಶೇ. ೧-೨ ಭಾಗ ಮಾತ್ರ. ಆದ್ದರಿಂದ ಈ ಮಾಹಿತಿಯ ಅರ್ಥ ನಿರೂಪಿಸುವುದು ಕ್ಲಿಷ್ಟದ ಕೆಲಸ ಎನ್ನಿಸುತ್ತದೆ. ಇಲ್ಲಿರುವ ಸಮಸ್ಯೆಯ ನಿರೂಪಣೆಗಾಗಿ ಕೆಳಗೆ ಕೊಟ್ಟಿರುವ ಸಾಲುಗಳನ್ನು ಪರೀಕ್ಷಿಸಿ.

''ಆಶಕುಡಬಮಲುಪ್ರೋಕೀಪಿಪ್ಯಾವೋಗಿಲಃದ್ಯತ್ರದಬದಬದಬದಬದಬದಬದಬದಬದಬದಬದಬದಬದಬದಕ್ರೋಡ್ಲಾಮುಹುವೆಡ್ಮಗಿಟ್ಟುಪ್ರಂಲಡುಪೀಬೀಗೂವೇಫಾಕೇಗೂಮಮಸಾಯೂಯಾರೇನಮೊವಕಾಂಬಸುಬ್ದಕೀಮಸ್ಸಿತೂಸಿಂಬಳದನೊಣನೀನುತ್ತೆಪ್ಯಾಲ್ಲಾಃಜಿಸುಲೂಬೂವೋಕೇಬಿಕೋಟಿಡಮಕುಹೆಕಭೆಂಪ್ಯೂಡ್ಮೋಬ್ಲಾಕ್ರೋವ್ಲಾಕೇನುನಗುವುನಾಪ್ರಮೋಚ್ಚಲೆನಾದ್ಯಸಹಜದಕಾರ್ಥಸ್ತುಪಿಲ್ಲಮನಿಕೇಸಬ್ರಟ್ಮಃಯುಡ್ಲಾವಾಡ್ರೋಕ್ಲಮುಹಾರಿಟ್ಸಕಡ್ಲೋಟ್ರೇಗ್ಲಾವಿಟಧರ್ಮಮುಂಡಹಾಬ್ದಿಲ್ಮಶಪೆಸ್ಟಕಕಕಕಕಕಕಕಕಕಕಕಕಕ''.

ಮೇಲಿನ ವಾಕ್ಯಕ್ಕೆ ಏನಾದರೂ ಅರ್ಥವಿದೆ ಎನಿಸುತ್ತದೆಯೇ ? ನಮ್ಮ ಜೀವಕೋಶಗಳ ತಳಿ ಸಂಕೇತವೂ ಇಷ್ಟೇ ಅರ್ಥಪೂರ್ಣವಾದುದು. ನೀವು ಗಮನಿಸಿ ನೋಡಿದರೆ, ಮೇಲಿನ ವಾಕ್ಯದಲ್ಲಿ ಡೀ.ವೀ.ಜಿ.ಯವರ ಎರಡು ನುಡಿಮುತ್ತುಗಳಿವೆ. ಮೊದಲನೆಯದು ''ಸಿಂಬಳದ ನೊಣ ನೀನು.'' ಇನ್ನೊಂದು ಅಣಿಮುತ್ತು, ''ನಗುವು ಸಹಜದ ಧರ್ಮ'' ಮೂರು ತುಂಡಾಗಿ ಹಂಚಿ ಹೋಗಿದೆ. ನಮ್ಮ ತಳಿ ಸಂಕೇತವೂ ಹೀಗೆಯೇ! ಅರ್ಥ ಪೂರ್ಣ ಪ್ರತ್ಯಾಮ್ಲಗಳ ಸರಣಿಯ ನಡುವೆ ಉದ್ದುದ್ದನೆಯ, ನಮಗೆ ತಿಳಿದಿರುವಂತೆ ಯಾವ ಪ್ರಾಮುಖ್ಯತೆಯೂ ಇಲ್ಲದ ಪ್ರತ್ಯಾಮ್ಲಗಳ ಸರಣಿ ನುಸುಳುತ್ತದೆ. ಅಲ್ಲಲ್ಲಿ ಅರ್ಥ ಶೂನ್ಯ ಪುನರಾವರ್ತನೆಗಳಿವೆ. ಮೇಲಿನ ವಾಕ್ಯದಲ್ಲಿ ಅನೇಕ ಸಲ ಒಟ್ಟೊಟ್ಟಿಗೇ ಬರುವ 'ದಬದಬ' ಅಥವಾ 'ಕಕಕ'ಗಳ ಗುಂಪುಗಳನ್ನು ಗಮನಿಸಿ. ನಮ್ಮ ಜೀವಕೋಶಗಳ ತಳಿ ಸಂಕೇತದ ಬರಿಯ ಶೇ. ೧-೨ಭಾಗ ಮಾತ್ರ ಅರ್ಥಪೂರ್ಣ. ಈ ಭಾಗಗಳಲ್ಲಿ ಗುರುತಿಸಿ, ಅದು ಸಂಕೇತಿಸುವ ಜೈವಿಕ ಕ್ರಿಯೆಯನ್ನು ಪತ್ತೆಹಚ್ಚುವುದು ಸುಲಭದ ಕೆಲಸವಲ್ಲ. ಈ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು, ಜೀವಶಾಸ್ತ್ರದಲ್ಲಿ ಹಾಗೂ ಕಂಪ್ಯೂಟರ್ ಆಧಾರಿತ ತಂತ್ರಗಳಲ್ಲಿ ಸಾಕಷ್ಟು ಪರಿಶ್ರಮ ಬೇಕಾಗುತ್ತದೆ. BI ತರಬೇತಿ ಈ ಎಲ್ಲ ಚಟುವಟಿಕೆಗಳನ್ನು ಒಳಗೊಂಡಿರಬೇಕು.

**ನೂರಾರು ಸಾಧ್ಯತೆಗಳು**

BI ಮೂರನೆಯ ಭಾಗ ಬಹು ದೊಡ್ಡದು. ಜೀವ ರಾಶಿಗಳ ತಳಿ ಸಂಕೇತವನ್ನು ನಮ್ಮ ಒಳಿತಿಗೆ, ಲಾಭಕ್ಕೆ ಹೇಗೆ ಬಳಸಿಕೊಳ್ಳಬಹುದು ಎಂಬುದನ್ನು ಈ ಭಾಗ ಅರಸುತ್ತದೆ. ಇಂತಹ ಪ್ರಯತ್ನಗಳಿಗೆ ಇರುವುದು ಬರಿಯ ಒಂದು ದಾರಿಯಲ್ಲ,

COMPUTATIONAL GENOMICS
MICROARRAYS
HUMAN GENOME
GENETIC DISEASES
PROTEOMICS
LIFE SCIENCE
MEDICINE
COMPUTATIONAL GENOMICS
STRUCTURAL GENOMICS
BIOINFORMATICS
STRUCTURAL BIOLOGY
COMPUTING SERVICES
STRUCTURAL BIOLOGY
PLANT GENOMICS
MOLECULAR EVOLUTION
PLANT GENOMICS
STRUCTURAL MODELING

ಸಂಶೋಧಕನ ಜ್ಞಾನ ಹೆಚ್ಚಿದಂತೆ ಹೊಸ ದಿಕ್ಕುಗಳು ಹೊಳೆದಾವು. ಆದ್ದರಿಂದ, ಈ ಭಾಗಕ್ಕೆ ಸರಳ ವಿವರಣೆ ಕೊಡುವುದು ಸುಲಭವಲ್ಲ. ಕೆಲ ಉದಾಹರಣೆ ಗಳೊಂದಿಗೆ ಇದನ್ನು ವಿವರಿಸಲು ಪ್ರಯತ್ನಿಸುತ್ತೇನೆ. ಈಗಾಗಲೇ ನೂರಾರು ಸೂಕ್ಷ್ಮಾಣುಗಳ ತಳಿ ಮಾಹಿತಿಯನ್ನು ಕಂಪ್ಯೂಟರ್ ಬ್ಯಾಂಕ್‌ಗಳಲ್ಲಿ ಶೇಖರಿಸಲಾಗಿದೆ. ಸೂಕ್ಷ್ಮಾಣುಗಳ ತಳಿ ಮಾಹಿತಿ ನಿರ್ಧರಿಸಲು ವಿಶೇಷ ಪ್ರಯತ್ನಗಳು ನಡೆದಿರುವುದಕ್ಕೆ ಸೂಕ್ತ ಕಾರಣಗಳಿವೆ. ಅನೇಕ ಸೂಕ್ಷ್ಮಾಣುಗಳು ನಮಗೆ ಮತ್ತು ನಾವು ಸಾಕಿಕೊಳ್ಳುವ ಪ್ರಾಣಿಗಳಿಗೆ ಹಾನಿ ಮಾಡುತ್ತವೆ. ಇವುಗಳನ್ನು ನಿಯಂತ್ರಿಸುವುದು ಬಹಳ ಅಗತ್ಯದ ಕೆಲಸ. ಸೂಕ್ಷ್ಮಾಣು ಜೀವಿಗಳ ಜೀವಚಕ್ರವನ್ನು ಕೂಲಂಕಷವಾಗಿ ಅರಿಯುವುದರಿಂದ ಅವುಗಳ ನಿಯಂತ್ರಣ ಸಾಧ್ಯವಾಗಬಹುದು. ಸೂಕ್ಷ್ಮಾಣುಜೀವಿಗಳ ಜೈವಿಕ ಕ್ರಿಯೆಯನ್ನು ಅವುಗಳ ತಳಿ ಮಾಹಿತಿ ಸೂಚಿಸುತ್ತದೆ. ಈ ಮಾಹಿತಿಯ ನೆರವಿನಿಂದ ಇವುಗಳ ಪೀಡೆ ನಿವಾರಿಸಿಕೊಳ್ಳಲು ಸಾಧ್ಯವಾಗಬಹುದು. ಇಂತಹ ಸಂಶೋಧನೆಗೆ, ಮೊದಲು ತಳಿ ಸಂಕೇತ ಸೂಚಿಸುವ ವಿವಿಧ ಪ್ರೋಟೀನುಗಳ ಜೀನುಗಳನ್ನು ಗುರುತಿಸಬೇಕು (ಜೀವಕೋಶಗಳೂ ಈ ಜೀನುಗಳಲ್ಲಿರುವ ಪ್ರತ್ಯಾಮ್ಲಗಳ ಸರಣಿ ಬಳಸಿ, ಆಯಾ ಪ್ರೋಟೀನುಗಳ ಸಂಶ್ಲೇಷಣೆ ನಡೆಸುತ್ತವೆ). ಸೂಕ್ಷ್ಮಾಣು ಜೀವಿಗೆ ಅತ್ಯಗತ್ಯ ಬೇಕಾಗುವ ಪ್ರೋಟೀನನ್ನು ಸ್ಥಗಿತಗೊಳಿಸಿದರೆ, ಸೂಕ್ಷ್ಮಾಣು ಜೀವಿ ಬದುಕಲಾರದು. ಆದರೆ, ನಮ್ಮ ಭೂಮಿಯಲ್ಲಿ ಬದುಕುತ್ತಿರುವ ಎಲ್ಲ ಜೀವಿಗಳು ಒಂದೇ ಮೂಲದಿಂದ ವಿಕಾಸವಾಗಿ ಬಂದಿರುವುದರಿಂದ, ಸೂಕ್ಷ್ಮಾಣುಜೀವಿಗೆ ಅಗತ್ಯವಾದ ಪ್ರೋಟೀನನ್ನು ಹೋಲುವ ಅಣುವೇ ನಮ್ಮ ದೇಹದಲ್ಲೂ, ನಮ್ಮ ತಳಿಯಿಂದ ತಯಾರಾಗಿ, ನಮ್ಮ ಜೀವಕೋಶಗಳ ಅಗತ್ಯವನ್ನು ಪೂರೈಸುತ್ತಿರಬಹುದು. ಆದ್ದರಿಂದ, ನಾವು ಗುರುತಿಸುವ ಸೂಕ್ಷ್ಮಜೀವಿಯ ಪ್ರೋಟೀನನ್ನು ಹೋಲುವ ಅಣುವಿನ ಅಗತ್ಯ ನಮಗಿಲ್ಲ ಎಂಬುದನ್ನು ಮೊದಲು ಖಚಿತಪಡಿಸಿಕೊಳ್ಳಬೇಕಾಗುತ್ತದೆ. ಇಲ್ಲದಿದ್ದರೆ ಬಳಸಿದ ಔಷಧ ವಿಷವಾದೀತು. ಇದಕ್ಕೆ, ನಮ್ಮ ತಳಿ ಮಾಹಿತಿಯನ್ನೂ, ಸೂಕ್ಷ್ಮಜೀವಿಯ ತಳಿ ಮಾಹಿತಿಯನ್ನೂ ತುಲನಾತ್ಮಕವಾಗಿ ಪರಿಶೀಲಿಸಬೇಕಾಗುತ್ತದೆ. ನಮಗೆ ಅಗತ್ಯವಿಲ್ಲದ ಆದರೆ ಸೂಕ್ಷ್ಮಾಣುಜೀವಿಗೆ ಅಗತ್ಯವಿರುವ ಪ್ರೋಟೀನುಗಳನ್ನು ಗುರುತಿಸಿದರೆ, ಅಂತಹ ಪ್ರೋಟೀನಿನ ಚಟುವಟಿಕೆಗಳನ್ನು ನಿಯಂತ್ರಿಸುವ ಉಪಾಯ ಹುಡುಕಿ, ಜೀವಿಯ ಪ್ರಾಬಲ್ಯ ಕಡಿಮೆ ಮಾಡಬಹುದು. ಇಂತಹ ಕೆಲಸಗಳಿಗೆ ಸಾಕಷ್ಟು ಪರಿಣತಿ ಬೇಕಾಗುತ್ತದೆ. ಜೀವಕೋಶಗಳ ವರ್ತನೆಯ ಬಗ್ಗೆಯೂ ಆಳ ಜ್ಞಾನ ಅವಶ್ಯಕ. ಈಗ ಸಾಮಾನ್ಯವಾಗಿ ಬಳಕೆಯಲ್ಲಿರುವ ಏಡ್ಸ್ ಔಷಧಿಗಳು ಏಡ್ಸ್ ವೈರಾಣುವಿಗೆ ಬೇಕಾದ ಆದರೆ ನಮಗೆ ಬಹಳ ಮುಖ್ಯವಲ್ಲದ ಪ್ರೋಟೀನುಗಳ ಚಟುವಟಿಕೆಯಲ್ಲಿ ಹಸ್ತಕ್ಷೇಪ ಮಾಡುತ್ತವೆ. ಇವು ಪ್ರೋಟಿಯೇಸ್ ಹಾಗೂ ರಿವರ್ಸ್ ಟ್ರಾನ್ಸ್ ಕ್ರಿಪ್ಟೇಸ್ ಎಂಬ ಹೆಸರಿನ ಪ್ರೋಟೀನುಗಳು. ಈ ಔಷಧಿಗಳು BI ತಂತ್ರಜ್ಞಾನದ ನೇರ ಕೊಡುಗೆಗಳು ಎನ್ನಬಹುದು.

ನಮಗೆ ತಗಲುವ ಅನೇಕ ದೈಹಿಕ ತೊಂದರೆಗಳು ಆನುವಂಶಿಕ ಕಾರಣಗಳಿಂದ ಬರುತ್ತವೆ. ನಮ್ಮ ತಳಿ ಸಂಕೇತದಲ್ಲಿರುವ ದೋಷದಿಂದ ಇಂತಹ ಆನುವಂಶಿಕ ದೋಷಗಳು ಉಂಟಾಗುತ್ತವೆ. ತಳಿ ಸಂದೇಶಕ್ಕೂ, ಆನುವಂಶಿಕ ಕಾಯಿಲೆಗಳಿಗೂ ಇರುವ ಸಂಬಂಧಗಳನ್ನು ಗುರುತಿಸಲು ಸಾಧ್ಯವಾದರೆ, ಅಂತಹ ದೋಷಗಳನ್ನು ತಡೆಗಟ್ಟುವತ್ತ ಕ್ರಮ ಕೈಗೊಳ್ಳಬಹುದು. ಈ ಸಂಶೋಧನೆಗಳಿಗೆ ವೈದ್ಯರು, ಜೀವಶಾಸ್ತ್ರಜ್ಞರು, ಕಂಪ್ಯೂಟರ್ ಬಳಕೆಯಲ್ಲಿ ನೈಪುಣ್ಯತೆ ಹೊಂದಿರುವವರು, ಇವರೆಲ್ಲರ ಒಟ್ಟುಗೂಡಿಸಿದ ಪರಿಶ್ರಮ ಬೇಕಾಗುತ್ತದೆ. BIಗೆ ಈ ಎಲ್ಲ ವಿವಿಧ ಕ್ಷೇತ್ರಗಳ ಸಂಶೋಧಕರೂ ಬೇಕು.

ಇನ್ನು ಅನೇಕ ಜೀವಶಾಸ್ತ್ರಜ್ಞರು BIನಲ್ಲಿ ಉತ್ಸಾಹ ತೋರಿಸುವುದು ಯಾವ ಲಾಭಕ್ಕೂ ಅಲ್ಲ. ಇವರ ಗುರಿ ಜೀವಶಾಸ್ತ್ರದ ಅಧ್ಯಯನ, ಜೀವಕೋಶಗಳ ವರ್ತನೆಯನ್ನು ವೈಜ್ಞಾನಿಕ ತಳಹದಿಯಲ್ಲಿ ಅರ್ಥಮಾಡಿಕೊಳ್ಳುವುದು. ತಳಿ ಮಾಹಿತಿ ಇಂತಹ ಸಂಶೋಧನೆಗೆ ವರವಾಗಬಲ್ಲದು. ಈ ನಿಟ್ಟಿನಲ್ಲಿ ಸಂಶೋಧನೆ ನಡೆಸಲು ಜೀವಶಾಸ್ತ್ರದ ನಿಕಟ ಪರಿಚಯ ಅಗತ್ಯ. ಇದೇ ರೀತಿ ಜೀವಶಾಸ್ತ್ರದ ಕಿರುಪರಿಚಯವಿರುವ ಕಂಪ್ಯೂಟರ್ ತಜ್ಞರಿಂದ ಹಿಡಿದು, ಅನೇಕ ಕ್ಷೇತ್ರಗಳ ಸಂಶೋಧಕರನ್ನು BI ಆಕರ್ಷಿಸುತ್ತಿದೆ.

**ಉದ್ಯೋಗಾವಕಾಶಗಳು**

ತಳಿ ಮಾಹಿತಿ ನಿಶ್ಚಯಿಸುವ ಕೆಲಸ ಇಲ್ಲಿಯವರೆಗೆ ಬಹುತೇಕ ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ನಡೆದಿದೆ. ಈ ಕೆಲಸಕ್ಕೆ ಬೇಕಾಗುವ ಹೆಚ್ಚಿನ ಆರ್ಥಿಕ ಬಂಡವಾಳವೇ ಇದಕ್ಕೆ ಮುಖ್ಯ ಕಾರಣ. ಹೀಗಾಗಿ, ತಳಿ ಮಾಹಿತಿ ಸಂಗ್ರಹಿಸುವ, ಪರಿಷ್ಕರಿಸುವ ಕೆಲಸ ನಮ್ಮ ದೇಶದಲ್ಲಿ ದೊಡ್ಡ ಪ್ರಮಾಣದಲ್ಲಿ ನಡೆಯುವುದು ಅಸಂಭವ. ಆದ್ದರಿಂದ ಇಂತಹ BI ಚಟುವಟಿಕೆಗಳಲ್ಲಿ ಉದ್ಯೋಗಾವಕಾಶಗಳೂ ಇರಲಾರವು. ಜೊತೆಗೇ, ಕಂಪ್ಯೂಟರ್ ಕೇಂದ್ರಗಳಲ್ಲಿ ಅತ್ಯಲ್ಪ ಕಾಲದಲ್ಲಿ ನೀಡುವ ತರಬೇತಿ ಉತ್ತಮ ದರ್ಜೆಯದೇ ಆಗಿದ್ದರೂ ಇಂತಹ ಕೆಲಸಗಳನ್ನು ನಿರ್ವಹಿಸಲು ಸಾಕಾಗುವುದಿಲ್ಲ.

ಬೆಂಗಳೂರಿನ ಅನೇಕ ಸಂಸ್ಥೆಗಳು IT ಕ್ಷೇತ್ರದಲ್ಲಿ, ಆದರೆ ಕಂಪ್ಯೂಟರ್ ಆಧಾರಿತ ಮಾಹಿತಿ ಪರಿಷ್ಕರಣೆ, ಅದಕ್ಕೆ ಬೇಕಾಗುವ ಸಾಫ್ಟ್‌ವೇರ್‌ಗಳನ್ನು ಅಭಿವೃದ್ಧಿ ಪಡಿಸುವುದು ಮುಂತಾದ ಕೆಲಸಗಳಲ್ಲಿ ಸಾಕಷ್ಟು ಯಶ ಪಡೆದಿವೆ. ಇತ್ತೀಚೆಗೆ, ಇಂತಹ ಹಲವು ಸಂಸ್ಥೆಗಳು ತಮ್ಮ ಕಾರ್ಯಕ್ಷೇತ್ರವನ್ನು BI ಚಟುವಟಿಕೆಗೂ ವಿಸ್ತರಿಸುತ್ತಿವೆ. BI ಕಲಿತವರಿಗೆ ಈ ಸಂಸ್ಥೆಗಳಲ್ಲಿ ಉದ್ಯೋಗ ದೊರಕಬಹುದು. ಆದರೂ, ಯಾವ ಪ್ರಮಾಣದಲ್ಲಿ ಉದ್ಯೋಗಾವಕಾಶಗಳು ಲಭ್ಯವಾಗುತ್ತದೆಂದು ಈಗಲೇ ಹೇಳಲಾಗುವುದಿಲ್ಲ. IT ಯಲ್ಲಾದಂತೆ BIನಲ್ಲಿಯೂ ಈ ಸಂಸ್ಥೆಗಳು ಲಾಭ ಗಳಿಸಲು ಪ್ರಾರಂಭಿಸಿದರೆ ಉದ್ಯೋಗಾವಕಾಶ ಹೆಚ್ಚಬಹುದು.

ಈ ಲೇಖನದಲ್ಲಿ ಉಲ್ಲೇಖಿಸಿದ BI ಮೂರನೆಯ ಭಾಗ ಅನೇಕರಿಗೆ ಉದ್ಯೋಗಾವಕಾಶ ಒದಗಿಸಬಲ್ಲದು. ಇಂತಹ ಸಂಶೋಧನೆಗಳು ಹೊಸ ಔಷಧಿಗಳ ಸಂಪಾದನೆಗೆ, ಆರೋಗ್ಯಕ್ಕೆ ಸಂಬಂಧಿಸಿದ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಅಗತ್ಯ. ಆದ್ದರಿಂದಲೇ, ಉದ್ಯೋಗಾವಕಾಶಗಳು ಹೆಚ್ಚಿರುತ್ತವೆ. ಮುಂದುವರಿದ ದೇಶಗಳ ಸಹಭಾಗಿತ್ವದಲ್ಲಿ ಮಾತ್ರ ಇಂತಹ BI ಚಟುವಟಿಕೆಗಳು ಆರ್ಥಿಕವಾಗಿ ಲಾಭ ಗಳಿಸುತ್ತವೆ. ಸಹಭಾಗಿತ್ವದಿಂದ ಲಾಭ ಪಡೆಯುವ ನಿಟ್ಟಿನಲ್ಲಿ IT ತಜ್ಞರು ಸಾಕಷ್ಟು ಜಯ ಗಳಿಸಿದ್ದಾರೆ. ಇಂತಹ ಯಶಸ್ಸೇ BI ಕ್ಷೇತ್ರದಲ್ಲೂ ಸಾಧ್ಯವಾದರೆ ಮಾತ್ರ ಉದ್ಯೋಗಾವಕಾಶಗಳು ದೊರಕುತ್ತವೆ. ಈ ಕಾರಣಗಳಿಂದ, ಸಧ್ಯದ ಪರಿಸ್ಥಿತಿಯಲ್ಲಿ BI ತರಬೇತಿಗಾಗಿ ಕಳಪೆ ಸಂಸ್ಥೆಗಳಲ್ಲಿ ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡಿಕೊಳ್ಳುವುದು ವಿವೇಕವಲ್ಲ ಎನಿಸುತ್ತದೆ.

**ಪ್ರೊ|| ಎಂ. ಆರ್. ಎನ್. ಮೂರ್ತಿ**
ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು - ೫೬೦ ೦೧೨



# ಸೀತೆ ಅಹಲ್ಯೆ ನಾನು ನೀವು

## ಸಂಕುಲಜೀವ

ಇದೇ ಮಾರ್ಚ್ ೩ರ ಪತ್ರಿಕೆಗಳಲ್ಲಿ ಮತ್ತೆ ಸುದ್ದಿ ಬಂದಿದೆ. ಮೋಹಿಂದರ್ ಎಂಬಾತ ಎರಡೂವರೆ ವರ್ಷದ ಹುಡುಗಿಯ ಮೇಲೆ ಅತ್ಯಾಚಾರ ಎಸಗಲು ಪ್ರಯತ್ನಿಸಿದ.. ಜನರಿಂದ ತಪ್ಪಿಸಿಕೊಂಡು ಓಡಿಹೋದ ಎಂದು.

ಹಿಂದೊಂದು ಕಾಲವಿತ್ತು, ಬಲಾತ್ಕಾರ, ಅತ್ಯಾಚಾರ ಮುಂತಾದ ಶಬ್ದಗಳನ್ನು ಕೇಳಿದೊಡನೆ ನಮ್ಮ ಸಮಾಜ ದಲ್ಲಿನ ಸುಸಂಸ್ಕೃತ ಮನಸ್ಸುಗಳಿಗೆ ಬಹಳಷ್ಟು ನೋವಾ ಗುತ್ತಿತ್ತು. ಬಹಳ ಅಲ್ಲವಾದರೂ ಕೊನೆಗೆ ಇಷ್ಟರ ಮಟ್ಟಿಗಾದರೂ ಪ್ರತಿಕ್ರಿಯೆ ಎಂಬುದು ಇರುತ್ತಿತ್ತು. ಆದರೆ ಈಗ? ದಿನಪತ್ರಿಕೆಗಳಲ್ಲಿ ಸರಾಸರಿ ವಾರಕ್ಕೆ ಎರಡು ಬಾರಿಯಾದರೂ ಈ ಸುದ್ದಿ ಇದ್ದೇ ಇರುತ್ತದೆ – ಅಲ್ಲಿ ವೃದ್ಧೆಯ ಮೇಲೆ ಅತ್ಯಾಚಾರ; ಇಲ್ಲಿ ಹಸುಳೆಯ ಮೇಲೆ ಅತ್ಯಾಚಾರ; ಅಲ್ಲಿ ಸಾಮೂಹಿಕ ಅತ್ಯಾಚಾರ, ಇಲ್ಲಿ ಗೃಹಿಣಿಯ ಬಲಾತ್ಕಾರ. ದುರಂತವೇನೆಂದರೆ ಇತರ ಹಲವಾರು ವಿಷಯಗಳ ಕುರಿತಂತೆಯೇ ಬಲಾತ್ಕಾರದ ವಿಷಯದಲ್ಲಿಯೂ ನಮ್ಮ ಸಂವೇದನೆ ಸತ್ತುಹೋಗಿದೆ. ಸುದ್ದಿಯ ಮೇಲೆ ಕಣ್ಣು ಹಾಯಿಸುವುದೂ ಅಷ್ಟೇ ಯಾಂತ್ರಿಕವಾಗಿ. ಅದನ್ನು ಮನಃಪಟಲದ ಮೇಲೆ ಮೂಡಿಸಿಕೊಳ್ಳುವುದೇ ಇಲ್ಲ, ಇನ್ನು ಅದಕ್ಕೆ ಪ್ರತಿಕ್ರಿಯಿಸು ವುದಂತೂ ದೂರವೇ ಉಳಿಯಿತು. ಮಹಿಳಾ ಕಲ್ಯಾಣದ ಸಚಿವರು, ಗೃಹಮಂತ್ರಿಗಳು ಮುಂತಾದವರು ಅತ್ಯಾಚಾರಿ ಗಳಿಗೆ ಕಠೋರ ಶಿಕ್ಷೆಯಾಗಬೇಕು, ಬಲಾತ್ಕಾರಿಗಳಿಗೆ ಗಲ್ಲು ಶಿಕ್ಷೆಯಾಗಬೇಕು ಎಂದು ಹೇಳಿಕೆ ನೀಡುತ್ತಾರೆ. ಇದೂ ಕೂಡ ಒಂದು ದಿವಸದ ಸುದ್ದಿಯಾಗಿ ಮರುದಿನಕ್ಕೆ ಹಳಸಿಹೋಗುತ್ತದೆ. ಬಲಾತ್ಕಾರಕ್ಕೊಳಗಾದ ಆ ಮಹಿಳೆಗೆ ಮುಂದೇನಾಯಿತು ಎಂಬುದರ ಕುರಿತು ನಾವು ಯೋಚಿಸುವುದೇ ಇಲ್ಲ. ಬಲಾತ್ಕಾರದ ನಂತರ ಆ ಮಹಿಳೆಯ ಮಾನಸಿಕ, ಭಾವನಾತ್ಮಕ ಸ್ಥಿತಿ ಎಂತಹದು? ಅವಳು ಮತ್ತೆ ಕಾಲೇಜಿಗೆ ಅಥವಾ ತನ್ನ ಕೆಲಸಕ್ಕೆ ಸೇರಿದಳೆ? ಅವಳ ಗಂಡ, ಅಣ್ಣ ಮನೆಯವರು ಅವಳನ್ನು ಈಗ ಹೇಗೆ ನೋಡುತ್ತಾರೆ? ಯಾವತ್ತೂ ಮಾಯದ ಗಾಯವೊಂದನ್ನು ತನ್ನೊಳಗಿಟ್ಟುಕೊಂಡೇ ಅವಳು ಜೀವನ ನಡೆಸುತ್ತಾಳೆಯೇ ಅಥವಾ ಅವಳು ಆತ್ಮಹತ್ಯೆ ಮಾಡಿಕೊಂಡಳೆ? ಇವೆಲ್ಲ ಗಾಢಾಂಧಕಾರದಲ್ಲಿ ಮೊಳೆತು ಕಮರುವ ಪ್ರಶ್ನೆಗಳಷ್ಟೇ.

ಕೇವಲ ಈ ಪ್ರಶ್ನೆಗಳನ್ನಷ್ಟೇ ಅಲ್ಲ, ಇಂದು ಇನ್ನೂ ಆಳಕ್ಕಿಳಿದು ಈ ಬಲಾತ್ಕಾರದ ಮೂಲ ಪರಿಕಲ್ಪನೆಯನ್ನೇ ಪರೀಕ್ಷಿಸುವ ಅಗತ್ಯವಿದೆ.

ಬಲಾತ್ಕಾರ ಅಂದರೆ ನಮಗೆಲ್ಲರಿಗೂ ಗೊತ್ತಿರುವ ಹಾಗೆ ಒಬ್ಬ ಮಹಿಳೆಯ ಇಚ್ಛೆಯ ವಿರುದ್ಧ ಅವಳನ್ನು ಸಂಭೋಗಿಸುವುದು. ಕಾಯಿದೆಯ ದೃಷ್ಟಿಯಿಂದ ಈ ವ್ಯಾಖ್ಯೆಯೊಳಗೆ ಇನ್ನೂ ಅನೇಕ ಸಣ್ಣ ಸಣ್ಣ ವಿವರಗಳು ಕೂಡಿಕೊಳ್ಳುತ್ತವೆ. ಆದರೆ, ಸಾಮಾನ್ಯ ಗ್ರಹಿಕೆಯ ಪ್ರಕಾರ ಬಲಾತ್ಕಾರವೆಂದರೆ ಬಲಾತ್ಕಾರ ಸಂಭೋಗ.

ಜೀವಜಗತ್ತಿನಲ್ಲಿ ಬೇರೆ ಯಾವ ಪ್ರಾಣಿಗಳೊಳಗೂ ಈ ರೀತಿ ಬಲಾತ್ಕಾರ ಅಥವಾ ಇಚ್ಛೆಯ ವಿರುದ್ಧದ ಸಂಭೋಗ ಅನ್ನುವುದು ಇಲ್ಲವೆಂದು ಹೇಳಲಾಗುತ್ತದೆ. ಇದು ಎಷ್ಟು ಖರೆಯೋ ಗೊತ್ತಿಲ್ಲ. ಆದರೆ ಮನುಷ್ಯ ರೊಳಗೆ ಮಾತ್ರ ಬಲಾತ್ಕಾರವೆಂಬುದು ಬಹಳ ಮುಂಚಿ ನಿಂದಲೂ ಇರುವಂತಹ ಒಂದು ಸಂಗತಿ. ಬಲಾತ್ಕಾರ ವೆಂಬುದು ಹೆಂಗಸರ ಪಾಲಿಗೆ ಪ್ರತಿನಿತ್ಯದ ಪ್ರತಿಗಳಿಗೆಯ ಜೀವಂತ ಅಂಜಿಕೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಈ ಅಂಜಿಕೆ ಹೊರನೋಟಕ್ಕೆ ಯಾವಾಗಲೂ ಕಂಡುಬರುತ್ತದೆ ಅಂತಲ್ಲ. ಆದರೆ ಪ್ರತಿ ಹೆಂಗಸಿಗೂ ಈ ಅಂಜಿಕೆ ಸದಾಕಾಲ ಒಳಮನಸ್ಸಿನೊಳಗೆ ಇದ್ದದ್ದೇ. ಬಲಾತ್ಕಾರಕ್ಕೆ ಇಷ್ಟೊಂದು ಮಹತ್ವ ಯಾಕೆ? ಬಲಾತ್ಕಾರದಿಂದ ಒಬ್ಬ ಮಹಿಳೆಯ ಶೀಲಹರಣ ಆಗುತ್ತದೆ ಅನ್ನುವ ಕಾರಣಕ್ಕಾಗಿ ಬಲಾತ್ಕಾರಕ್ಕೆ ಮಹತ್ವ ಬರುತ್ತದೆ. ಬಲಾತ್ಕಾರವು ಮೂಲ ಭೂತವಾಗಿ ಒಂದು ದೈಹಿಕ ಹಿಂಸೆ. ಈ ದೈಹಿಕ ಹಿಂಸೆಯ ಜೊತೆ ಅಪಾರವಾದ ಮಾನಸಿಕ ನೋವು, ಹಿಂಸೆ ಆಗುವುದು ನಾವು ಶೀಲಕ್ಕೆ ಕೊಡುವ ಮಹತ್ವದಿಂದಾಗಿ. ಆದ್ದರಿಂದ ಬಲಾತ್ಕಾರದ ಬಗ್ಗೆ ಚರ್ಚಿಸುವ ಮೊದಲು ನಾವು ಶೀಲ ಅಂದರೆ ಏನು ಅನ್ನುವುದನ್ನು ತಿಳಿದು ಕೊಳ್ಳುವುದು ಅತ್ಯವಶ್ಯ. ಆದರೆ ಬಲಾತ್ಕಾರಕ್ಕೆ ಒಂದು ಸರಳವಾದ ವ್ಯಾಖ್ಯೆ ಕೊಟ್ಟ ಹಾಗೆ ಶೀಲಕ್ಕೆ ಕೊಡುವುದು ಶಕ್ಯ ಆಗುವುದಿಲ್ಲ.

ಶೀಲದಲ್ಲಿ ಎರಡು ವಿಧ. ಮೊದಲನೆಯದು ವ್ಯಕ್ತಿತ್ವ ಶೀಲ. ಅಂದರೆ ಒಬ್ಬ ವ್ಯಕ್ತಿಯ ಇಡೀ ವ್ಯಕ್ತಿತ್ವಕ್ಕೆ ಅನ್ವಯ ವಾಗುವಂತಹ ಶೀಲ; ಇಂಗ್ಲಿಷಿನ ಕ್ಯಾರೆಕ್ಟರ್ ಅನ್ನುವ ಪದಕ್ಕೆ ಸಂವಾದಿಯಾದ ಶಬ್ದ. ಇದು ಗಂಡಸು ಹೆಂಗಸು ಇಬ್ಬರಿಗೂ ಅನ್ವಯಿಸುತ್ತದೆ. ಉದಾಹರಣೆಗೆ ಮಲ್ಲಯ್ಯ ಒಬ್ಬ ಸುಶೀಲನಾದ ವ್ಯಕ್ತಿ ಎಂದು ಹೇಳುತ್ತೇವೆ. ಅಂದರೆ ಇಲ್ಲಿ ಸತ್ಯವಂತಿಕೆ, ಪ್ರಾಮಾಣಿಕತೆ, ವಿನಯ, ಅನುಕಂಪ ಮುಂತಾದ ಹಲವಾರು ಸದ್ಗುಣಗಳ ಒಟ್ಟು ಮೊತ್ತಕ್ಕೆ ಶೀಲ ಎಂದು ಕರೆಯುತ್ತೇವೆ.

ಎರಡನೆಯದು ಲಿಂಗಶೀಲ. ಇದು ಇಂಗ್ಲಿಷಿನ ಚೇಷ್ಟಿಟಿ ಅನ್ನುವ ಪದಕ್ಕೆ ಸಂವಾದಿಯಾದ ಶಬ್ದ. ವಾಸ್ತವ ದಲ್ಲಿ ಈ ಲಿಂಗಶೀಲ ಅನ್ನುವುದು ಕೇವಲ ಮಹಿಳೆಗೆ ಮಾತ್ರ ಅನ್ವಯವಾಗುವುದರಿಂದ ಅದನ್ನು ಯೋನಿಶೀಲ ಎಂದು ಕರೆಯುವುದೇ ಹೆಚ್ಚು ಸರಿಯಾಗುತ್ತದೆ. ಚಾರಿತ್ರ್ಯ, ಮಾನ ಮುಂತಾದ ಶಬ್ದಗಳು ವ್ಯಕ್ತಿತ್ವಶೀಲಕ್ಕೆ ಪರ್ಯಾಯ ವಾಗಿ ಬಳಸಲ್ಪಡುತ್ತವೆಯಾದರೂ ಮಹಿಳೆಯ ವಿಷಯ ದಲ್ಲಿ ಅವು ಯೋನಿಶೀಲಕ್ಕೂ ಪರ್ಯಾಯವಾಗಿ ಬಳಸಲ್ಪಡುತ್ತವೆ ಅನ್ನುವುದು ನಮಗೆಲ್ಲ ಗೊತ್ತು.

ಬಲಾತ್ಕಾರವು ಮಹಿಳೆಯ ಯೋನಿಶೀಲಕ್ಕೆ ಚ್ಯುತಿ ಯನ್ನುಂಟುಮಾಡುವ, ಧಕ್ಕೆಯನ್ನುಂಟುಮಾಡುವ ಕೃತ್ಯ. ಹಾಗಾದರೆ ಯೋನಿಶೀಲ ಅಂದರೇನು? ಇದಕ್ಕಾಗಿ ನಾವು ಯೋನಿ ಅಂದರೇನು, ಅದರ ರಚನೆ ಹಾಗೂ ಕಾರ್ಯಗಳ ಬಗ್ಗೆ ತಿಳಿದುಕೊಳ್ಳುವುದು ಅನಿವಾರ್ಯ. ಇತರ ಪ್ರಾಣಿಗಳಲ್ಲಿ ಇರುವಂತೆಯೇ ಮನುಷ್ಯರಲ್ಲಿಯೂ ಗಂಡು ಮತ್ತು ಹೆಣ್ಣು ಎಂಬ ಎರಡು ಪ್ರಕಾರಗಳು. ಗಂಡು ಹೆಣ್ಣಿನ ಮಿಲನದಿಂದಲೇ ಹೊಸ ಜೀವ ಉತ್ಪತ್ತಿ ಯಾಗುತ್ತದೆ. ನಿಸರ್ಗವು ಜೀವದ ಪುನರುತ್ಪಾದನೆಗಾಗಿ ಗಂಡಸಿನಲ್ಲಿ ಮತ್ತು ಹೆಂಗಸಿನಲ್ಲಿ ವಿಶಿಷ್ಟವಾದ ಅವಯವ ಗಳನ್ನು ರೂಪಿಸಿದೆ. ಗಂಡಸಿನಲ್ಲಿ ಶಿಶ್ನ, ವೀರ್ಯನಾಳ, ವೃಷಣಗಳು ಪ್ರತ್ಯುತ್ಪಾದನೆಯ ಅವಯವಗಳಾದರೆ ಹೆಂಗಸಿನಲ್ಲಿ ಯೋನಿ, ಗರ್ಭಾಶಯ, ಅಂಡನಾಳ, ಅಂಡಾಶಯ ಇವು ಪ್ರತ್ಯುತ್ಪಾದನೆಯ ಅಂಗಗಳು. ಯೋನಿಯು ಸ್ನಾಯುಗಳಿಂದ ರಚಿತವಾಗಿರುವ, ಹಿಗ್ಗುವ ಸಾಮರ್ಥ್ಯವುಳ್ಳ, ಕೊಳವೆಯಾಕಾರದ ಅಂಗ. ಇದರ ಕೆಳ ತುದಿಯಲ್ಲಿ ಬಾಲ್ಯಾವಸ್ಥೆಯಲ್ಲಿ ಕನ್ಯಾಪೊರೆ ಇರುತ್ತದೆ. ಹಾಗೂ ಮೇಲ್ತುದಿಯಲ್ಲಿ ಗರ್ಭಾಶಯದ ದ್ವಾರ ಇರುತ್ತದೆ.

ನಿಸರ್ಗದ ವಿನ್ಯಾಸ ಅದ್ಭುತವಾದದ್ದು. ಜೀವದ ಪುನರುತ್ಪಾದನೆ ಆಗಬೇಕು ಅನ್ನುವ ಕಾರಣದಿಂದಲೇ ಅದು ಗಂಡು ಹೆಣ್ಣಿನ ಮಧ್ಯೆ ಲೈಂಗಿಕ ಆಕರ್ಷಣೆಯನ್ನು ರೂಪಿಸಿದೆ. ಈ ಲೈಂಗಿಕ ಆಕರ್ಷಣೆಯ ಅಂತಿಮ ಘಟ್ಟವೇ ಸಂಭೋಗ ಅಥವಾ ಸಮಾಗಮ. ಗಂಡಸು ಮತ್ತು ಹೆಂಗಸಿನ ನಡುವೆ ಪರಸ್ಪರ ಒಪ್ಪಿಗೆಯಿಂದ ಸಂಭೋಗ ನಡೆದಿದ್ದಾದರೆ ಅದು ಕೇವಲ ಸಂಭೋಗ ವಾಗುತ್ತದೆ. ಆದರೆ ಹೆಂಗಸಿನ ಒಪ್ಪಿಗೆಯಿಲ್ಲದೆ ಅವಳ ಇಚ್ಛೆಯ ವಿರುದ್ಧ ಸಂಭೋಗ ನಡೆದಿದ್ದಾದರೆ ಅದು ಬಲಾತ್ಕಾರವಾಗುತ್ತದೆ.

ಶೀಲ ಎಂಬ ಪರಿಕಲ್ಪನೆ, ಶೀಲ ಎಂಬ ಮೌಲ್ಯ

ನಮ್ಮಲ್ಲಿ ಬಹಳ ಹಿಂದಿನಿಂದಲೂ ಉಂಟು. ಒಂದು ನಿದರ್ಶನವೆಂದರೆ ಅಹಲ್ಯೆಯ ಕತೆ. ಅಹಲ್ಯೆ ಇಂದ್ರನೊಂದಿಗೆ ಕೂಡುತ್ತಾಳೆ. ಆದರೆ ಅದು ಆತ ತನ್ನ ನಿಜ ಸ್ವರೂಪದಲ್ಲಿ ಬಂದಾಗ ಅಲ್ಲ. ಗಂಡ ಗೌತಮ ಮನೆಯಲ್ಲಿ ಇಲ್ಲದಾಗ ಇಂದ್ರನು ಗೌತಮನ ವೇಷ ಧರಿಸಿ ಬರುತ್ತಾನೆ. ಇದು ಅಹಲ್ಯೆಗೆ ಗೊತ್ತಿಲ್ಲ. ಅವಳು ಅವನನ್ನು ಕೂಡುವುದು ಆತ ತನ್ನ ಗಂಡ ಗೌತಮ ಎಂಬ ತಿಳುವಳಿಕೆಯಿಂದಲೇ. ಇದರಲ್ಲಿ ಅವಳದೇನೂ ತಪ್ಪು ಇಲ್ಲ. ಆದರೆ ಗೌತಮ ಬಂದು ಅವಳಿಗೆ 'ನೀ ಕಲ್ಲಾಗಿ ಹೋಗು' ಎಂದು ಶಾಪ ಕೊಡುತ್ತಾನೆ. ಯಾಕೆ ? ಅವಳು ಇಂದ್ರನೊಂದಿಗೆ, ಅಂದರೆ ಒಬ್ಬ ಪರಪುರುಷನೊಂದಿಗೆ, ಕೂಡಿ ಶೀಲಗೆಟ್ಟವಳಾದಳು, ತನ್ನ ಪಾತಿವ್ರತ್ಯಕ್ಕೆ ಭಂಗ ತಂದುಕೊಂಡಳು ಎಂಬ ಕಾರಣಕ್ಕಾಗಿ ಅಲ್ಲವೆ ? ಅಹಲ್ಯೆಯದು ಬಲಾತ್ಕಾರವಲ್ಲ, ಆದರೆ ಅಹಲ್ಯೆಗೆ ಶಾಪ ಯಾಕೆ ಎಂಬುದನ್ನು ಅರ್ಥ ಮಾಡಿಕೊಂಡಾಗ ನಮಗೆ ಬಲಾತ್ಕಾರ ಅಂದರೇನು, ಯೋನಿಶೀಲ ಅಂದರೇನು, ಒಬ್ಬ ಹೆಂಗಸಿನ ಯೋನಿಶೀಲ ಎಂಬುದು ಹೇಗೆ ಅವಳ ಇಡೀ ವ್ಯಕ್ತಿತ್ವಕ್ಕೇ ವ್ಯಾಪಿಸಿಕೊಂಡು ಅವಳು 'ಕೆಟ್ಟವಳು' ಆಗುತ್ತಾಳೆ ಎಂಬುದು ತಿಳಿಯುತ್ತದೆ. ಬಲಾತ್ಕಾರ, ಅತ್ಯಾಚಾರ ಇವು ನಮ್ಮ ಗ್ರಾಂಥಿಕ ಭಾಷೆಯ ಶಬ್ದಗಳು; ಆಡುಮಾತಿನಲ್ಲಿ ಬಳಸಲ್ಪಡುವ ಶಬ್ದಗಳಲ್ಲ. ಆಡು ಮಾತಿನಲ್ಲಿ ಇದಕ್ಕೆ ಇರುವ ಒಂದೇ ಒಂದು ಶಬ್ದವೆಂದರೆ 'ಕೆಡಿಸುವುದು' 'ಸೇಡು ತೀರಿಸಿಕೊಳ್ಳುವ ಸಲುವಾಗಿ ಅವನು ಲಕ್ಷ್ಮಿಯನ್ನು ಕೆಡಿಸಿದನು,' – ಈ ರೀತಿಯ ಮಾತುಗಳನ್ನು ನಾವು ಕೇಳುತ್ತೇವೆ. ಅಂದರೆ ನಮ್ಮ ಸಮಾಜದ ಕಣ್ಣಿನಲ್ಲಿ ಬಲಾತ್ಕಾರದ ಪರಿಣಾಮವಾಗಿ ಒಬ್ಬ ಮಹಿಳೆಯು ಇಡಿಯಾಗಿಯೇ 'ಕೆಡು'ತ್ತಾಳೆ.

ರಾಮಾಯಣದಲ್ಲಿ ಸೀತೆಯ ವಿಷಯದಲ್ಲಿ ಏನಾಗುತ್ತದೆ ? ಕ್ಷತ್ರಿಯ ಧರ್ಮದ ಪ್ರಕಾರ ಬಹಳ ದಿನಗಳ ಕಾಲ ಗಂಡನಿಂದ ದೂರವಿರುವ ಹೆಂಗಸಿನ 'ಶೀಲ' ಶಂಕಾಸ್ಪದವಾಗುತ್ತದೆ; ಆದ್ದರಿಂದ ತಾನು ಸೀತೆಯನ್ನು ಸ್ವೀಕರಿಸುವುದು ಅಧರ್ಮವಾಗುತ್ತದೆ – ಇದು ರಾಮನ ನಿಲುವು. ಆಗ ಸೀತೆಗೆ ಸಿಟ್ಟು, ದುಃಖ, ಬೇಸರ, ತಾತ್ಸಾರ, ಎಲ್ಲ ಉಕ್ಕಿಬಂದು ಅವಳು ಅಗ್ನಿಪ್ರವೇಶ ಮಾಡುತ್ತಾಳೆ. ಅಗ್ನಿಪರೀಕ್ಷೆಯಲ್ಲಿ ಸೀತೆಯ ಶೀಲ ನಿಷ್ಕಳಂಕವಾದುದು ಎಂಬುದು ಸಿದ್ಧವಾಗುತ್ತದೆ. ರಾಮನ ದೃಷ್ಟಿಯಲ್ಲಿ ಶಂಕಾಸ್ಪದವಾಗಿ ಅಗ್ನಿಪರೀಕ್ಷೆಯಲ್ಲಿ ಕಳಂಕರಹಿತವಾದುದು ಎಂದು ಸಿದ್ಧವಾದ ಈ ಶೀಲ ಯಾವುದು ?

ಇತಿಹಾಸದುದ್ದಕ್ಕೂ ಈ ಲಿಂಗಶೀಲ ಎಂಬುದು ಯಾಕೆ ಕೇವಲ ಹೆಂಗಸರಿಗೆ ಮಾತ್ರ ಅನ್ವಯವಾಗುವಂತಾಯಿತು ? ಸಾವಿರಾರು ವರ್ಷಗಳಷ್ಟು ಉದ್ದದ ಮನುಕುಲದ ಚರಿತ್ರೆಯಲ್ಲಿ ಗಂಡಸೊಬ್ಬನ ಲಿಂಗಶೀಲ ಶಂಕಿತವಾದ ಬಗ್ಗೆ ಅಥವಾ ಕಳಂಕಿತವಾದ ಬಗ್ಗೆ ಹಾಗೂ ಅದಕ್ಕಾಗಿ ಅವನಿಗೆ ಶಿಕ್ಷೆಯಾದ ಬಗ್ಗೆ ಒಂದೇ ಒಂದು ನಿದರ್ಶನವೂ ನಮಗೆ ಸಿಗುವುದಿಲ್ಲ ಯಾಕೆ? ಸೈನ್ಯ ಸೈನ್ಯಗಳ ನಡುವೆ ಯುದ್ಧ ನಡೆದಾಗ, ಗುಂಪು ಗುಂಪುಗಳ ಮಧ್ಯೆ ಜಗಳ ನಡೆದಾಗ ತಮ್ಮ ಮೇಲುಗೈ ತೋರಿಸುವುದಕ್ಕಾಗಿ ಅಥವಾ ಸೇಡು ತೀರಿಸಿಕೊಳ್ಳುವ ಸಲುವಾಗಿ ಬಳಸಲ್ಪಡುವ ಅತ್ಯಂತ ಬಲಶಾಲಿ ಅಸ್ತ್ರವೆಂದರೆ ಎದುರಾಳಿಗಳ ಹೆಂಗಸರ ಮೇಲೆ ಅತ್ಯಾಚಾರ ಮಾಡುವುದು ! ಇದು ಇವತ್ತಿಗೂ ಸತ್ಯ. ಇದು ಯಾಕೆ ಹೀಗೆ ?

## ಸುದ್ದಿ - ಸ್ವಾರ (ಹ) ಸ್ಯ

ಪೆಪ್ಸಿ ತಂಪು ಪಾನೀಯದಲ್ಲಿ ಮೋರಿ ನೀರು - ಸುದ್ದಿ



ಅದನ್ನೆ ಸಚಿನ್ ಇಲ್ಲವೇ ಶಾರುಖ್ ಕೈಯಲ್ಲಿ ಕೊಟ್ಟು ಯೇ ದಿಲ್ ಮಾಂಗೇ 'ಮೋರಿ' ಎಂದು ಹೇಳಿಸಿದರಾಯ್ತು, ಮೋರಿ ನೀರು ದುಬಾರಿಯಾದರೂ ಆದೀತು !

– ಎಸ್. ಶಶಿಕಾಂತ್ ಯಡಹಳ್ಳಿ

ಬಲಾತ್ಕಾರದಲ್ಲಿ ಹೆಂಗಸಿನದು ಕೇವಲ ಬಲಿಯ ಪಾತ್ರ ಮಾತ್ರ. ಆದರೂ ಕೊನೆಗೆ ಅದರ 'ಪಾಪ', ಅದರ ಹೊಲಸು ಮೆತ್ತಿಕೊಳ್ಳುವುದು ಮಾತ್ರ ಅವಳಿಗೇ. ಅವಳು ಎಂಜಲಾಗುತ್ತಾಳೆ; ನಾಯಿ ಮುಟ್ಟಿದ ಗಡಿಗೆಯಾಗುತ್ತಾಳೆ; ಅವಳು ಕೆಡಿಸಲ್ಪಟ್ಟವಳಾಗುತ್ತಾಳೆ; ಕೆಡುತ್ತಾಳೆ. ಅವಳು ಒಪ್ಪಿ ಸಂಭೋಗ ನಡೆದಿದ್ದಾದರೆ ಬೇರೆ ಮಾತು. ಆಗ ಅವಳು ವ್ಯಭಿಚಾರ ಮಾಡಿದಳೇ, ಸಮಾಜದ ರೀತಿ ರಿವಾಜುಗಳನ್ನು ಮುರಿದಳೇ, ತನ್ನ ವೈಯಕ್ತಿಕ ಜವಾಬ್ದಾರಿಯಲ್ಲಿ ತಪ್ಪಿದಳೇ, ಅವಳು ಮಾಡಿದ್ದು ಅಪರಾಧವೋ ಅಲ್ಲವೋ ಅನ್ನುವ ಬಗ್ಗೆ ವಿಚಾರ ವಿಮರ್ಶೆ ನಡೆಯಲಿ. ಅವಳು ಮಾಡಿದ್ದು ತಪ್ಪು ಎಂದು ತೀರ್ಮಾನವಾದರೆ ಆಗ ಅವಳನ್ನು ಕೆಟ್ಟವಳು ಎಂದು ಕರೆಯಬಹುದು. ಆದರೆ ಬಲಾತ್ಕಾರದಲ್ಲಿ ಸಂಭೋಗ ನಡೆಯುವುದು ಸಂಪೂರ್ಣವಾಗಿ ಮಹಿಳೆಯ ಇಚ್ಛೆಯ ವಿರುದ್ಧ. ಹೀಗಿದ್ದೂ ಅದರ 'ಪಾಪ' ಅವಳಿಗೇ ಯಾಕೆ ಅಂಟಿಕೊಳ್ಳಬೇಕು ? ಒಂದು ಹಿಂಸಾಕೃತ್ಯದಲ್ಲಿ ಅಥವಾ ಪಾಪಕೃತ್ಯದಲ್ಲಿ ಕೇವಲ ಬಲಿಯಾಗಿ ಇರುವಾಗಲೂ ಆಮೇಲೆ ಅದರ ಎಲ್ಲ ಹೊಲಸನ್ನೂ ಬಲಿಯೇ ಹೊರಬೇಕಾಗಿ ಬರುವಂತಹ ಬೇರೆ ಯಾವುದೇ ಹಿಂಸಾಕೃತ್ಯದ ನಿದರ್ಶನವನ್ನು ನಾವು ತೋರಿಸಬಹುದೇ ? ಇಲ್ಲ. ಅಂದಮೇಲೆ ಇದು ಯಾಕೆ ಹೀಗೆ ?

ಒಬ್ಬ ಗಂಡಸು ರಾತ್ರಿ ಹತ್ತರ ಸುಮಾರಿಗೆ ಬಸ್ಸಿಗಾಗಿ ಕಾಯುತ್ತ ರಸ್ತೆಯ ಬದಿಗೆ ಒಂದು ದೀಪದ ಕೆಳಗೆ ನಿಂತಿದ್ದಾನೆ ಅಂತಿಟ್ಟುಕೊಳ್ಳಿ. ಇವನನ್ನು ರಾಮಪ್ಪ ಎಂದು ಕರೆಯೋಣ. ರಾಮಪ್ಪ ರಸ್ತೆ ದೀಪದ ಬೆಳಕಿನಲ್ಲಿ ತನ್ನ ಪಾಡಿಗೆ ತಾನು ಪತ್ರಿಕೆ ಓದುತ್ತ ನಿಂತಿದ್ದಾನೆ. ಅತ್ತ ಕಡೆಯಿಂದ ಒಬ್ಬ ಕುಡುಕ ಕುಡಿತದ ಅಮಲಿನಲ್ಲಿ ತೂರಾಡುತ್ತ ಬರುತ್ತಿದ್ದಾನೆ. ರಾಮಪ್ಪ ಕುಡುಕನನ್ನು ಒಮ್ಮೆ ನೋಡಿ 'ಹೋಗುತ್ತಾನೆ ಬಿಡು ತನ್ನ ಪಾಡಿಗೆ ತಾನು' ಎಂದು ಅಂದುಕೊಂಡು ಮತ್ತೆ ತನ್ನ ಪತ್ರಿಕೆಯಲ್ಲಿ ಮುಳುಗುತ್ತಾನೆ. ಕುಡುಕ ಸುಮಾರು ಒಂದು ಮಾರು ಅಂತರದಲ್ಲಿ ಇನ್ನೇನು ಇವನನ್ನು ದಾಟಿ ಮುಂದೆ ಹೋದ ಅನ್ನುವಷ್ಟರಲ್ಲಿ ಒಮ್ಮೆಲೆ ಶರೀರದಲ್ಲಿ ವಿದ್ಯುತ್ ಸಂಚಾರವಾಗಿ ಛಂಗನೆ ರಾಮಪ್ಪನ ಮೇಲೆ ಜಿಗಿದು ಏನಾಗುತ್ತಿದೆ ಎಂಬುದು ತಿಳಿಯುವ ಮೊದಲೇ ಅವನನ್ನು ನೆಲಕ್ಕೆ ಕೆಡವಿ ಅವನ ಮುಖಕ್ಕೆ ನಾಲ್ಕಾರು ಸಲ ಗುದ್ದುತ್ತಾನೆ. ರಸ್ತೆಯ ಆ ಕಡೆ ಹಾದುಹೋಗುತ್ತಿರುವ ಯುವಕರಿಬ್ಬರು ಇದನ್ನು ನೋಡಿ ತಕ್ಷಣ ಓಡಿಬಂದು ಕುಡುಕನನ್ನು ಆಚೆ ಜಗ್ಗಿ ಎರಡು ಏಟು ಕೊಡುತ್ತಾರೆ. ಎದ್ದು ನಿಂತು ಅರಿವೆಗಳನ್ನು ಜಾಡಿಸಿಕೊಳ್ಳುವಷ್ಟರಲ್ಲಿ ರಾಮಪ್ಪನಿಗೆ ತನ್ನ ಮೇಲ್ದವಡೆಯ ಒಂದು ಹಲ್ಲು ಉದುರಿರುವುದು, ಬಾಯಿಯಿಂದ ರಕ್ತ ಬರುತ್ತಿರುವುದು, ಗಮನಕ್ಕೆ ಬರುತ್ತದೆ.

ಈ ಪ್ರಸಂಗದಲ್ಲಿ ರಾಮಪ್ಪನದು ಯಾವ ತಪ್ಪೂ ಇಲ್ಲ. ಕುಡುಕ ಕುಡಿತದ ಅಮಲಿನಲ್ಲಿ ಅವನ ಮೇಲೆ ಆಕ್ರಮಣ ಮಾಡಿ ಅವನ ಒಂದು ಹಲ್ಲು ಉದುರಿಸುತ್ತಾನೆ. ನಡೆದ ಘಟನೆಯನ್ನು ನೋಡಿದವರೂ ಇದ್ದಾರೆ. ಹಾಗೆಯೇ ರಾಮಪ್ಪ ಮನೆಗೆ ಹೋದ ಬಳಿಕ ನಡೆದದ್ದನ್ನು ಎಲ್ಲರಿಗೂ ಹೇಳುತ್ತಾನೆ. ಹೇಳುವುದಕ್ಕೆ ಅವನು ನಾಚುವುದಿಲ್ಲ, ಹೆದರುವುದಿಲ್ಲ. ಈಗ ಇದರ ಜೊತೆಗೆ ಇನ್ನೊಂದು ನಿದರ್ಶನ ನೋಡಿ. ರಮಾ ಎನ್ನುವ ಯುವತಿಯು ರಾತ್ರಿ ಹತ್ತರ ಸುಮಾರಿಗೆ ಜನವಿರಳ ರಸ್ತೆಯೊಂದರಲ್ಲಿ ಒಬ್ಬಳೇ ಬರುತ್ತಿರುವಾಗ ಯಾವನೋ ಒಬ್ಬ ನೀಚ ಅವಳ ಮೇಲೆ ಎರಗಿ ಬಲಾತ್ಕಾರ ಮಾಡುತ್ತಾನೆ. ಮಾಡಿದ ವ್ಯಕ್ತಿ ಯಾರೇ ಇರಬಹುದು. ರಾಮಪ್ಪ ತನಗಾದ ಹಿಂಸೆ ನೋವುಗಳನ್ನು ಎಲ್ಲರಿಗೂ ಹೇಳುವಂತೆ ರಮಾ ತನಗಾದ ನೋವು ಹಿಂಸೆಗಳನ್ನು ಎಲ್ಲರಿಗೂ ಹೇಳಿಕೊಳ್ಳುತ್ತಾಳೆಯೇ ? ಹೇಳಿಕೊಳ್ಳಬಲ್ಲಳೆ ? ರಮಾಳ ಜಾಗದಲ್ಲಿ ಬೇರೆ ಹೆಂಗಸರು ಯಾರಾದರೂ ಇದ್ದರೆ ಅವರು ಹೇಳಿಕೊಳ್ಳುತ್ತಾರೆಯೇ ? ಹೇಳಿದರೆ ಅದಕ್ಕೆ ಸಮಾಜ ಹೇಗೆ ಪ್ರತಿಕ್ರಿಯಿಸುತ್ತದೆ ?

ಅಲ್ಲಿ ರಾಮಪ್ಪ ಎಷ್ಟು ನಿಷ್ಪಾಪಿ, ಮುಗ್ಧ ನಿರ್ದೋಷಿಯೋ ಅಷ್ಟೇ ಇಲ್ಲಿ ರಮಾ ನಿಷ್ಪಾಪಿ, ಮುಗ್ಧೆ, ನಿರ್ದೋಷಿ. ಯಾಕೆ ಅಲ್ಲಿ ರಾಮಪ್ಪನಿಗೆ ಸ್ವಲ್ಪವೂ ಅಂಟಿಕೊಳ್ಳದ ಘಟನೆಯ ಪಾಪ ಅಥವಾ ರಾಡಿ ಇಲ್ಲಿ ರಮಾಗೆ ಮೈತುಂಬ ಅಂಟಿಕೊಳ್ಳುತ್ತದೆಯಷ್ಟೇ ಅಲ್ಲ ಅವಳನ್ನು ಪೂರ್ತಿ ಹುಗಿದುಬಿಡುತ್ತದೆ? ಈ ಎರಡೂ ಘಟನೆಗಳಲ್ಲಿಯ ಮೂಲಭೂತ ವ್ಯತ್ಯಾಸವೇನು ? ಅಲ್ಲಿ ರಾಮಪ್ಪನ ಶೀಲಭಂಗವಾಯಿತು ಎಂದು ಯಾರಾದರೂ ಅನ್ನುತ್ತಾರೆಯೇ ? ಇಲ್ಲ. ಇಲ್ಲಿ? ರಮಾಳ ಶೀಲಭಂಗವಾಯಿತು ಎಂದು ಇಡೀ ಲೋಕವೇ ಕಿರುಚುತ್ತದೆ. ಈ ಶೀಲ ಅಂದರೆ ಏನು ? ಶೀಲಭಂಗ ಅಂದರೆ ಏನು ? ರಮಾಳನ್ನು ಕೆಡಿಸಲಾಯಿತು ಅಂದರೆ ರಮಾ ಯಾವ ರೀತಿಯಲ್ಲಿ ಕೆಟ್ಟಳು ?

ನಾನು ತೀರ ಅಶ್ಲೀಲವಾದ ವಿಷಯವೊಂದನ್ನು ಹೇಳುತ್ತಿದ್ದೇನೆ ಎಂದು ಹಲವರಿಗೆ ಅನಿಸಬಹುದು. ಆದರೆ ಇದು ಅಶ್ಲೀಲ ಅಲ್ಲ. ಮಾನವೀಯ ದೃಷ್ಟಿಕೋನದಿಂದ, ವಸ್ತುನಿಷ್ಠವಾಗಿ ಲೈಂಗಿಕತೆಯ ಬಗ್ಗೆ ಮಾತಾಡುವುದು ಅಶ್ಲೀಲವಲ್ಲ. ಬಲಾತ್ಕಾರಕ್ಕೆ ಮತ್ತು

ಶೀಲಕ್ಕೆ ಸಂಬಂಧಿಸಿದಂತೆ ಕೆಲವು ಅತ್ಯಂತ ಮೂಲಭೂತ ಅಂಶಗಳನ್ನು ಹೇಳುವುದು ಅತ್ಯವಶ್ಯ ಮತ್ತು ಅನಿವಾರ್ಯ. ಯೋನಿಶೀಲ ಅಥವಾ ಯೋನಿಶುದ್ಧತೆ ಅಂದರೇನು? ಇದನ್ನು ಇಷ್ಟೊಂದು ಹಿಂಜಿ ಹಿಂಜಿ ನೋಡುವುದು ಅವಶ್ಯವೇ? ಹೌದು ನಿಶ್ಚಿತವಾಗಿಯೂ ಅವಶ್ಯ. ಯಾಕೆಂದರೆ ಇದು ಪ್ರತಿಯೊಬ್ಬ ಹೆಂಗಸಿಗೆ ಸಂಬಂಧಿಸಿದ ಪ್ರಶ್ನೆ. ಹಾಗೂ ಪ್ರತಿಯೊಬ್ಬ ಹೆಂಗಸಿಗೆ ಸಂಬಂಧಿಸಿದ ಪ್ರಶ್ನೆಯಾದುದರಿಂದ ಇದು ಪ್ರತಿಯೊಬ್ಬ ಗಂಡಸಿಗೂ ಸಂಬಂಧಿಸಿದ ಪ್ರಶ್ನೆ.

ಯೋನಿಶೀಲಕ್ಕೆ ದೈಹಿಕ ಹಾಗೂ ಮಾನಸಿಕ, ಹೀಗೆ ಎರಡು ಆಯಾಮಗಳು ಎಂಬುದು ಸಾಮಾನ್ಯ ಬುದ್ಧಿಗೆ ಹೊಳೆಯುವ ಮಾತು. ಮೊದಲಿಗೆ ಯೋನಿಶೀಲದ ದೈಹಿಕ ಆಯಾಮವನ್ನು ಪರೀಕ್ಷಿಸೋಣ. ಯಾವ ಪ್ರಕಾರದ ಸಂಭೋಗದಿಂದ ಮಹಿಳೆಯ ಶೀಲಹರಣ ವಾಗುತ್ತದೆ? ಗಂಡನ ಜೊತೆಗಿನ ಸಂಭೋಗದಿಂದ ಶೀಲಹರಣವಾಗುವುದಿಲ್ಲ. ಆದರೆ ಗಂಡನಲ್ಲದವ ನೊಡನೆ ಸಂಭೋಗವಾದರೆ ಆಗ ಮಹಿಳೆಯ ಶೀಲ ಭಂಗಗೊಳ್ಳುತ್ತದೆ. ಪರಪುರುಷನೊಂದಿಗಿನ ಈ ಸಂಭೋಗ ಇಚ್ಛಾ ಸಂಭೋಗವೇ ಆಗಿರಬಹುದು ಅಥವಾ ಇಚ್ಛೆಯ ವಿರುದ್ಧದ ಸಂಭೋಗ ಅಂದರೆ ಬಲಾತ್ಕಾರವೇ ಆಗಿರಬಹುದು. ವೈದ್ಯಕೀಯ ದೃಷ್ಟಿಯಿಂದ ನೋಡಿದಾಗ ಗಂಡನೊಂದಿಗಿನ ಸಂಭೋಗ ಮತ್ತು ಪರಪುರುಷ ನೊಂದಿಗಿನ ಸಂಭೋಗ ಇವೆರಡರಲ್ಲಿ ಮೂಲಭೂತ ವಾಗಿ ಯಾವ ವ್ಯತ್ಯಾಸವೂ ಇಲ್ಲ. ಇದೇ ರೀತಿ ಇಚ್ಛಾ ಸಂಭೋಗ ಮತ್ತು ಬಲಾತ್ಕಾರ ಇವೆರಡರ ನಡುವೆ ಮೂಲಭೂತವಾದ ದೈಹಿಕ ವ್ಯತ್ಯಾಸಗಳೇನಾದರೂ ಇವೆಯೇ ಎಂಬ ಪ್ರಶ್ನೆ ಕೇಳಿದ್ದಾದರೆ ಏನೂ ಇಲ್ಲ ಎಂದೇ ಉತ್ತರಿಸಬೇಕಾಗುತ್ತದೆ. ಪ್ರಪ್ರಥಮ ಬಾರಿಗೆ ಸಂಭೋಗ ಮಾಡುವಾಗ – ಅದು ಗಂಡನೊಂದಿಗೆ ಇರಬಹುದು ಅಥವಾ ಪರಪುರುಷನೊಂದಿಗೆ ಇರಬಹುದು, ಇಚ್ಛಾ ಸಂಭೋಗವೇ ಇರಬಹುದು ಅಥವಾ ಬಲಾತ್ಕಾರ ಸಂಭೋಗ ಇರಬಹುದು – ಅವಳ ಕನ್ಯಾಪೊರೆ ಹರಿಯುತ್ತದೆ. ಆದರೆ ಈ ಕನ್ಯಾಪೊರೆಯು ಕುದುರೆ ಸವಾರಿಯೇ ಮುಂತಾದ ಅನೇಕ ಅಲೈಂಗಿಕ ದೈಹಿಕ ಚಟುವಟಿಕೆಗಳ ಕಾರಣದಿಂದಾಗಿಯೂ ಹರಿಯುವ ಶಕ್ಯತೆ ಇದೆ. ಈಗ ವೈದ್ಯಕೀಯ ವಿಜ್ಞಾನ ಅಪಾರವಾಗಿ ಬೆಳೆದಿದೆ. ನೂರಾರು ಕಾರಣಗಳಿಗಾಗಿ ಜನರು ಆಸ್ಪತ್ರೆ ಸೇರುತ್ತಾರೆ. ಆಸ್ಪತ್ರೆಯಲ್ಲಿ ವೈದ್ಯರು ಕಾಯಿಲೆಗನು ಸಾರವಾಗಿ ವಿವಿಧ ತರದ ಶುಶ್ರೂಷಾ ಕ್ರಮಗಳನ್ನು ಪ್ರಾರಂಭಿಸುತ್ತಾರೆ. ಇವುಗಳಲ್ಲಿ ಬಹಳ ಸಾಮಾನ್ಯವಾದ ಒಂದು ಕ್ರಮವೆಂದರೆ ನಳಿಕೀಕರಣ ಅಥವಾ ಕ್ಯಾಥೆಟರೈಸೇಷನ್ ಎಂಬುದು. ಅಂದರೆ ಮೂತ್ರದ್ವಾರದ ಮೂಲಕ ಮೂತ್ರಾಶಯದೊಳಗೆ ಒಂದು ನಳಿಕೆ ಹಾಕುವುದು. ಇದು ಗಂಡಸರಿಗೆ ಮತ್ತು ಹೆಂಗಸರಿಗೆ ಇಬ್ಬರಿಗೂ ಮಾಡಲಾಗುವ ಕ್ರಮ. ಗಂಡಸಿನ ಮೂತ್ರ ದ್ವಾರ ಅಂದರೆ ಶಿಶ್ನದ ಮೂಲಕ ನಳಿಕೆ ಹಾಕಿದರೂ ಅದರಿಂದ ಅವನ ಪ್ರಜನನಾಂಗದ 'ಪಾವಿತ್ರ್ಯ'ಕ್ಕೆ ಯಾವುದೇ ತರದ ಧಕ್ಕೆ ಬರುವುದಿಲ್ಲ, ಅದು ಶೀಲಭಂಗ ಅನ್ನಿಸಿಕೊಳ್ಳುವುದಿಲ್ಲ.

ಹೆರಿಗೆ ಮತ್ತು ಸ್ತ್ರೀರೋಗ ಶಾಸ್ತ್ರವೂ ಈಗ ಅಗಾಧವಾಗಿ ಮುನ್ನಡೆದಿದೆ. ಸಾಕಷ್ಟು ಮಹಿಳೆಯರ ಹೆರಿಗೆ ಆಸ್ಪತ್ರೆಗಳಲ್ಲಿ ಆಗುತ್ತದೆ. ಬಸಿರು, ಹೆರಿಗೆ, ಗರ್ಭ ನಿರೋಧ, ಮುಟ್ಟಿನ ತೊಂದರೆಗಳು, ಕ್ಯಾನ್ಸರ್ ಪ್ರತಿಬಂಧ ಇತ್ಯಾದಿ ಹತ್ತೆಂಟು ಕಾರಣಗಳಿಗಾಗಿ ಈಗ ಮಹಿಳೆ ಡಾಕ್ಟರ್ ಬಳಿಗೆ ಬರುತ್ತಾಳೆ. ಆಗ ಡಾಕ್ಟರರು ಒಂದು ಪ್ರಾಥಮಿಕ ದೈಹಿಕ ತಪಾಸಣೆಯಾಗಿ ಯೋನಿಯೊಳಗೆ ಬೆರಳು ತೂರಿಸಿ ಯೋನಿ ಪರೀಕ್ಷೆ ಮಾಡುತ್ತಾರೆ. ಡಾಕ್ಟರು ಗಂಡಸಾಗಿರ ಬಹುದು ಅಥವಾ ಹೆಂಗಸಾಗಿರಬಹುದು. ಆದರೆ ಈ ಯೋನಿಪರೀಕ್ಷೆಯಿಂದ ಶೀಲಭಂಗವಾಗುತ್ತದೆ ಎಂದು ಯಾರೂ ಅನ್ನುವುದಿಲ್ಲ. ಹಾಗಾದರೆ ಶೀಲದ ದೈಹಿಕ ಆಯಾಮವಾದರೂ ಏನು? ಬಲಾತ್ಕಾರಕ್ಕೊಳಗಾದ ಹೆಂಗಸು ಹೇಗೆ 'ಕೆಡು'ತ್ತಾಳೆ? ಶೀಲವೆಂದರೆ ಕನ್ಯಾಪೊರೆ ಅಲ್ಲ, ಶೀಲವೆಂದರೆ ಯೋನಿಯೊಳಗಿನ ಯಾವುದೇ ಒಂದು ಭಾಗವೂ ಅಲ್ಲ. ಹೀಗೆ ಜ್ಞಾನದ ದೀವಟಿಗೆ ಹಿಡಿದುಕೊಂಡು ಸಂಪ್ರದಾಯದ ಏಳು ಸುತ್ತಿನ ಕೋಟೆ ಒಳಗೆ ಒಳಗೆ ಒಳಗೆ ಹೋಗಿ ಹುಡುಕಾಡಿದರೂ ನಮಗೆ ಈ ಶೀಲ ಎಂಬುದು ಸಿಗುವುದಿಲ್ಲ. ಯಾಕೆಂದರೆ ಈ ಯೋನಿಶೀಲಕ್ಕೆ ದೈಹಿಕ ಆಯಾಮವೆಂಬುದೇ ಇಲ್ಲ. ಯೋನಿಶೀಲ ಎಂಬುದು ಒಂದು ದೈಹಿಕ ಸತ್ಯವೇ ಅಲ್ಲ.

ಇನ್ನು ನಾವು ಅದರ ಮಾನಸಿಕ ಆಯಾಮವನ್ನು ಪರೀಕ್ಷಿಸೋಣ. ಶೈಶವಾವಸ್ಥೆಯಿಂದ ನಾವು ಬೆಳೆದು ದೊಡ್ಡವರಾಗುವಾಗ ನಮ್ಮ ಸುತ್ತಲಿನ ಸಮಾಜವು ನಾವು ಉಸಿರಾಡುವ ಗಾಳಿ, ಕುಡಿಯುವ ನೀರು, ತಿನ್ನುವ ಅನ್ನ ಇವುಗಳ ಮೂಲಕವೇ ಪ್ರತಿನಿತ್ಯ ಈ ಶೀಲದ ಮೌಲ್ಯವನ್ನು ನಮ್ಮ ತಲೆಯೊಳಗೆ ತುಂಬುತ್ತದೆ. ಹೀಗಾಗಿ ಪ್ರಬುದ್ಧಾವಸ್ಥೆಗೆ ಬಂದು ತಲುಪುವುದರಲ್ಲಿ ನಮಗೆಲ್ಲ ಈ ಶೀಲ ಎಂದರೆ ಏನು ಎಂಬುದು ಗೊತ್ತಾಗಿರುತ್ತದೆ. ಗೌತಮ ಅಹಲ್ಯೆಯರು, ರಾಮ ಸೀತೆಯರು, ಜೋಹರ್ ಮಾಡಿಕೊಳ್ಳುವ ರಜಪೂತ ಮಹಿಳೆಯರು ಸಿನೆಮಾಗಳಲ್ಲಿ ಖಳನಾಯಕನಿಂದ ಬಲಾತ್ಕಾರಕ್ಕೊಳಗಾಗಿ ಆತ್ಮಹತ್ಯೆ ಮಾಡಿ

## ಸಂಬಂಧ

ತಿರುಗಣೆಯ ಪಿಂಗಾಣಿ ಜಾಡಿ  
ಸ್ತ್ರೀಧನವಾಗಿ ಜೊತೆಯಲ್ಲಿ  
ಅಲ್ಲ ಹಿಂದಿಂದ ಬಂದಿತ್ತು  
ಎಲ್ಲಿ ಯಾವಾಗ ಕೊಂಡದ್ದು  
ನೆನಪು ನನಗಿಲ್ಲ ಅವಳಿಗೂ  
ಮುಚ್ಚಳ ಹಾಕಿ ತೆರೆವಾಗೆಲ್ಲ  
ಎಚ್ಚರಿಕೆಯ ಗಂಟೆ  
ಕತೆ ಉಪಕತೆಗಳ ಬಂಡಿ  
ನೆನಪು ಸರಿದಷ್ಟೂ ಹಿಂದೆ  
ಲಿಂಬೆ ಮಾವು ತರತರದ  
ಉಪ್ಪಿನಕಾಯಿ ಕೆಡದಂತೆ  
ಉಳಿಸಿದ್ದ ಜಾಡಿಗೆ ವರ್ಷಕ್ಕೊಮ್ಮೆ  
ಅಭ್ಯಂಜನ ಬಿಸಿಲ ಸ್ನಾನ  
ಹೇಗಮ್ಮ ಮಾಡೋದು ನನಗೂ  
ಕಲಿಸಮ್ಮ ನಿನ್ನ ಕೈರುಚಿ  
ಇನ್ನೆಲ್ಲೂ ಸಿಗದಲ್ಲ  
ಮಗಳ ಪ್ರಶ್ನೆ ನನ್ನದೂ  
ಅಂಥ ಜಾಡಿ ಮೊನ್ನೆ ಯಾಕೋ  
ಚಂಡಿ ಹಿಡಿದು ಕೂತಿತ್ತು  
ಏನಾಯ್ತು ಅರಿವಾಗುವಷ್ಟರಲಿ  
ಮೇಲಕೂ ಬರದೆ ಒಳಗೂ  
ಹೋಗದೆ ನಡುವಲ್ಲಿ ನಿಂತಿತ್ತು  
ಕಾಲವೇ ನಿಂತಂತೆ  
ಹೋದರೆ ಹೋಯ್ತಮ್ಮ ಅದಕ್ಯಾಕೆ  
ಕಣ್ಣೀರು ಇಲ್ಲವೆ ಅಪ್ಪ ತಂದ  
ಹೊಸ ಜಾಡಿ ಕೆಟ್ಟರೆ ಕೆಡಲಿ  
ಉಳಿದಿದ್ದ ಉಪ್ಪಿನಕಾಯಿ ಅಷ್ಟಿಷ್ಟು  
ತಂದರಾಯಿತು ಅಂಗಡಿಯಿಂದ  
ಮಗಳ ಅವಳಪ್ಪನ ಮಾತಿಗೆ  
ಜಾಡಿ ಜಾರಲೊಪ್ಪದೆ ಕುಳಿತಿತ್ತು  
ಸಸಿಯಾಗಿ ಮೊಗ್ಗಾಗಿ ಹೂವಾಗಿ



ಆ ಮನೆಯ ನೆನಪಾಗಿ  
ಕಳೆದ ಕ್ಷಣಗಳ ಸ್ಮೃತಿಯಾಗಿ  
ಎಲ್ಲೋ ಮೂಲೆಯಲಿ ಇದ್ದು  
ತ್ರಿವಿಕ್ರಮಾಕಾರ ತಾಳಿದ್ದು  
ಹೇಗೆ ತಿಳಿದೀತು ಆಕೆಗೆ  
ಊರಿಂದ ಬಂದಿಳಿದ ಅತ್ತೆಗೆ  
ಸಾರಿತ್ತು ಡಂಗುರ ಹಿಡಿಯಾದ  
ಮನಸಿಗೆ ಮಿದುಗೈ ಭರವಸೆ  
ಅನುಭವದ ಎರೆದು  
ಜಾಡಿಗೆ ಕೈ ಹಾಕಿದ್ದೇ  
ಪಟ್ಟಂತ ತೆರೆದಿತ್ತು ಬಾಯಿ.

ಡಾ॥ ಸಬಿಹಾ  
ಕನ್ನಡ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ.  
ಮಂಗಳ ಗಂಗೋತ್ರಿ - ೫೭೪ ೧೯೯

ಕೊಳ್ಳುವ ನಾಯಕನ ತಂಗಿ, ನಮ್ಮ ವಿಶಿಷ್ಟ ಬೈಗುಳಗಳು, ಹೀಗೆ ಬಾಳಿನ ಅಸಂಖ್ಯ ವಿಷಯಗಳು ತಮ್ಮ ತಮ್ಮವೇ ಆದ ರೀತಿಯಲ್ಲಿ ನಮಗೆ ಶೀಲ ಅಂದರೆ ಏನು ಎಂಬುದನ್ನು ಕಲಿಸುತ್ತವೆ. ಅದನ್ನು ಕಾಪಾಡಿಕೊಂಡು ಇರುವುದೇ ಪರಮ ಧರ್ಮ ಎಂಬುದನ್ನು ಸುತ್ತಲ ಹಿರಿಯರು ಮನದಟ್ಟು ಮಾಡಿಕೊಡುತ್ತಾರೆ. ಶೀಲದ ಈ ಮೌಲ್ಯವನ್ನು ರಕ್ತಗತ ಮಾಡಿಕೊಂಡು ಬೆಳೆದ ಮಹಿಳೆಗೆ ಅದರ ಆಚೆ ನೋಡುವುದೇ ಶಕ್ಯವಾಗುವುದಿಲ್ಲ. 'ಶೀಲವೇ ಸರ್ವಸ್ವ' ಎಂಬುದು ಅತಿ ಗಟ್ಟಿಯಾದ ಮಾನಸಿಕತೆ. ಪ್ರತಿಯೊಬ್ಬ ಹೆಂಗಸೂ ಈ ಮಾನಸಿಕತೆಯನ್ನು ಬೆಳೆಸಿಕೊಳ್ಳುವುದರ ಬಗ್ಗೆ ಸಮಾಜವು ಬಹಳ ಕಾಳಜಿ ವಹಿಸುತ್ತದೆ. ಬಲಾತ್ಕಾರಕ್ಕೊಳಗಾದ ಹೆಂಗಸು ಶೀಲಗೆಟ್ಟವಳಾಗುತ್ತಾಳೆ, ನಾಯಿ ಮುಟ್ಟಿದ ಗಡಿಗೆಯಾಗುತ್ತಾಳೆ ಎಂಬುದನ್ನು ಸಮಾಜವು ಪ್ರತಿಯೊಬ್ಬ ಹೆಂಗಸಿಗೂ ನಂಬಿಸುತ್ತದೆ. ಈ ನಾಯಿ ಮುಟ್ಟಿದ ಗಡಿಗೆಯ ಹೋಲಿಕೆ ಇದೆಯಲ್ಲ ಇದು ಬಹಳ ಸಮರ್ಪಕವಾದ ಹೋಲಿಕೆ. ನಾಯಿ ಗಡಿಗೆಯನ್ನು ಮುಟ್ಟಿತು ಎಂಬುದು ಗೊತ್ತಾದಾಗ ಮನೆಮಂದಿ ಆ ನಾಯಿಯನ್ನು ಹೆಚ್ಚೆಂದರೆ ಕಲ್ಲು ಕೋಲುಗಳಿಂದ ನಾಲ್ಕು ಏಟು ಕೊಟ್ಟು ಓಡಿಸುತ್ತಾರೆ. ನಾಯಿಗೆ ಇದಕ್ಕಿಂತ ಮಿಗಿಲಾದ ಶಿಕ್ಷೆ ಆಗುವುದಿಲ್ಲ. ಆದರೆ ಗಡಿಗೆಗೆ? ಈ ಘಟನೆಯಲ್ಲಿ ಗಡಿಗೆಯದು ಏನೂ ತಪ್ಪು ಇಲ್ಲ ಎಂಬುದು ಸುಸ್ಪಷ್ಟ. ಆದರೂ ಮನೆಯವರು ಈ ಗಡಿಗೆಯನ್ನು ಮತ್ತೆ ಮನೆಯೊಳಕ್ಕೆ ತರುವುದಿಲ್ಲ. ಈ ಗಡಿಗೆಗೆ ನಾಯಿ ಮುಟ್ಟಿದ ಕಳಂಕವನ್ನು ತೊಡೆದು ಹಾಕುವುದೇ ಶಕ್ಯವಿಲ್ಲ. ತನ್ನದು ಏನೂ ತಪ್ಪಿಲ್ಲದಿರುವಾಗಲೂ ಅದು ಶಾಶ್ವತವಾಗಿ ಬಹಿಷ್ಕೃತಗೊಳ್ಳುತ್ತದೆ. ಹೇಗಿದೆ ಈ ನ್ಯಾಯ ?

'ಶೀಲವೇ ಸರ್ವಸ್ವ' ಎಂಬ ಮಾನಸಿಕತೆಯ ಶಿಖರಪ್ರಾಯ ನಿದರ್ಶನಗಳೆಂದರೆ ಜೋಹರ್ ಮಾಡಿಕೊಳ್ಳುವ ರಜಪೂತ ಮಹಿಳೆಯರು. ಯುದ್ಧದಲ್ಲಿ ಸೋಲು ಪಾಲಿಗೆ ಬಂದಾಗ ಇನ್ನೇನು ವೈರಿ ಸೈನಿಕರು ಊರೊಳಗೆ ನುಗ್ಗಿ ಬರುತ್ತಾರೆ ಎನ್ನುವಾಗ ರಜಪೂತ ಮಹಿಳೆಯರು 'ಪ್ರಾಣ ಹೋದರೂ ಸರಿ, ಶೀಲಗೆಡುವುದಿಲ್ಲ' ಎಂದು ಹೇಳಿ ನೂರಾರು ಸಂಖ್ಯೆಯಲ್ಲಿ ಬಾವಿಗೆ ಬಿದ್ದು ಜೀವ ಕೊಡುತ್ತಾರೆ. ಸಮಾಜ ಈ ಮಹಿಳೆಯರಿಗೆ 'ಮಾತೃಭೂಮಿಯ ರಕ್ಷಣೆಗಾಗಿ ನೀವೂ ಕೈಲಾದಷ್ಟು ಹೋರಾಡಿ; ವೀರ ಮರಣ ಪಾಲಿಗೆ ಬಂದರೆ ನಗುನಗುತ್ತ ಅಪ್ಪಿಕೊಳ್ಳಿ' ಎಂದು ಹೇಳುವ ಬದಲಿಗೆ 'ಶೀಲವೇ ನಿಮ್ಮ ಸರ್ವಸ್ವ, ಅದರ ರಕ್ಷಣೆಯೇ ನಿಮ್ಮ ಪರಮಕರ್ತವ್ಯ' ಎಂದು ಹೇಳುತ್ತದೆ. ರಜಪೂತ ಮಹಿಳೆಯರು ಇದನ್ನು ಶಿರಸಾ ವಹಿಸಿ ಪಾಲಿಸುತ್ತಾರೆ ಹಾಗೂ ತಲೆ ತಲೆಮಾರುಗಳ ಜನರ ಕಣ್ಣಲ್ಲಿ ತಮ್ಮ ಪಾತಿವ್ರತ್ಯ ಕಾಪಾಡಿಕೊಂಡ, ಶೀಲಕ್ಕಾಗಿ ಪ್ರಾಣವನ್ನೇ ತೆತ್ತ ಶ್ರೇಷ್ಠ ಸ್ತ್ರೀರತ್ನಗಳಾಗುತ್ತಾರೆ.

ಶೀಲದಂತಹ ಒಂದು ಮೌಲ್ಯ, ಒಂದು ಮಾನಸಿಕತೆಯನ್ನು ಹೋಲುವ ಇನ್ನೊಂದು ನಿದರ್ಶನ ಇದೆಯೆ? ಇದೆ. ನಮ್ಮ ಸಮಾಜದೊಳಗೇ ಇದೆ. ಅದು ಮತ್ಯಾವುದೂ ಅಲ್ಲ, ನಮ್ಮ ಜಾತಿಪದ್ಧತಿ. ಜಾತಿಪದ್ಧತಿಯೆಂಬುದು ಎಷ್ಟರ ಮಟ್ಟಿಗೆ ಒಂದು ಬಾಹ್ಯ ವಾಸ್ತವವೋ ಅಷ್ಟೇ ಅಥವಾ ಅದಕ್ಕಿಂತ ಹೆಚ್ಚಾಗಿ ಅದೊಂದು ಮಾನಸಿಕತೆ. ''ನೀವು ಕೀಳುಜನರು, ದೇವರೇ ನಿಮ್ಮನ್ನು ಕೀಳಾಗಿ ಹುಟ್ಟಿಸಿದ್ದು; ನೀವು ಸವರ್ಣೀಯರ ಗುಡಿಗಳ ಒಳಗೆ ಕಾಲಿಡತಕ್ಕದ್ದಲ್ಲ; ಒಳಗಿನ ದೇವರನ್ನು ನೋಡತಕ್ಕದ್ದಲ್ಲ; ಗುಡಿಯ ಈ ಪಾವಿತ್ರ್ಯಕ್ಕೆ ನೀವು ಭಂಗ ತಂದಿದ್ದೇ ಆದರೆ ನಿಮಗೆ ಕೇಡು ತಪ್ಪಿದ್ದಲ್ಲ; ದೇವರು ನಿಮಗೆ ಕೊಡಬಾರದ ಕಷ್ಟ ಕೊಡುತ್ತಾನೆ,'' ಎಂದು ತಲೆ ತಲೆಮಾರುಗಳಿಂದ ಅಸ್ಪೃಶ್ಯರ ತಲೆಗಳಲ್ಲಿ ತುಂಬಿಬಿಡಲಾಗಿತ್ತು. ಈ ಮೌಲ್ಯವನ್ನು ಅಂತರೀಕರಿಸಿಗೊಂಡ ಅಸ್ಪೃಶ್ಯರು ಎಷ್ಟೋ ಶತಮಾನಗಳ ಕಾಲ ಸವರ್ಣೀಯರ ಗುಡಿಗಳ ಒಳಗೆ ಕಾಲಿಟ್ಟಿರಲಿಲ್ಲ; ಅವರ ಕೆರೆಗಳ ನೀರು ಮುಟ್ಟಿರಲಿಲ್ಲ. ಸಮಾಜ ರೂಪಿಸಿದ ಈ ಸತ್ಯದ ಆಚೆ ತಾವು ಹೋಗಬಹುದು, ಆಚೆ ಹೋಗಿ ವಿಚಾರ ಮಾಡಬಹುದು ಎಂಬುದನ್ನು ಅವರು ಊಹಿಸುವುದು ಕೂಡ ಶಕ್ಯವಿರಲಿಲ್ಲ. ಸ್ಪೃಶ್ಯ-ಅಸ್ಪೃಶ್ಯ ಮೌಲ್ಯವನ್ನು ಸವರ್ಣೀಯರು ಎಷ್ಟರಮಟ್ಟಿಗೆ ಹೇರಿದ್ದರೋ ಅಷ್ಟರಮಟ್ಟಿಗೆ ಅಸ್ಪೃಶ್ಯರು ಅದನ್ನು ನಂಬಿದ್ದರು. ಈ ನಂಬಿಕೆಯ, ಈ ಮೌಲ್ಯದ ಆಚೆ ಹೋಗಬಹುದು, ಅದರ ಆಚೆ ಹೋಗಿ ನಿಂತಾಗಲೇ ಅದರೊಳಗಿನ ಸುಳ್ಳು, ಠಕ್ಕತನ ಅನ್ಯಾಯ, ಅಮಾನವೀಯತೆಗಳು ಸಂಪೂರ್ಣವಾಗಿ ಅರ್ಥವಾಗುತ್ತವೆ ಎಂದು ನಮಗೆ ತೋರಿಸಿಕೊಟ್ಟವರು ಮಹಾತ್ಮ ಫುಲೆ, ಆಂಬೇಡ್ಕರ್, ಗಾಂಧೀಜಿ ಮುಂತಾದ ದಾರ್ಶನಿಕರು.

ಶೀಲ ಎಂಬ ಮಾನಸಿಕತೆಯೂ ಇಂತಹುದೇ. 'ಹೆಂಗಸೇ ಕೇಳು, ಶೀಲವೇ ನಿನ್ನ ಸರ್ವಸ್ವ, ಅದು ನಿನ್ನ ಪ್ರಾಣಕ್ಕಿಂತಲೂ ಹೆಚ್ಚಿನದು. ಅದು ಒಮ್ಮೆ ಹೋದರೆ ಮತ್ತೆ ಬಾರದು; ಮುಕ್ತ ಓಡಾಟ ಮತ್ತು ಅದರಿಂದ ದೊರೆಯುವ ಸಾವಿರ ಲಾಭಗಳನ್ನು ನೀನು ಕಳೆದುಕೊಂಡರೂ ಸರಿಯೆ, ಕೆಲಸ ಬಿಡಬೇಕಾಗಿ ಬಂದರೂ ಸರಿಯೆ, ಪ್ರವಾಸವೇ ಮುಂತಾದ ಅನುಭವಗಳಿಂದ ವಂಚಿತಳಾದರೂ ಸರಿಯೆ, ಜೀವನಾನಂದದ ಹಲವಾರು ಅವಕಾಶಗಳಿಗೆ ಎರವಾದರೂ ಸರಿಯೆ, ಏನೇ ಆದರೂ ಸರಿ, ನೀನು ನಿನ್ನ ಶೀಲವನ್ನು ಮಾತ್ರ ಕಳೆದುಕೊಳ್ಳತಕ್ಕದ್ದಲ್ಲ' – ಈ ಮಹಾಮೌಲ್ಯವನ್ನು ಸಮಾಜವು ಎಲ್ಲ ಹೆಂಗಸರಿಗೂ ಕಲಿಸಿ ಅದನ್ನು ಅತ್ಯಂತ ಪರಿಣಾಮಕಾರಿಯಾಗಿ ಆಚರಣೆಯಲ್ಲಿ ತರುತ್ತದೆ. ಶೀಲದ ವಿಷಯದಲ್ಲಿ ಗಂಡಸು ಯಾವತ್ತೂ ಎಂಜಲಾಗುವುದಿಲ್ಲ, ಹೆಂಗಸು ಮಾತ್ರ ಎಂಜಲಾಗುತ್ತಾಳೆ. ಅಷ್ಟೇ ಅಲ್ಲ ಜೀವಮಾನ ಪರ್ಯಂತ ಎಂಜಲಾಗಿಯೇ ಉಳಿಯುತ್ತಾಳೆ. ಗಂಡಸರಿಗೆ ಇಲ್ಲದ ಈ ಶೀಲದ ಮೌಲ್ಯ ಕೇವಲ ನಮಗೇಕೆ ? ಎಂದು ಹೆಂಗಸರು ಕೇಳುವುದಂತೂ ದೂರವೇ ಉಳಿಯಿತು ಬದಲಿಗೆ ಪ್ರತಿಯೊಬ್ಬ ಮಹಿಳೆಗೆ ಯೋನಿಶೀಲವೇ ತನ್ನ ಸರ್ವಶ್ರೇಷ್ಠ ಆಸ್ತಿ ಎಂಬ ನಂಬಿಕೆಯ ನೆರಳಿನಲ್ಲಿಯೇ ಬಾಳುವಂತೆ ನಮ್ಮ ಸಮಾಜ ಅದ್ಭುತ ಕಾಳಜಿ ವಹಿಸುತ್ತದೆ.

ಶೀಲವೆಂಬ ಈ ಮೌಲ್ಯ ಮಾನವ ಇತಿಹಾಸದಲ್ಲಿ ಯಾವಾಗ, ಹೇಗೆ ಮತ್ತು ಏಕೆ ರೂಪುಗೊಂಡಿತು ಎಂಬುದು ಸಂಶೋಧನೆಯ ವಿಷಯವೇ ಸರಿ. ಆದರೆ ಇಂದು ವೈದ್ಯಕೀಯ ವಿಜ್ಞಾನ ಬಹಳಷ್ಟು ಮುಂದುವರಿದಿದೆ. ಗಂಡಸು ಮತ್ತು ಹೆಂಗಸಿನ ಪ್ರಜನನಾಂಗಗಳ ಬಗ್ಗೆ, ಜೀವದ ಪುನರುತ್ಪತ್ತಿಯ ಬಗ್ಗೆ, ನಮಗೆ ಇಂದು ಸಾಕಷ್ಟು ಜ್ಞಾನವಿದೆ. ಬಲಾತ್ಕಾರದಲ್ಲಿ ಅಡಕವಾಗಿರುವ ಶಾರೀರಿಕ ವಿಷಯಗಳ ಬಗ್ಗೆ ಕೂಲಂಕಷವಾಗಿ ತಿಳಿದಿದೆ. ಯೋನಿಶೀಲ ಅಥವಾ ಯೋನಿಶುದ್ಧತೆಯೆಂಬುದು ಈ ಸಮಾಜ ಮಹಿಳೆಯ ಮೇಲೆ ಹೊರಿಸಿರುವ ಒಂದು ಕಾಲ್ಪನಿಕ ಸತ್ಯದ ಮೌಲ್ಯ ಎಂಬುದು ನಮಗೆ ಅರ್ಥವಾಗುತ್ತದೆ. ಇಂದು ಬಲಾತ್ಕಾರ ಎಂಬುದು ಕಾಲುಪಾಲು ಅದನ್ನು ಎಸಗುವ ಗಂಡಸು ಮತ್ತು ಮುಕ್ಕಾಲು ಪಾಲು ಈ ಸಮಾಜ, ಯಾಕೆಂದರೆ ಬಲಾತ್ಕಾರದ ಕೃತ್ಯದ ಹಿನ್ನೆಲೆಯಲ್ಲಿ ಈ ಯೋನಿಶೀಲದ ಹುಸಿಮೌಲ್ಯ ನಿಲ್ಲುವುದರಿಂದ ಪ್ರತಿಯೊಬ್ಬ ಮಹಿಳೆಯೂ ಬಲಾತ್ಕಾರಕ್ಕೆ ಇಷ್ಟೊಂದು ಅಂಜಬೇಕಾಗುತ್ತದೆ.

ಹಾಗಾದರೆ ಈಗ, ಇಂದು ಈ ಯೋನಿಶೀಲದ ಮೌಲ್ಯವನ್ನು ಬದಲಾಯಿಸುವುದು ಸಾಧ್ಯವೇ? ಇದನ್ನು ಬದಲಾಯಿಸುವುದು ಹೇಗೆ? ಬದಲಾಯಿಸುವವರು ಯಾರು? ಬದಲಾಯಿಸುವುದು ನಿಶ್ಚಿತವಾಗಿಯೂ ಶಕ್ಯವಿದೆ. ಬಹಳ ಹಿಂದೆ ಬೇಡ, ತೀರ ಇತ್ತೀಚಿನ ಇತಿಹಾಸದಲ್ಲಿಯೇ ನಾವು ಅನೇಕ ಮೌಲ್ಯಗಳನ್ನು ಬದಲಾಯಿಸಿಕೊಳ್ಳುವಲ್ಲಿ ಯಶಸ್ಸು ಪಡೆದಿರುವುದು ನಮಗೆಲ್ಲ ಗೊತ್ತು. ಉದಾಹರಣೆಗೆ ನಿನ್ನೆ ಮೊನ್ನೆಯವರೆಗೂ ನಮ್ಮಲ್ಲಿ 'ಮಿತಸಂತಾನ' ಎಂಬ ವಿಚಾರವೇ ನಿಷಿದ್ಧವಾಗಿತ್ತು. ''ಕೊಡುವಾತ ದೇವರು; ದೇವರು ಕೊಟ್ಟಷ್ಟು ಮಕ್ಕಳನ್ನು ದೈನ್ಯಭಾವದಿಂದ ಸ್ವೀಕರಿಸುವುದಷ್ಟೇ ನಮ್ಮ ಪಾಲಿನ ಕರ್ತವ್ಯ. ದೇವರು ದಯಪಾಲಿಸುವುದನ್ನು ನಿರಾಕರಿಸುವುದು ಘೋರ ಪಾಪದ ಕೃತ್ಯ,'' ಎಂಬುದು ಅನಾದಿಕಾಲದಿಂದ ಬಂದ ಮೌಲ್ಯವಾಗಿತ್ತು. ಆದರೆ ಜನಸಂಖ್ಯೆಯೇ ಒಂದು ಸಮಸ್ಯೆಯಾಗುತ್ತಿದೆ ಎಂಬುದು ತಿಳಿಯುತ್ತ ಬಂದಂತೆ ನಾವೆಲ್ಲರೂ ಹಳೆಯ ಮೌಲ್ಯವನ್ನು ತ್ಯಜಿಸಿ 'ಮಿತಸಂತಾನ'ದ ಮೌಲ್ಯವನ್ನು ಅಪ್ಪಿಕೊಳ್ಳುತ್ತಿದ್ದೇವೆ. ಹಾಗೂ ಅದರ ಪ್ರಕಾರ ನಮ್ಮ ವಾಸ್ತವವನ್ನು ಪರಿವರ್ತಿಸಿಕೊಳ್ಳುತ್ತಿದ್ದೇವೆ. ಹನ್ನೆರಡನೆ ಶತಮಾನದಲ್ಲಿ ನಮ್ಮ ನಾಡಿನಲ್ಲಿಯೇ ಆಗಿ ಹೋದ ಶರಣ ಚಳುವಳಿಯಲ್ಲಿ ಈ ಯೋನಿಶೀಲದ ಮೌಲ್ಯವನ್ನು ದಾಟಿ ಆಚೆ ಹೋಗುವ ಪ್ರಯತ್ನ ತಕ್ಕಮಟ್ಟಿಗೆಯಾದರೂ ನಡೆದಿತ್ತು ಎಂಬುದು ತಿಳಿದುಬರುತ್ತದೆ. ಯೋನಿಶೀಲಕ್ಕಿಂತ ವ್ಯಕ್ತಿತ್ವಶೀಲವೇ ಮಹತ್ವದ್ದು ಎಂಬ ತತ್ವಕ್ಕೆ ಆಗ ಮಾನ್ಯತೆಯಿತ್ತು. ಆದ್ದರಿಂದಲೇ ಪಣ್ಯಸ್ತ್ರೀಯರಿಗೆ ಅಂದರೆ ಸೂಳೆಯರಿಗೆ

## ಮುಂದೆ - ಹಿಂದೆ

ಬಿರುಕು ಬಿಟ್ಟ ಗದ್ದೆ
ಹಸಿದ ಹೋರಿಗಳು
ಬೆನ್ನಿಗಂಟಿದ ಶರೀರ
ಕೈಯಲ್ಲಿ ಊರುಗೋಲು
ಮುಂದೆ
ನಾಲಿಗೆಗಳ ಚಾಚಿದ
ಏಳು ಮುಖಗಳ
ಕೈಯಲ್ಲಿ ಶೂಲ ಹಿಡಿದ
ಭೈರವ ಮೂರ್ತಿ
ಹಿಂದೆ

ರವಿಶಂಕರ ಒಡ್ಡಂಬೆಟ್ಟು
ಕನ್ಯಾನ

ಸಹ ಶರಣೆಯರಾಗುವ ಅವಕಾಶವಿತ್ತು ಹಾಗೂ ಅನೇಕ ಸೂಳೆಯರು ಶರಣೆಯರಾಗಿ ಬಾಳಿ ವಚನಗಳನ್ನು ರಚಿಸಿದರು. ಹೆಂಗಸರು ಮತ್ತು ಗಂಡಸರು ಇಬ್ಬರಿಗೂ ಶೀಲ ಇರಬೇಕು ಎಂಬ ವಿಚಾರಕ್ಕೆ ಬಹಳ ಒತ್ತು ಕೊಡಲಾಗುತ್ತಿತ್ತು.

ಈ ಹಿನ್ನೆಲೆಯಲ್ಲಿ ಶೀಲಭಂಗದ ಪರಿಕಲ್ಪನೆ ಇರುವುದರಿಂದಲೇ ಬಲಾತ್ಕಾರಕ್ಕೆ ಇಷ್ಟೊಂದು ಮಹತ್ವ ಬರುತ್ತದೆ. ಬಲಾತ್ಕಾರ ಅನ್ಯಾಯವೇ ಅಲ್ಲ ಅದಕ್ಕೆ ಶಿಕ್ಷೆಯೇ ಅಗತ್ಯವಿಲ್ಲ ಎಂದು ನಾನು ಸರ್ವಥಾ ಹೇಳುತ್ತಿಲ್ಲ. ಬಲಾತ್ಕಾರದಿಂದ ಶೀಲಭಂಗವಾಗುತ್ತದೆ ಎಂದು ನಂಬಿ ಅದನ್ನು ವಿರೋಧಿಸುವುದಾದರೆ ಅದರಿಂದ ಮಹಿಳೆಗೇ ಹೆಚ್ಚು ಅನ್ಯಾಯವಾಗುತ್ತದೆ, ಹಾನಿಯಾಗುತ್ತದೆ. ಯಾಕೆಂದರೆ ಈ ಮೌಲ್ಯವನ್ನು ನಂಬಿರುವ ಯಾವ ಮಹಿಳೆಯೂ ತನ್ನ ಬಲಾತ್ಕಾರವಾಗಿದೆ ಎಂದು ಹೇಳಲು ಮುಂದೆ ಬರುವುದಿಲ್ಲ, ನಡೆದಿರುವ ಅನ್ಯಾಯದ ಬಗ್ಗೆ ಅನ್ಯಾಯಕ್ಕೊಳಗಾದವರೇ ಮಾತಾಡುವುದಿಲ್ಲ ಎಂದಾದಾಗ ಅನ್ಯಾಯ ಮಾಡುವವರಿಗೆ ಇನ್ನಷ್ಟು ಕುಮ್ಮಕ್ಕು ಸಿಕ್ಕಂತಾಗುತ್ತದೆ. ತನ್ನ ಕೃತ್ಯ ಬಯಲಿಗೆ ಬರುವುದಿಲ್ಲ ಎಂಬ ಖಾತ್ರಿ ದೊರೆತಾಗ ಮತ್ತೆ ಮತ್ತೆ ಅದಕ್ಕೆ ಪ್ರಯತ್ನಿಸಲು ಆತ ಹಿಂಜರಿಯುವುದಿಲ್ಲ. ಶೀಲಭಂಗದ ಈ ವಿಚಾರವನ್ನು ಹಿನ್ನೆಲೆಯಿಂದ ತೆಗೆದುಹಾಕಿದ್ದಾದರೆ ಮಹಿಳೆ ತನಗೆ ಬಲಾತ್ಕಾರವಾದುದನ್ನು ಬಹಿರಂಗದಲ್ಲಿ ಹೇಳಲು, ಅದಕ್ಕಾಗಿ ನ್ಯಾಯಾಲಯದ ಮೊರೆ ಹೋಗಲು ಅಂಜುವುದಿಲ್ಲ. ಈಗ ಈ ಶೀಲಭಂಗದ ಮೌಲ್ಯದಿಂದಾಗಿ ಇದೊಂದು ವಿಷ ವರ್ತುಲವಾಗಿಬಿಟ್ಟಿದೆ. ನ್ಯಾಯಾಲಯದ ಮೊರೆಹೊಕ್ಕರೂ ಅಲ್ಲಿ ನ್ಯಾಯಾಧೀಶರೂ ಕೂಡ ಹಳೆಯ ವಿಚಾರಗಳನ್ನೇ ನೆಚ್ಚಿಕೊಂಡಿರುವುದರಿಂದ ಹಾಗೂ ಸಾಕಷ್ಟು ಸಾಕ್ಷಿಗಳು ಸಿಗುವುದಿಲ್ಲವಾದ್ದರಿಂದ ಅಪರಾಧ ಸಿದ್ಧವಾಗುವುದಿಲ್ಲ; ಗಂಡಸಿಗೆ ಶಿಕ್ಷೆ ಆಗುವುದಿಲ್ಲ; ಮಹಿಳೆಗೆ ನ್ಯಾಯ ಸಿಗುವುದಿಲ್ಲ. ನೂರು ಪ್ರಕರಣಗಳ ಪೈಕಿ ಒಂದರಲ್ಲಿಯೂ ಬಲಾತ್ಕಾರ ಸಿದ್ಧವಾಗುವುದಿಲ್ಲ, ಅಪರಾಧಿ ಗಂಡಸಿಗೆ ಶಿಕ್ಷೆಯಾಗುವುದಿಲ್ಲ ಎಂಬುದು ಇಂದಿನ ವಸ್ತುಸ್ಥಿತಿ. ಹೀಗಾಗಿ ಮಹಿಳೆ ಇನ್ನಷ್ಟು ಅಂಜುತ್ತಾಳೆ. ತನಗಾದ ಅನ್ಯಾಯವನ್ನು ಇನ್ನೂ ಹೆಚ್ಚು ಗೋಪ್ಯವಾಗಿಡಬಯಸುತ್ತಾಳೆ.

ಬಲಾತ್ಕಾರ ಮತ್ತು ಇಚ್ಛಾ ಸಂಭೋಗ ಇವೆರಡರಲ್ಲಿಯೂ ನಡೆಯುವ ಶಾರೀರಿಕ ಕ್ರಿಯೆ ಒಂದೇ. ವ್ಯತ್ಯಾಸ ಇರುವುದು ಕ್ರಿಯೆಯ ಹಿಂದಿನ ಭಾವನೆಯಲ್ಲಿ. ಬಲಾತ್ಕಾರವೂ ಒಂದು ಹಿಂಸಾತ್ಮಕ ಕೃತ್ಯವೇ ಆದುದರಿಂದ ಬೇರೆ ಯಾವುದೇ ಹಿಂಸಾತ್ಮಕ ಕೃತ್ಯಗಳಿಗೆ ಹೇಗೆ ಶಿಕ್ಷೆ ವಿಧಿಸಲಾಗುತ್ತದೆಯೋ ಹಾಗೆಯೇ ಬಲಾತ್ಕಾರ ಎಸಗಿದ ವ್ಯಕ್ತಿಗೂ ಶಿಕ್ಷೆಯಾಗಲೇಬೇಕು.

ಹಿಂದಿನ ಕಾಲದಲ್ಲಿ ಜನರಿಗೆ ಶರೀರದ ವಿವಿಧ ಭಾಗಗಳ ಬಗ್ಗೆ ಎಷ್ಟು ಜ್ಞಾನವಿತ್ತೊ ಏನೊ? ಅಂದಿನ ಜ್ಞಾನದ ಆಧಾರದ ಮೇಲೆ ಅಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ಜನರು ಯೋನಿಶೀಲದ ಮೌಲ್ಯ ರೂಪಿಸಿದರು. ಆದರೆ ಇಂದು ವೈದ್ಯಕೀಯ ವಿಜ್ಞಾನದ ಸಹಾಯದಿಂದ ದೇಹದ ವಿವಿಧ ಭಾಗಗಳ, ಮುಖ್ಯವಾಗಿ ಪ್ರಜನನಾಂಗ ಅವಯವಗಳ ಬಗೆಗಿನ, ಜ್ಞಾನ ಬಹಳಷ್ಟು ಹೆಚ್ಚಿದೆ. ಅದರಂತೆಯೇ ಸಮಾಜದಲ್ಲಿ ಮಹಿಳೆಯ ಸ್ಥಾನಮಾನ ಏನು ಎಂಬ ವಿಚಾರದಲ್ಲಿಯೂ ಈಗ ಸಾಕಷ್ಟು ಬದಲಾವಣೆಯಾಗಿದೆ. ಆದುದರಿಂದ ಬದಲಾಗಿರುವ ಸಾಮಾಜಿಕ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಲಭ್ಯವಿರುವ ಜ್ಞಾನವನ್ನು ಉಪಯೋಗಿಸಿಕೊಂಡು ಹಳೆಯ ತಪ್ಪು ಮೌಲ್ಯವನ್ನು ಕಿತ್ತುಹಾಕಿ ಹೊಸ ಹೆಚ್ಚು ಸರಿಯಾದ ಹೆಚ್ಚು ಮಾನವೀಯವಾದ ಮೌಲ್ಯವನ್ನು ರೂಪಿಸಿಕೊಳ್ಳುವುದು ಇಂದು ಅತ್ಯವಶ್ಯವಾಗಿದೆ. ಅನಿವಾರ್ಯವಾಗಿದೆ. ಈಗ ನಾವು ಯೋನಿಶೀಲದ ಕಲ್ಪನೆಯನ್ನು ತೆಗೆದುಹಾಕಬೇಕು ಮತ್ತು ಎಲ್ಲ ಸದ್ಗುಣಗಳ ಮೊತ್ತವಾದ ವ್ಯಕ್ತಿತ್ವಶೀಲವನ್ನು ಬೆಳೆಸಿಕೊಳ್ಳಬೇಕು. ಹೀಗೆ ಒಂದು ಕಡೆ ಮುಕ್ತರಾಗುತ್ತ ಇನ್ನೊಂದು ಕಡೆ ಗಟ್ಟಿಯಾಗುತ್ತ ಮುನ್ನಡೆಯಬೇಕಾಗಿದೆ ನಮಗಿಂದು.

ಯೋನಿಶೀಲದ ಮೌಲ್ಯ ಇಲ್ಲವಾಗಿ ವ್ಯಕ್ತಿತ್ವಶೀಲಕ್ಕೇ ಮಹತ್ವ ಕೊಟ್ಟ ಮಾತ್ರಕ್ಕೆ ಬಲಾತ್ಕಾರಗಳೇ ನಿಂತುಬಿಡುತ್ತವೆ ಎಂದಲ್ಲ. ಭವಿಷ್ಯದಲ್ಲಿಯೂ ಬಲಾತ್ಕಾರಗಳು ಘಟಿಸುತ್ತ ಇರಬಹುದು. ಆದರೆ ಆಗ ಅದರ ಪಾಪ ಮಹಿಳೆಗೆ ಅಂಟಿಕೊಳ್ಳುವುದಿಲ್ಲ. ಯಾವುದೇ ಕಳಂಕಪ್ರಜ್ಞೆ ಅವಳನ್ನು ಜೀವನವಿಡೀ ಕಾಡುವುದಿಲ್ಲ. ಸಮಾಜ ಅವಳನ್ನು 'ಕೆಟ್ಟವಳು' ಎಂದು ನೋಡುವುದಿಲ್ಲ. ಅವಳು ತನಗಾದ ಅನ್ಯಾಯದ ವಿರುದ್ಧ ಬಹಿರಂಗವಾಗಿ ಹೋರಾಡುತ್ತಾಳೆ ಮತ್ತು ನ್ಯಾಯ ದೊರಕಿಸಿಕೊಳ್ಳುತ್ತಾಳೆ. ಇದು ಬಲಾತ್ಕಾರದ ವಿರುದ್ಧ ನಿಜವಾದ ಗೆಲುವು ಆಗುತ್ತದೆ. ಈ ರೀತಿ ಹಳೆಯ ತಪ್ಪು ಮೌಲ್ಯದ ಸ್ಥಾನದಲ್ಲಿ ಹೊಸ ಮಾನವೀಯವಾದ ಮೌಲ್ಯವನ್ನು ಅಳವಡಿಸಿಕೊಂಡಾಗ ಮಾತ್ರ ನಾವೆಲ್ಲರೂ ಅಂದರೆ ಎಲ್ಲ ಹೆಂಗಸರು ಮತ್ತು ಗಂಡಸರು ನಿಜವಾದ ಅರ್ಥದಲ್ಲಿ ಮನುಷ್ಯರಾಗುತ್ತೇವೆ; ನಮ್ಮೊಳಗಿನ ಪ್ರಕೃತಿದತ್ತ ಅಂತಃಸತ್ವವನ್ನು ಸಂಪೂರ್ಣವಾಗಿ ಅರಳಿಸಿಕೊಳ್ಳಲು ನಮಗೆ ಸಾಧ್ಯವಾಗುತ್ತದೆ.


**ಸಂಕುಲಜೀವ**

ನಗೆಮಲ್ಲಿಗೆ, ನಂ. ೧೯/೨, ಮಹಿಷಿ ರಸ್ತೆ, ಧಾರವಾಡ -



ಇದು ಪಾಕಿಸ್ತಾನಿ ಲೇಖಕಿಯರ ೧೭ ಕತೆಗಳ ಒಂದು ಸಂಕಲನ. ಯಾಸ್ಮೀನ್ ಹಮೀದ್ ಮತ್ತು ಅನಿಫ್ ಅಸ್ಲಾಂ ಫರುಕಿ ಸಂಪಾದಿಸಿರುವ ಕೃತಿ.

ವಿಶ್ವದ ಯಾವ ಭಾಗಕ್ಕೆ ಸೇರಿರಲಿ ಮಹಿಳೆಯರ ಸಂಕಷ್ಟಗಳು, ನೋವು ನಲಿವುಗಳು, ತಾಪಗಳು ಹೋಲಿಕೆಯುಳ್ಳ ಅನುಭವಗಳೇ ಆಗಿವೆ. ಸಾಮಾನ್ಯವಾಗಿ ಮಹಿಳೆಯರ ಮೇಲೆ ಬೀಳುವ ಬಾಹ್ಯ ಒತ್ತಡಗಳು ಅವರ ಜೀವನಕ್ರಮ ಮತ್ತು ನಂಬಿಕೆಗಳು, ರಾಜಕೀಯ ಸಾಮಾಜಿಕ ಸ್ಥಿತಿಗತಿ ಮತ್ತು ಸಾಂಸ್ಕೃತಿಕ ಸನ್ನಿವೇಶವನ್ನು ಅವಲಂಬಿಸಿರುತ್ತವೆ. ಹಾಗಿದ್ದಾಗಲೂ ಕೂಡ ಮಹಿಳೆಯೊಳಗಿನ ಅಂತಃಶಕ್ತಿಯ ಪ್ರತಿಪಾದನೆಯಲ್ಲಿ, ವ್ಯಕ್ತಿ ಅಗತ್ಯಗಳ ಅಭಿವ್ಯಕ್ತಿಯಲ್ಲಿ ಮೇಲ್ನೋಟಕ್ಕೆ ಗುರುತಿಸಬಹುದಾದ ಸಾಮಾನ್ಯ ಅಂಶಗಳು ಕಾಣಸಿಗುತ್ತವೆ.

ಯಾವ ಶತಮಾನದಲ್ಲೇ ಆಗಲಿ ಯುದ್ಧದಾಹಿ ಶಕ್ತಿಗಳು ತರುವ ನೋವು ಮೂಲತಃ ಒಂದೇ ಬಗೆಯದು ಮತ್ತು ಹೆಂಗಸರ ಮೇಲೆ ಉಂಟಾಗುವ ಪರಿಣಾಮಗಳು ಕೂಡ ಒಂದೇ ಬಗೆಯವು. ಸಾವು, ಅಗಲಿಕೆ, ಹಸಿವು, ಆಕ್ರಂದನಗಳು ತರುವ ಖಾಲಿತನ, ಹತಾಶೆ ಒಂದೇ. ಇನ್ನು ಸಾಮ್ರಾಜ್ಯಶಾಹಿ ಶಕ್ತಿಗಳು ತಾಂಡವವಾಡುತ್ತಿರುವ ಎಲ್ಲ ದೇಶಗಳಲ್ಲಿ, ಬಂಡವಾಳವೇ ಆಧಿಪತ್ಯ ನಡೆಸುತ್ತಿರುವ ವಾತಾವರಣದಲ್ಲಿ, ವಿಶೇಷವಾಗಿ ತೃತೀಯ ಜಗತ್ತಿನ ದೇಶಗಳಲ್ಲಿ ಸಮಾನ ಪರಿಣಾಮಗಳು ಹೆಣ್ಣುಗಳನ್ನು ಜರ್ಝರಿತಗೊಳಿಸಿವೆ; ಬಡತನ, ಅಭದ್ರತೆ, ಶೋಷಣೆಗಳು ಢಾಳಾಗಿ ಕಣ್ಣಿಗೆ ರಾಚುತ್ತಿವೆ. ಈ ಎಲ್ಲದರ ಭಾಗವಾಗಿಯೇ ಪುರುಷ ಪ್ರಧಾನ ವ್ಯವಸ್ಥೆಯ ಬಲಿಷ್ಠ ಬಾಹುಗಳು ಎಲ್ಲೆಡೆ ಚಾಚಿಕೊಂಡು ಗಡಸಾಗಿ, ಸೂಕ್ಷ್ಮವಾಗಿ, ಹಲವೊಮ್ಮೆ ಕಂಡೂ ಕಾಣದಂತೆ ತಮ್ಮ ಇರುವನ್ನು ಸಾಬೀತುಪಡಿಸುತ್ತಲೇ ಇರುತ್ತವೆ. ಇನ್ನು ನೈಸರ್ಗಿಕ ವಿಕೋಪ, ಜನಾಂಗ ಹತ್ಯೆ, ಕೋಮುಗಲಭೆ ಇಂತಹ ಅಗಾಧ ಹೊಡೆತಗಳಾಗಲಿ, ಕುಟುಂಬವೂ ಸೇರಿದಂತೆ ರಕ್ಷಿತ ಬದುಕಿನ ನಾಜೂಕಾದ ಒಳಪದರಗಳಲ್ಲಿ ಅನುಭವಕ್ಕೆ ಬರುವ ತೀಕ್ಷ್ಣ ಪೆಟ್ಟುಗಳಾಗಲಿ, ದೈಹಿಕವಾಗಿ ಮಾನಸಿಕವಾಗಿ ಮಹಿಳೆಯರಿಗೇ ವಿಶಿಷ್ಟವಾದ, ನಿರ್ದಿಷ್ಟ ಸಂಕೋಲೆಗಳನ್ನು, ಅಸಮಾನತೆಗಳನ್ನು ಹೇರಿಯೇ ತೀರುತ್ತವೆ.



ಪುಟಗಳು : ೧೬೭ ರೂ. ೧೪೫

ಈ ಸಂಕಲನದ ಪಾಕಿಸ್ತಾನಿ ಕತೆಗಳು ಇದೇ ಮಾತನ್ನು ಮತ್ತೆ ಹೇಳುತ್ತಿವೆ, ಆದರೆ ಹೆಚ್ಚು ಪರಿಣಾಮ ಉಂಟುಮಾಡಲು ಅಶಕ್ತವಾದ ಕ್ಷೀಣ ದನಿಯಲ್ಲಿ. ಈ ಕತೆಗಳಲ್ಲಿ ವಿವಿಧ ಬಗೆಯ ಹೆಣ್ಣುಗಳಿದ್ದಾರೆ, ಮಕ್ಕಳಿದ್ದಾರೆ, ಪುರುಷ ದೌರ್ಜನ್ಯದ ಹಲವು ಮುಖಗಳಿವೆ. ಪ್ರಧಾನವಾಗಿ ಕೌಟುಂಬಿಕ ವಲಯದ ಹೆಣ್ಣುಗಳ ನೋವು, ತಲ್ಲಣಗಳ ತರಹೇವಾರಿ ಚಿತ್ರಣ ಇಲ್ಲಿ ಕಾಣಬಹುದು.

ಹಜ್ರಾ ಮಸ್‌ರೂರ್‌ರ ಮುನ್ನಿ ಬೀಬಿ ಕತೆಯಲ್ಲಿ ಪರಿಶೆಗೆ ಹೋಗುವ ಬಾಲಕಿ ಮುನ್ನಿಯನ್ನು ಆವರಿಸುವುದು ಝಗಝಗಿಸುವ ದೊಂಬರ ನರ್ತಕಿ ಮತ್ತು ಅವಳ ಪ್ರೀತಿ ತುಂಬಿದ ನಡವಳಿಕೆ. ಸಮಾಜದ ದೃಷ್ಟಿಯಲ್ಲಿ ಕೀಳು ಅಭಿರುಚಿಯ ಹೆಣ್ಣಾದ ಅನಾಮಿಕ ನರ್ತಕಿ ಸೂಕ್ಷ್ಮ ಸಂವೇದನೆ ತುಂಬಿದ ಉದಾರ ಹೆಣ್ಣು. ಹರಕು ಬಟ್ಟೆ ಚೂರುಗಳಿಂದ ಮಾಟವಾದ ಸುಂದರ ಗೊಂಬೆ ತಯಾರಿಸುವ, ಕೋಳಿಮರಿ ಗಿಣಿಗಳನ್ನೂ ಸಾಕುತ್ತ ಆರೈಕೆ ಮಾಡುವ, ಮುನ್ನಿಯನ್ನು ಅಕ್ಕರೆಯಿಂದ ಸಿಂಗರಿಸುವ ನರ್ತಕಿ ಪ್ರೀತಿ ವಾತ್ಸಲ್ಯದ ಒಂದು ಮಾದರಿ.

ಮುಸರ್ರತ್ ಕಲಾಂಛ್ವಿ ಬರೆದಿರುವ "ಒಂಟಿತನದ ವಿಷ" ಸಣ್ಣ ಬಾಲಕನೊಬ್ಬನ ಕತೆ. ತನಗೆ ಎಟುಕದ ತಾಯಿಯ ಸಖ್ಯವನ್ನು ಪ್ರತಿನಿಧಿಸುವ ಕಾಂಗರೂ ಚಿತ್ರ ಕತೆಯ ಕೇಂದ್ರ ಪ್ರತಿಮೆ. ತನಗೆ ತೀವ್ರವಾಗಿ ಬೇಕೆನಿಸಿದಾಗ ದೊರೆಯದ ತಾಯಿಯ ಸಖ್ಯ, ತಾಯಿಯ ಹೊಟ್ಟೆ ಚೀಲದಲ್ಲಿ ಕುಳಿತು ತನ್ನನ್ನು ಅಣಕಿಸುತ್ತಿರುವಂತೆ ತೋರುವ ಮರಿ ಕಾಂಗರೂ, ಎರಡೂ ಅವನಲ್ಲಿ ಹುಟ್ಟುಹಾಕುವುದು ಒಂದೇ ಬಗೆಯ ಸಿಟ್ಟನ್ನು, ಒಂದೇ ಬಗೆಯ ಹತಾಶೆಯನ್ನು.

ಜುಗ್ನೂವಿನ ಕತೆ ಅನಾದರದಿಂದ ನರಳುವ ಬಾಲಕನ ಕತೆಯಾದರೆ, ಲೇಖಕಿ ನೀಲೋಫರ್ ಇಕ್ಬಾಲ್‌ಳ 'ಕೋಚ್'ನಲ್ಲಿ ಬರುವ ಗುಡ್ಡೂ ಬಡತನ ಕಾರ್ಪಣ್ಯಗಳು ತನ್ನ ತಂದೆ ತಾಯಿಗಳ ಮೇಲೆ ಚಾಚುವ ಕ್ರೂರ ಬಾಹುಗಳ ಪರೋಕ್ಷ ಪರಿಣಾಮಗಳಿಂದ ತಪ್ಪಿಸಿಕೊಳ್ಳಲು ಹೆಣಗುತ್ತ, ಹೆದರಿ ನಡುಗುತ್ತಿರುವ ಬಾಲಕ.

ಕುದುರೆ ಗಾಡಿಯಿಂದ ಪ್ರಾರಂಭವಾಗುವ ಫ್ಯಾಂಟಸಿ ಅವನನ್ನು ಹೂದೋಟಕ್ಕೆ, ತಣ್ಣನೆಯ ನೀರಿನ ಕೊಳಕ್ಕೆ, ಸುಂದರ ಸುಮಧುರ ಹೆಣ್ಣಿನ ಸನಿಹಕ್ಕೆ, ಅರಮನೆಗೆ, ಬಣ್ಣ ಬಣ್ಣದ ತಂಪು ಪಾನೀಯಗಳ ಲೋಕಕ್ಕೆ, ಅದೆಲ್ಲ ಸಾಲದೆಂಬಂತೆ ತೇಲುವ ಸಿಹಿ ಮೋಡಗಳ ಬಳಿಗೆ ಕೊಂಡೊಯ್ಯುತ್ತದೆ. ಇಂಥ ಪರವಶತೆಯಿಂದ ಅವನು ಸಾಗುವುದು ವಾಸ್ತವವಾಗಿ ಪ್ರಜ್ಞಾಹೀನ ಸ್ಥಿತಿಗೆ. ಸುಡು ಬಿಸಿಲನ್ನು ಶಪಿಸುತ್ತ ಡಾಕ್ಟರನ್ನು ಕರೆತರಲು ಗುಡ್ಡೂನ ತಂದೆ ಸೈಕಲೇರಿ ಆತಂಕದಿಂದ ಹೊರಡುವ ಚಿತ್ರದೊಂದಿಗೆ ಕತೆ ಮುಕ್ತಾಯವಾಗುತ್ತದೆ.

ಪರ್ವೀನ್ ಮಾಲಿಕ್‌ಳ 'ಮಾಯದ ಹೂವು' ಮನಸ್ಸು ಕಲಕುವ ಒಂದು ಶಬ್ದ ಚಿತ್ರ. ಕಡು ಬಡತನದ ರೈತ ಕೂಲಿ ಕುಟುಂಬದಲ್ಲಿ ಜನಿಸಿರುವ ಸಕೀನಾಳ ಶೋಷಣೆಯ ದಾರುಣ ಕತೆಯಿದು. ಸೊಟ್ಟ ಬಾಯಿಯಿಂದ ಜೊಲ್ಲು ಸುರಿಸುತ್ತ ಬೆಳೆಯುವ ಸಕೀನಾ, ಜೊತೆಯ ಮಕ್ಕಳ ಪರಿಹಾಸ್ಯಕ್ಕೆ ಗುರಿಯಾಗುತ್ತಾಳೆ. ರೋಸಿಹೋದ ತಾಯಿಯ ಸಿಟ್ಟು ವಿನಾಕಾರಣ ಇವಳತ್ತ ತಿರುಗಿದಾಗ ಒಳಗೇ ಮರುಗುತ್ತ ಒಂಟಿತನ ಅನುಭವಿಸುತ್ತಾಳೆ ಸಕೀನಾ. ಚುರುಕು ಬುದ್ಧಿಯ ಸಕೀನಾ ಶಾಲೆಯ ದಾದಿ ಬಿತ್ತರಿಸುವ ರಮ್ಯ ಕಥೆಗಳಲ್ಲಿ ಮುಳುಗುತ್ತಾಳೆ. ತನ್ನ ಮುಖವನ್ನು ಸರಿಪಡಿಸುವಂಥ ಮಾಯಾ ಪುಷ್ಪದ ಹಂಬಲದಲ್ಲಿ, ಸ್ಮಶಾನಕ್ಕೆ ಅಕಾಲದಲ್ಲಿ ಅಡಿಯಿಡುತ್ತಾಳೆ. ಅವಳ ದೌರ್ಬಲ್ಯವನ್ನು ಶೋಷಿಸುವ ನಿರ್ದಯ ಪುರುಷ ಲಾಲಸೆಯೊಂದು ಅವಳ ಮೇಲೆ ದೈಹಿಕ ಅಕೃತ್ಯ ಎಸಗುವ ದಾರುಣ ಸನ್ನಿವೇಶದೊಂದಿಗೆ ಕತೆ ಮುಕ್ತಾಯಗೊಳ್ಳುತ್ತದೆ.

ಖದೀಜಾ ಮಸ್ತೂರ್ ಲೇಖನಿಯ 'ಮದುವೆ ಹೆಣ್ಣಿಗೆ ವಿದಾಯ' ಭಿನ್ನವಾದ ಕತೆ. ಸಾಬೂನು ನೊರೆ ಮಿಶ್ರಿತ ನೀರು ಹರಿಯುತ್ತ ನೆನಪುಗಳ ಸರಣಿಯನ್ನೇ ಹುಟ್ಟುಹಾಕುತ್ತದೆ, ಜೊತೆಗೆ ಈ ಕಥನವನ್ನೂ ಮತೀಯ ಗಲಭೆಯ ಕಾರಣದಿಂದಾಗಿ ಉಂಟಾಗಿರುವ ಅತ್ಯಂತ ಭಯಗ್ರಸ್ತ, ಭೀಕರ ಸನ್ನಿವೇಶ, ಬೀಗ ಜಡಿದ ಮನೆಯೊಳಗಡೆಯಿಂದ, ಮಾನವ ಚಟುವಟಿಕೆಯ ಕುರುಹಾಗಿ ಮೋರಿಯಲ್ಲಿ ಹರಿಯುವ ಸಾಬೂನು ನೀರು ಇಡೀ ಘಟನಾವಳಿಗೆ ಕಾರಣವಾಗುತ್ತದೆ. ಯಾರೋ ಅನಾಮಿಕ, ಅಪರಿಚಿತ ಹೆಣ್ಣೊಬ್ಬಳು ಅಸಹಾಯಕಳಾಗಿ, ಬಂಡುಕೋರರ ಸ್ವತ್ತಾಗಿ ಕಳೆದುಹೋಗುವುದು ಈ ದುರಂತ ಕತೆಯ ವಸ್ತು.

ಬಿಸಿಲು, ಸುಡುತ್ತಿರುವ ಡಾಂಬರು ರಸ್ತೆ, ಕುದಿಯುತ್ತಿರುವ ಮನಸ್ಸುಗಳು, ಇವು ನೂರ್-ಉಲ್-ಹುದಾ ಶಾ ರಚಿಸಿರುವ 'ದ ವ್ಯಾಲಿ ಆಫ್ ಡೂಮ್' ಕತೆಯ ವಾತಾವರಣವನ್ನು ನಿರ್ಮಿಸಿವೆ. ಒಂದು ನೆಲೆಗಾಗಿ, ತನ್ನದೇ ಆದ ಪುಟ್ಟ ಮನೆಗಾಗಿ, ಮಗುವಿಗಾಗಿ ಹಂಬಲಿಸುತ್ತ ನಿರೀಕ್ಷೆ ಹೊತ್ತ ಗರ್ಭಿಣಿಯ ಭಾವನಾತ್ಮಕ ಪ್ರಪಂಚ ಮತ್ತು ಅತ್ಯಂತ ನಿರಾಶಾವಾದಿ ನೆಲೆಯಿಂದ ಈ ಎಲ್ಲವನ್ನೂ ಅಲ್ಲಗಳೆಯುತ್ತ, ಸಾವಿಗೆ ಅಭಿಮುಖವಾಗಿ ನಿಂತ ಗಂಡಿನ ಮನಸ್ಸು ಮುಖಾಮುಖಿಯಾಗಿವೆ. ಸಾವಿನ ಯುದ್ಧದ ಭೀಕರ ದರ್ಶನದ ಅನುಭವ ಗಂಡಿನ ಬದಲಾದ ಮನಸ್ಥಿತಿಗೆ ಕಾರಣವೆಂಬುದಕ್ಕೆ ಕತೆಯಲ್ಲಿ ಸಾಕಷ್ಟು ಪುರಾವೆಯಿದೆ. ಈ ಎಲ್ಲದರ ನಡುವೆ ತನ್ನ ಒಡಲಿನಲ್ಲಿ ಜೀವವೊಂದು ಅರಳುತ್ತಿರುವ ಸೂಕ್ಷ್ಮ ಮೃದು ಮನೋಭೂಮಿಕೆಯೇ ಭಿನ್ನ ನೆಲೆಯ, ಮನಃಸ್ಥೈರ್ಯದ, ಸೌಂದರ್ಯಾನುಭವದ ಸೆಲೆಯಾಗಿದೆ.

ಮಮ್ತಾಜ್ ಶಿರೀನ್‌ಳ ಕತೆ 'ಡಿಸೆಂಟ್' ಕೊಂಚ ನಿಯಂತ್ರಣ ತಪ್ಪಿದ್ದರೂ ಭಾವಾತಿರೇಕದ ಗೋಳಾಗಿಬಿಡಬಹುದಾಗಿತ್ತು. ಕೆಳಮಧ್ಯಮ ವರ್ಗದ ಕೌಟುಂಬಿಕ ಪರಿಧಿಯಲ್ಲಿ ಗಂಡುಹೆಣ್ಣಿನ ಬದುಕಿಗೆ ಬೆನ್ನೆಲುಬಾಗಿ ನಿಲ್ಲಬಲ್ಲ ಪರಸ್ಪರ ವಿಶ್ವಾಸ, ಪ್ರೀತಿ ಇಲ್ಲಿನ ವಸ್ತು, ಬಡತನ, ಅಪೌಷ್ಟಿಕತೆ, ಆಸ್ಪತ್ರೆಯ ಕ್ರೂರ ವಾತಾವರಣ, ಸಾವಿನಂಥ ಸಂದರ್ಭದಲ್ಲಿ ಕೂಡ ಎದ್ದು ಕಾಣುವ ಉಳ್ಳವರ - ಇಲ್ಲದವರ ನಡುವಿನ ಭೇದ, ಕುಟುಂಬದ ಕೇಂದ್ರವಾದ ಹೆಣ್ಣಿನ ಸಾವು ತರುವ ಖಾಲಿತನ, ಹತಾಶೆಯ ಚಿತ್ರಣ ಇಲ್ಲಿದೆ. ಕಕ್ಕಲಾರದ ಸಿಟ್ಟು, ಅಸಹಾಯಕತೆ ಮಡುಗಟ್ಟಿ ನಿಂತಿರುವ ಈ ಕತೆ ಯಾವ ಆರ್ಥಿಕ ಸಾಮಾಜಿಕ ಪ್ರಶ್ನೆಗಳನ್ನೂ ಎತ್ತುವುದಿಲ್ಲ, ಗಂಡು ಹೆಣ್ಣಿನ ಸಂಬಂಧದ ಸೂಕ್ಷ್ಮ ಎಳೆಗಳನ್ನು ಹಿಡಿಯುವ ತಂಟೆಗೇ ಹೋಗದೆ, ಒಂದು ಸೆಂಟಿಮೆಂಟಲ್ ಕಪ್ಪು-ಬಿಳುಪು ಚಿತ್ರಣವಾಗಿ ಕೊನೆಗೊಂಡಿದೆ.

"ಗಡೀಪಾರು" ಜಮೀಲಾ ಹಷ್ಮಿ ಸೂಕ್ಷ್ಮ ಎಳೆಗಳಿಂದ ಹೊಸೆದಿರುವ, ಏಕಾಂಗಿತನದ ಗಟ್ಟಿ ಅನುಭವ ತರುವ ಆತ್ಮಗಾಥೆ. ಸೀತೆಯೊಂದಿಗೆ ತನ್ನನ್ನು ಗುರುತಿಸಿಕೊಳ್ಳುವ ಈ ಕತೆಯ ನಾಯಕಿಗೆ, ರಾಮನೊಂದಿಗೆ ಪುನರ್ಮಿಲನವಾಗುತ್ತದೆಂಬ ಭರವಸೆಯಿಲ್ಲ. ತನ್ನನ್ನು ಹೊತ್ತು ತಂದ ರಾವಣನೊಂದಿಗೆ ಮೂಕ ಪಶುವಿನಂತೆ, ಸೋಲೊಪ್ಪದೆ ಬದುಕಬೇಕಾದ ಅನಿವಾರ್ಯ ಸ್ಥಿತಿ ಏರ್ಪಟ್ಟಿದೆ. ಹೃದಯಹೀನ ವ್ಯವಸ್ಥೆಯೊಂದರ

ಸಿ. ಎಸ್. ಸರ್ವಮಂಗಳಾ

ಭಾಗವಾಗಿ 'ಸೊಸೆ' ಅಲ್ಲದಿದ್ದರೂ ಸೊಸೆಯಾಗಿ, ಹೊತ್ತು ತಂದವನ ಮಕ್ಕಳ ತಾಯಿಯಾಗಿ, ಜೀತದ ಪಶುವಾಗಿ, ನಿರಂತರವಾಗಿ ಸವೆದುಹೋಗುತ್ತಿರುವ ಹೆಣ್ಣಿನ ಕತೆಯಿದು. ಸಂಗ್ರಾಂವ್ ಮತ್ತು ಅದರಂಥ ಹಳ್ಳಿಗಳಿಗೆ ಅಪಹರಿಸಿ ತಂದ ಮುಸಲ್ಮಾನ ಹೆಣ್ಣುಗಳ ಕತೆಗಳೆಲ್ಲ ಇಂಥವೇ ಸ್ವರೂಪದವು. ಅವರಿಗಾಗಿ ಯಾವ ಹಾಡು, ಕುಣಿತವಿಲ್ಲ; ಅಲಂಕಾರದ ಗೊಡವೆಯಿಲ್ಲ, ಮದುವಣಗಿತ್ತಿಯ ಸಂಭ್ರಮ, ವಧುವಿನ ತಲ್ಲಣ ಅವರ ಪಾಲಿಗೆ ದೊರೆಯ ಲಿಲ್ಲ. ಪಶುಗಳಂತೆ ಪರೀಕ್ಷೆಗೆ ಒಳಗಾಗಿ, ಜೀತದ ಸಲು ವಾಗಿ ಇಲ್ಲಿನ ಕುಟುಂಬಗಳ ಭಾಗವಾಗಿ, ತೀವ್ರ ರೀತಿಯ ದೈಹಿಕ ಲೈಂಗಿಕ ಶೋಷಣೆಗೆ ಒಳಗಾಗಿ 'ಸೊಸೆ'ಯೆಂಬ ಹಣೆಪಟ್ಟಿ ಕಟ್ಟಿಸಿಕೊಂಡವರು. ಜೀಡದ ಮಕ್ಕಳ ತಾಯಿಯರಾದವರು, ತವರಿಲ್ಲದ ಅನಾಥೆಯರಾದವರು.

ಒಂದಾಣೆಗೆ ಮಗನನ್ನು ಮಾರಿದೆ ಎಂದು ಹೇಳುತ್ತ ತಿರುಗುವ 'ಹುಚ್ಚು ಹೆಂಗಸು' ದಿಲ್‌ಶಾದ್, ಜೈಟೂನ್ ಬಾನೋ ಕತೆಯ ನಾಯಕಿ. ಸಹಜ ಸ್ಥಿತಿ ಎನ್ನುವುದರ ಮಾನದಂಡಗಳು ಯಾವುವು ಮತ್ತು ಅದನ್ನು ನಿರ್ಧರಿಸು ವವರು ಯಾರು ಎಂಬ ಪ್ರಶ್ನೆಗಳನ್ನು ಎತ್ತುವ ಈ ಕತೆ ವೈದೇಹಿಯವರ 'ಅಕ್ಕು' ಕತೆಯನ್ನು ನೆನಪಿಸುವಂಥದ್ದು. ದಿಲ್‌ಶಾದ್ ಹುಟ್ಟು ಹುಚ್ಚಿಯಲ್ಲ. ಅವಳ ಬದುಕಿನ ವಿಕಾರ ಅನುಭವ ತಂದಿರುವ ಮನೋವಿಕಾರ ಅವಳದು. ಮನೆಯೊಳಗಡೆ ಅವಳಿಗೆ ಸ್ಥಾನವಿಲ್ಲ. ಮನೆಯಾಚೆ ಅಭದ್ರತೆ ಮತ್ತು ಶೋಷಣೆ ಅವಳ ಪಾಲಿನ ಖಾತರಿ ಅನುಭವ. ಇಡೀ ಜೀವನದಲ್ಲಿ ಇನ್ನು ಕಾಣದೆಯೇ ಹೋಗುವ ಮಗ ಖಮರ್ ಗುಲ್‌ಗಾಗಿ ಹಂಬಲಿಸು ತ್ತಿರುವ ತಾಯಿಯ ದುಃಖದ ಹತಾಶೆಯ ಲೋಕವದು. ಕರಾಚಿಯಲ್ಲಿ ಅಲೆಯುತ್ತಿರಬಹುದಾದ ದಿಲ್‌ಶಾದ್ ನಂತಹ ಹಸಿದ, ಅರೆಬೆತ್ತಲೆ ಹೆಣ್ಣುಗಳು ಗೇಲಿಗೊಳ ಗಾಗುತ್ತ ತಿರುಗಾಡುತ್ತಿರುವುದನ್ನು ಕುರಿತು ಚಿಂತಿಸುತ್ತ ಜೈಟೂನ್ ಬಾನು ಕತೆಯನ್ನು ಕೊನೆಗೊಳಿಸುತ್ತಾರೆ.

ಅಜ್ರಾ ಅಸ್ಗರ್ ರಚನೆ 'ಟಂಬಲ್‌ವೀಡ್' ಯುದ್ಧ ಕ್ರೌರ್ಯದ ಶಿಶುಗಳ ಐಡೆಂಟಿಟಿಯನ್ನು ಕುರಿತದ್ದು. ವಿಯೆಟ್ನಾಂ ಯುದ್ಧದ ಸಂದರ್ಭದಲ್ಲಿ ಬಲಿಷ್ಠ ಸೈನಿಕರ ದೌರ್ಜನ್ಯದ ಶಿಶುವಾಗಿ ಜನಿಸಿದ ಹೆಣ್ಣುಮಗಳೊಬ್ಬಳು ಅರ್ಜಿಯೊಂದರಲ್ಲಿ ತಂದೆಯ ಹೆಸರನ್ನು ತುಂಬಿಸಲು ಸಾಧ್ಯವಾಗದಿರುವ ವಿಚಿತ್ರ ರೀತಿಯ ಅಸಹಾಯಕ ಪರಿಸ್ಥಿತಿಯ ಚಿತ್ರಣ ಇಲ್ಲಿದೆ. ತಂದೆಯ ಹೆಸರನ್ನು ಕಡ್ಡಾಯವಾಗಿ ತಿಳಿಸಬೇಕಾಗಿರುವ ಅಗತ್ಯ, ಅಂಥ ಅನಿವಾರ್ಯತೆಯನ್ನು ಸೃಷ್ಟಿಸಿರುವ ಸಾಮಾಜಿಕ ಮೌಲ್ಯಗಳು, ಇಂಥ ಪ್ರಶ್ನೆಗಳನ್ನು ಎತ್ತಿಕೊಳ್ಳುವ ಸಾಧ್ಯತೆಯೂ ಈ ಕತೆಯಲ್ಲಿದೆ. ಬೇರಿನಿಂದ ಬೇರ್ಪಟ್ಟು, ಉಂಡೆಯಾಗಿ ಗಾಳಿಯಲ್ಲಿ ಓಲಾಡುವ, ತಿರುಗಾಡುವ ಟಂಬಲ್‌ವೀಡ್‌ನ ಪ್ರತಿಮೆಯನ್ನು ಪರಿಣಾಮಕಾರಿಯಾಗಿ ಬಳಸಿಕೊಂಡಿದೆ ಈ ಕತೆ.

ರಜಿಯಾ ಫಸೀಹ್ ಅಹ್ಮದ್ ಕತೆ 'ಪೇಪರ್ ಮನಿ' ಹಾಸ್ಯಲೇಪವಿರುವ ಒಂದು ಲಹರಿಯ ಮಾದರಿಯಲ್ಲಿದೆ. ಭೂತಚೇಷ್ಟೆಯ ಪ್ರತೀತಿ ಹೊಂದಿದ ಮನೆಯೊಂದನ್ನು ವಾಸಕ್ಕೆ ಪಡೆಯುವ ಲೇಖಕ ಕೆಲದಿನಗಳ ನಂತರ ಕಳೆದುಹೋಗುವ ತನ್ನ ಅಮೂಲ್ಯ ಕೃತಿಯ ಹಸ್ತಪ್ರತಿಯ ಬಗ್ಗೆ ಚಿಂತೆಗೀಡಾಗುತ್ತಾನೆ. ವರ್ಷಾನುಗಟ್ಟಲೆ ಶ್ರಮಿಸಿದ ಈ ಪುಟಗಳಿಗಾಗಿ ಮಂತ್ರವಾದಿಯ ಶೋಧ ಯತ್ನವೂ ಸೇರಿದಂತೆ, ಅವನು ನಡೆಸುವ ಹುಡುಕಾಟ ಫಲಕಾರಿಯಾಗದೆ ಹೋಗುತ್ತದೆ. ತನ್ನ ಮನೆಯ ಕೆಲಸಕ್ಕಿರುವ ಬಡದಂಪತಿಗಳು ಆ ಹಾಳೆಗಳನ್ನು ಹರಿದು ತಿಪ್ಪೆಗೆ ಸೇರಿಸಿರುವುದು ತಿಳಿದಾಗ ಗೊಂದಲ ಪರಿಹಾರವಾಗುತ್ತದೆ. ಅವರ ಬಡತನದ ತೀವ್ರತೆಯನ್ನು ಎತ್ತಿ ಹಿಡಿಯುವ ಈ ಕ್ರಿಯೆ ಲೇಖಕನನ್ನು ತುಮುಲಕ್ಕೆ ಗುರಿ ಮಾಡುತ್ತದೆ. ಪುಸ್ತಕ ರೂಪದಲ್ಲಿ ಹಣ ಮಾಡುವ ಆಕಾಂಕ್ಷೆ ಲೇಖಕನಿಗಿದ್ದರೆ, ಹರಿದ ಚಿಂದಿಯ ರೂಪದಲ್ಲಿ ಆ ಬಡವರಿಗೆ ಬಿಡಿಗಾಸನ್ನು ತರಬಲ್ಲ ಸಾಮರ್ಥ್ಯವಿತ್ತು, ಹರಿದ ಆ ಹಾಳೆಗಳಿಗೆ. ಶತಮಾನದ ಅತ್ಯಂತ ಶ್ರೇಷ್ಠ ಕೃತಿಯಾಗಲಿದ್ದ ಹಸ್ತಪ್ರತಿ ಶಾಶ್ವತವಾಗಿ ಕಳೆದುಹೋದ ಕತೆಯನ್ನು ನಗುತ್ತ ಮುಗಿಸುತ್ತಾರೆ ಕತೆಗಾರ.

ಇವಲ್ಲದೆ ಇನ್ನೂ ಹಲವು ಕತೆಗಳನ್ನು ಒಳಗೊಂಡ ಈ ಸಂಕಲನದ ಬಹುಪಾಲು ಕತೆಗಳು ಕೌಟುಂಬಿಕ ವಲಯದ ಕತೆಗಳಾಗಿದ್ದು, ಒಂದು ಮಿತಿಯಲ್ಲಿ ಯಾವ ಕಾಲ ದೇಶಕ್ಕಾದರೂ ಸೇರಬಹುದಾದ ಕತೆಗಳಾಗಿವೆ. ದೇಶ ವಿಭಜನೆಯ ಸುತ್ತಮುತ್ತ ಹೆಣೆಯಲಾದ ಒಂದೆರಡು ಕತೆಗಳೂ ಇಲ್ಲಿವೆ ಮತ್ತು ಕೆಲವು ಕತೆಗಳಲ್ಲಿ, ಅಲ್ಲಲ್ಲಿ ಪಾಕಿಸ್ತಾನಿ ವಿವರಗಳನ್ನೂ ಗುರುತಿಸಬಹುದು. ಈ ಸಂಕಲನದ ಉತ್ತಮ ಕತೆಗಳಾದ 'ಸತ್ಯದ ಹಲವು ಮುಖಗಳು', 'ಸಾಕ್ಷ್ಯ' ಮತ್ತು 'ಮಾಟಮಂತ್ರ' ಭಿನ್ನವಸ್ತುವನ್ನು ಹೊಂದಿದ್ದು, ಗಾಢ ಅನುಭವ ನೀಡುತ್ತವೆ. ಹಾಗಿದ್ದರೂ ಬಹುಪಾಲು ಕತೆಗಳಲ್ಲಿ ಪಾಕಿಸ್ತಾನಿ ಎಂದು ಗುರುತಿಸಬಹುದಾದ ಯಾವುದೇ ವಿಶಿಷ್ಟ ವಿವರ ಗಳಾಗಲಿ, ಅನುಭವ ವೈಶಿಷ್ಟ್ಯವಾಗಲಿ ಕಾಣಸಿಗುವುದಿಲ್ಲ. ಪಾಕಿಸ್ತಾನಿ ಸಂವೇದನೆಯನ್ನು ಓದುಗರಿಗೆ ದಾಟಿಸು ವಂತಹ ಕತೆಗಳ ಕೊರತೆಯಿದೆ ಈ ಸಂಕಲನದಲ್ಲಿ.

ಪಿ. ಎಸ್. ಸರ್ವಮಂಗಳಾ
ನಂ. ೧೦೨೩, ೭ನೇ ಅಡ್ಡರಸ್ತೆ, ಅಶೋಕನಗರ
ಬನಶಂಕರಿ ಮೊದಲನೇ ಹಂತ, ಬೆಂಗಳೂರು-೫೬೦ ೦೫೦

## ಯುದ್ಧದ ದಾರಿದ್ರ್ಯ

ಮನಸುಗಳ
ನಡುವೆ ಬಂದರೆ
ಯುದ್ಧ,
ಶಾಂತಿ ನೆಮ್ಮದಿ
ಛಿದ್ರ!
ಗಡಿಗಳ
ಮಧ್ಯ ನಡೆದರೆ
ಯುದ್ಧ
ಜಗದ
ಜನರಿಗಂಟಿದಂತೆ
ದಾರಿದ್ರ್ಯ!!

ಎಸ್. ಶಶಿಕಾಂತ್, ಯಡಹಳ್ಳಿ, ಬೆಂಗಳೂರು

# ಮತ-ಧರ್ಮ ಮತ್ತು ಮಾನವ ಧರ್ಮ

ಪ್ರೊ॥ ಜ್ಯೋತಿ ಹೊಸೂರ

ಅಶಾಂತಿ ಯಾರಿಗೂ ಬೇಡ; ಪ್ರತಿಯಾಗಿ ಶಾಂತಿ ಎಲ್ಲರಿಗೂ ಬೇಕು. ಜಗತ್ತಿನಲ್ಲಿ ಆಗೀಗ, ಅಲ್ಲಿ ಇಲ್ಲಿ ಶಾಂತಿ ಕದಡುವುದುಂಟು; ಅಶಾಂತಿ ಹಬ್ಬುವುದುಂಟು. ಹೀಗಾಗಲು ಏನು ಕಾರಣ? ಮೂಲಭೂತ ದೋಷ ಯಾವುದು ? ಈ ಬಗ್ಗೆ ಸರಿಯಾದ ಚಿಂತನೆ ಇಂದಿನ ತುರ್ತು ಅಗತ್ಯವಾಗಿದೆ. ಈ ದಿಶೆಯಲ್ಲಿ ಚಿಂತನೆ ಕೆಲವರಿಂದ ಈಗಾಗಲೇ ಸಾಗಿದೆ. ಅಂಥವರ ಚಿಂತನೆಯ ಫಲಿತಾಂಶಗಳು ಉದ್ಬೋಧಕವಾಗಿವೆ. ಡಾ॥ ಶಂ. ಬಾ. ಜೋಶಿ ಅವರ ''ವೈವಸ್ವತ ಮನು ಪ್ರಣೀತ ಮಾನವ ಧರ್ಮದ ಆಕೃತಿ'' ಮತ್ತು ''ಬುಧನ ಜಾತಕ'' ಹಾಗೂ ''ಬಿತ್ತಿದ್ದನ್ನು ಬೆಳಕೊ'' ಈ ಮೂರು ಗ್ರಂಥಗಳು ಇಂದಿನ ಸಂಧಿಕಾಲದಲ್ಲಿ ದಾರಿದೀಪಗಳಾಗಿವೆ. ಮಾನವನಿಗೆ ತನ್ನದೊಂದು ಅಂತಸ್ಥ-ಸಹ-ಜ ಧರ್ಮವಿದೆ. ಅದುವೇ **ಮಾನವಧರ್ಮ**. ಅದನ್ನು ಜಗತ್ತಿನಲ್ಲಿಯ ಎಲ್ಲ ಮಾನವರು ಅರಿತುಕೊಂಡರೆ ಎಲ್ಲ ಸಮಸ್ಯೆಗಳಿಗೂ ಪರಿಹಾರ ಸಿಗುತ್ತದೆ.

ಜಗತ್ತಿನಲ್ಲಿಯ ಮಾನವರೆಲ್ಲರದು ಒಂದು ವರ್ಗ. ಅಂತೆಯೇ ಅವರೆಲ್ಲರದೂ ಒಂದೇ ಧರ್ಮ – ಅದುವೇ ಮಾನವಧರ್ಮ. ಈ ಮಾನವಧರ್ಮದಿಂದಾಗಿಯೇ ಪ್ರಾಣಧರ್ಮದ (ನರಧರ್ಮದ) ಪ್ರಾಣಿಗಳಿಗಿಂತಲೂ ಮಾನವರು ಮೇಲುಸ್ಥಾನ ಪಡೆದುಕೊಂಡಿದ್ದಾರೆ. ಈ ಮೂಲ ವಿಷಯ ಮಾನವರು ಮರೆತಿದ್ದಾರೆ. ಇದಿಷ್ಟು ಮೇಲೆ ಉಲ್ಲೇಖಿಸಿದ ಗ್ರಂಥಗಳೆಲ್ಲದರಲ್ಲಿ ಒಡಮೂಡಿದ ಒಟ್ಟಾರೆ ಆಶಯ. ವಿವಿಧ ಮತಗಳ ಅತಿ ಅಭಿಮಾನ, ಮಾನವನ ಮೂಲ ಕರ್ತವ್ಯ ಪ್ರಜ್ಞೆಯ ವಿಸ್ಮೃತಿ ಇತ್ಯಾದಿಗಳಿಂದಾಗಿ ಇಂದಿನ ಅಶಾಂತಿ ಉಲ್ಬಣಗೊಳ್ಳುತ್ತಿದೆ. ಹಾಗಾಗಿ ನಾವು ಮೊಟ್ಟಮೊದಲಿಗೆ ಧರ್ಮ, ಮಾನವ ಧರ್ಮ ಇವುಗಳ ಬಗ್ಗೆ ಸರಿಯಾದ ರೀತಿಯಲ್ಲಿ ಅರಿತುಕೊಳ್ಳುವುದು ಮೊದಲ ಆದ್ಯತೆ.

**ಧರ್ಮ ಮತ್ತು ಮತ**

'ಧರ್ಮ' ಪದವು ತನ್ನ ವಿಶಾಲ ವ್ಯಾಪ್ತಿಯನ್ನು ಇತ್ತೀಚೆಗೆ ಕಳೆದುಕೊಂಡು, ಇಂದು ತೀರ ಸಂಕುಚಿತಾರ್ಥದಲ್ಲಿ ಬಳಕೆಗೊಳ್ಳುತ್ತಲಿದೆ. ಈ ಪದದ ಇಂದಿನ ಪ್ರಚಲಿತಾರ್ಥವೆಂದರೆ ಮತ ಎಂಬಂತಾಗಿದೆ. ಇಸ್ಲಾಂ, ಬೌದ್ಧ, ಕ್ರೈಸ್ತ, ಜೈನ, ಶಿಖ್ಖ, ವೀರಶೈವ ಇತ್ಯಾದಿಗಳನ್ನೆಲ್ಲ ನಾವಿಂದು ಧರ್ಮ ಎಂದೇ ಕರೆಯುತ್ತೇವೆ. ಸೂಕ್ಷ್ಮವಾಗಿ ಪರ್ಯಾಲೋಚಿಸಿದರೆ ಇವು **ಧರ್ಮ** ಅನ್ನಿಸಿಕೊಳ್ಳಲು ಅರ್ಹವಲ್ಲ, ಅವು ಕೇವಲ **ಮತಗಳು**.

**ಧರ್ಮ** ಎಂಬ ಪದವು ವಿಶಾಲ ಅರ್ಥವ್ಯಾಪ್ತಿ ಹೊಂದಿದೆ. **ಮತ** ಎಂಬ ಪದಕ್ಕೆ ಸೀಮಿತಾರ್ಥವಿದೆ. ಹೀಗಾಗಿ, **ಧರ್ಮ** ಮತ್ತು **ಮತ** ಸಮಾನಾರ್ಥದ ಪದಗಳಲ್ಲ; **ಧರ್ಮ** ಎಂದರೆ **ಮತ** ಅಲ್ಲ. ಮತ ಪದದ ಖಚಿತವಾದ ಮೂಲಾರ್ಥವೆಂದರೆ ಅಭಿಪ್ರಾಯ. ಜಗತ್ತು ಮತ್ತು ಜೀವಿಗಳ ಹುಟ್ಟು - ಸಾವುಗಳ ಗುಟ್ಟು, ಹುಟ್ಟಿನ ಮೊದಲ ಹಾಗೂ ಸಾವಿನ ನಂತರದ ರಹಸ್ಯ, ಆತ್ಮ - ಪರಮಾತ್ಮಗಳ ಸಂಬಂಧದ ಕಲ್ಪನೆ, ಮಾನವ ಜೀವನದ ಗುರಿ, ಗುರಿ ಸಾಧನೆಯ ವಿಧಿ - ವಿಧಾನಗಳು ಇವೇ ಮುಂತಾದ ಮೂಲಭೂತವಾದ ಮತ್ತು ಕುತೂಹಲಕಾರಿಯಾದ ಕೆಲವು ವಿಷಯಗಳನ್ನು ಕುರಿತು ಅದೆಷ್ಟೋ ವರ್ಷಗಳಿಂದ ಜಗತ್ತಿನ ಅನೇಕ ಚಿಂತಕರು ತಮ್ಮ ತಮ್ಮ ಅಭಿಪ್ರಾಯ ಮಂಡಿಸಿದ್ದಾರೆ. **ಅವೇ ವಿವಿಧ ಮತಗಳು.**

ಮತಗಳಿಗೆ ಒಬ್ಬ ವ್ಯಕ್ತಿ ಸಂಸ್ಥಾಪಕ (ಪ್ರವಾದಿ) ನಾಗಿರುವುದು ಸಾಮಾನ್ಯ. ಒಂದೋ ಎರಡೋ ಆಧಾರ ಗ್ರಂಥಗಳು ಪ್ರತಿಯೊಂದು ಮತಕ್ಕೂ ಇರುವುದುಂಟು. ಸಾಮಾನ್ಯವಾಗಿ ಒಂದು ಮತಕ್ಕೂ ಇನ್ನೊಂದು ಮತಕ್ಕೂ ಸಿದ್ಧಾಂತಗಳು, ಪರಿಕಲ್ಪನೆಗಳು, ನಂಬುಗೆಗಳು ಹಾಗೂ ಆಚರಣೆಯ ವಿಧಿ-ವಿಧಾನಗಳು, ಬದುಕಿನ ರೀತಿ ನೀತಿಗಳು ಮುಂತಾದವುಗಳಿಗೆ ಸಂಬಂಧಿಸಿದಂತೆ ಮೂಲಭೂತ ಭಿನ್ನತೆ ಇರುತ್ತದೆ. ತತ್ಫಲವಾಗಿ ನಮ್ಮದೇ ಸರಿ, ನಮ್ಮದೇ ಮೇಲು; ಇನ್ನುಳಿದವರದು ತಪ್ಪು, ಕೀಳು ಎಂಬಂಥ ಗ್ರಹಿಕೆಗಳು ಬೆಳೆದು - ಬಲಗೊಂಡು ಬಹಳ ಹಿಂದಿನಿಂದ ಇಂದಿನವರೆಗೂ ಸ್ವಮತಗಳ ಮೇಲಿನ ಅಂಧಾಭಿಮಾನದಿಂದಾಗಿ, ಜಗತ್ತಿನ ಎಲ್ಲೆಡೆ ಕಲಹ, ಗಲಭೆ, ಕೊಲೆ, ಯುದ್ಧಗಳು ಅವ್ಯಾಹತವಾಗಿ ಜರುಗಿರುವುದನ್ನು, ಜರುಗುತ್ತಿರುವುದನ್ನು ಇತಿಹಾಸ ಸಾರಿ ಸಾರಿ ಹೇಳುತ್ತದೆ. ಒಂದು ವೇಳೆ ಈ ಮತಗಳಲ್ಲಿ ಮಾನವತೆಯನ್ನೆಲ್ಲ ಒಂದುಗೂಡಿಸುವ ಶಕ್ತಿ- ಸತ್ತ್ವ ಇದ್ದಿದ್ದರೆ, ಅವುಗಳಲ್ಲಿ ಆತ್ಯಂತಿಕ ಸತ್ಯವನ್ನೊಳಗೊಂಡ ತತ್ತ್ವಾದಿಗಳಿದ್ದಿದ್ದರೆ ಈ ಬಗೆಯ ಮೇಲಾಟ, ಈರ್ಷೆ, ಕಚ್ಚಾಟ, ಹೋರಾಟಗಳು ಮತಗಳ ಕಾರಣಗಳಿಂದಾಗಿಯೇ ನಡೆಯಬಾರದಿತ್ತು. ಈ ಹಿನ್ನೆಲೆಯಲ್ಲಿ ಪರ್ಯಾಲೋಚಿಸಿದರೆ ಮತಗಳೆಂದರೆ ಭಿನ್ನತೆಯನ್ನು ಭಿತ್ತಿ ಬೆಳೆಯುವಂಥವು ಎಂದು ಹೇಳಬೇಕಾಗುತ್ತದೆ. ಅವುಗಳಲ್ಲಿಯ ಲೋಪ-ದೋಷಾದಿಗಳನ್ನು ಪ್ರಶ್ನಿಸುವ-ವಿಮರ್ಶಿಸುವ ಶಕ್ತಿಯನ್ನು ಸಾಮಾನ್ಯವಾಗಿ ವ್ಯಕ್ತಿಗಳು ಕಳೆದುಕೊಳ್ಳುತ್ತಾರೆ. ಒಂದು ವೇಳೆ ಯಾವೊಬ್ಬ ವ್ಯಕ್ತಿ ತನ್ನ ಮತದಲ್ಲಿ ಇರುವ ಲೋಪ-ದೋಷಾದಿಗಳನ್ನು ಧೈರ್ಯದಿಂದ ಎತ್ತಿ ತೋರಿಸಿ, ಆ ಮತವನ್ನು ತೊರೆದು ಹೊರ ಬಂದರೆ ಅವನು ಮಹಾವ್ಯಕ್ತಿಯಾಗುತ್ತಾನೆ. ಮಹಮ್ಮದ, ಬುದ್ಧ, ಮಹಾವೀರ, ಕ್ರಿಸ್ತ, ನಾನಕ, ಬಸವಣ್ಣ ಮೊದಲಾದವರೆಲ್ಲ ತಮ್ಮ ಹುಟ್ಟು ಮತಗಳನ್ನು ತೊರೆದು ಹೊಸ ಮತಗಳನ್ನು ಸ್ಥಾಪಿಸಿದವರೇ ಎಂಬುದನ್ನು ಪರಿಶೀಲಿಸಿ ಅರಿತುಕೊಂಡಾಗ ಎಲ್ಲ ಮತಗಳೂ ಅರೆ-ಕೊರೆಗಳನ್ನು, ಲೋಪ-ದೋಷಗಳನ್ನು ಹೊಂದಿರುವಂಥವೇ ಎಂಬುದು ಸಿದ್ಧವಾಗುತ್ತದೆ.

'ಧರ್ಮ' ಎಂಬುದು ಭಾರತೀಯ ಪರಂಪರೆಯಲ್ಲಿ ಅತ್ಯಂತ ಸತ್ವಯುಕ್ತವಾದ ನಿರ್ದೇಶಕ ಪದ. ಅದರ ಇತಿಹಾಸವು ಋಗ್ವೇದ ಕಾಲದಷ್ಟು ಹಿಂದಕ್ಕೆ ಹೋಗುತ್ತದೆ. ಋಗ್ವೇದದಲ್ಲಿ ಈ ಪದವು ಮತ ಎಂಬರ್ಥದಲ್ಲಿ ಬಳಕೆಗೊಂಡಿಲ್ಲ. ಸಂಸ್ಕೃತ ಕೋಶಗಳು **'ಧರ್ಮ'** ಎಂಬುದಕ್ಕೆ ಸ್ಥಿರವಾಗಿರುವಂಥದು ನಿಯಮ, ಗುಣ, ಶೀಲ ಇತ್ಯಾದಿಗಳು ಮೂಲಾರ್ಥಗಳೆಂಬ ಸೂಚನೆ ಕೊಡುತ್ತವೆ. ಇವೆಲ್ಲ ಅರ್ಥಗಳ ಆಶಯ : ನಿಯಮ- ಅಂತಸ್ಥ ನಿಯಮ: ವಿಶ್ವಸ್ಥ ನಿಯಮ ಎಂಬುದಾಗಿ ಶಂ. ಬಾ. ಜೋಶಿ ತಮ್ಮ 'ಮಾನವಧರ್ಮದ ಆಕೃತಿ' (೧೯೭೪) ಎಂಬ ಗ್ರಂಥದಲ್ಲಿ ತಿಳಿಸಿದ್ದಾರೆ. ಅದು ಹೊರಗಿನ ಒತ್ತಾಯದಿಂದ ಅಥವಾ ಹೊರಗಿನ ಕಟ್ಟುಪಾಡುಗಳಿಂದ ರೂಪುಗೊಳ್ಳುವಂಥದಲ್ಲ. ಅದು ಸಹ-ಜ ಆದುದು; ಆಂತರಿಕವಾದುದು.

ಪುರಾತನ ಪರಂಪರೆಯಲ್ಲಿಯ ''ಚೋದನಾ ಲಕ್ಷಣೋ ಧರ್ಮಃ'' (ಪ್ರಚೋದನೆಯೇ ಧರ್ಮದ ಲಕ್ಷಣವಾಗಿದೆ) ಎಂಬ ವ್ಯಾಖ್ಯೆಯು ಧರ್ಮದ ಲಕ್ಷಣವನ್ನು ಸಮರ್ಥಿಸುತ್ತದೆಂಬುದು ಸ್ಪಷ್ಟ. ಪ್ರಚೋದನೆ ಎಂಬುದರಲ್ಲಿ ಆಂತರಿಕ ಪ್ರಚೋದನೆಯೆಂಬ ಅರ್ಥ ಹುದುಗಿದೆ. ಅಂತೆಯೇ ''ಜೀವನ ವಿಶ್ವಸ್ಥ ಅಂತಃ ಪ್ರಚೋದನೆಯ ಆಚರಣವೇ ಧರ್ಮ'' ಎಂಬುದಾಗಿಯೂ ಹೇಳಬಹುದಾಗಿದೆ. ಈ ಧರ್ಮ ಮಾನವ ಕಲ್ಪಿತವಲ್ಲ. ಅದು ಸಹ-ಜ ಆಗಿರುವ ಅಂತಸ್ಥ ನಿಯಮ. ಉದಾ : ಅಗ್ನಿಧರ್ಮ, ಜಲಧರ್ಮ, ದೇಹ ಧರ್ಮ, ಸಮಾಜಧರ್ಮ, ಮನೋಧರ್ಮ... ಮುಂತಾದುವು. ದೇಹಧರ್ಮದಿಂದಾಗಿ ವ್ಯಕ್ತವಾಗುವ ಸ್ವಭಾವವು ವ್ಯಕ್ತಿ ಕಲ್ಪಿತವಲ್ಲ. 'ಪಶುಧರ್ಮ' ಎಂಬಲ್ಲಿ ಪಶುಗಳಿಗೆ ತಮ್ಮ ತಮ್ಮ ಸ್ವಭಾವಧರ್ಮ ಪಾಲಿಸಲು, ಯಾವುದೇ ಬಗೆಯಲ್ಲಿ ಹೊರಗಿನ ಒತ್ತಾಯವು ಇರುವುದಿಲ್ಲ. ಪ್ರಾಣಿಗಳು ತಮ್ಮ ಸಹಜವಾದ ಪ್ರಾಣ ಧರ್ಮವನ್ನು ಹೊರಗಿನ ಒತ್ತಾಯವಿಲ್ಲದೆಯೇ ಅನುಸರಿಸುತ್ತವೆ.

ಇಲ್ಲಿ ಒಂದು ಪ್ರಶ್ನೆ ಏಳುತ್ತದೆ: ಜೀವಿಗಳ - ಅದರಲ್ಲಿಯೂ ಮಾನವನ ಕೆಟ್ಟ ನಡೆ - ನುಡಿಗಳಿಗೆ ಏನು ಕಾರಣ ? ಯಾವ ಪ್ರಚೋದನೆ ಕಾರಣ ? ಅವಕ್ಕೆ ಬಾಹ್ಯ ಪ್ರಚೋದನೆ-ಪ್ರಲೋಭನೆಗಳೇ ಕಾರಣಗಳಾಗಿರುತ್ತವೆಯೇ ಹೊರತು, ಆಂತರಿಕ-ಪ್ರಚೋದನೆ ಎಳ್ಳಷ್ಟೂ ಕಾರಣವಾಗಿರುವುದಿಲ್ಲ. ಮಾನವನ ಆಂತರಿಕ ಪ್ರಚೋದನೆ (ಒಳ ಮನಸ್ಸು - ಅಂತಃಸಾಕ್ಷಿ) ಯಾವಾಗಲೂ ಅವನ ದುಷ್ಟ ನಡೆ-ನುಡಿಗಳನ್ನು ವಿರೋಧಿಸುತ್ತಲೇ ಇರುತ್ತದೆ. ಇದನ್ನು ಮನೋವಿಜ್ಞಾನಿಗಳು ಖಚಿತವಾಗಿ ಪ್ರತಿಪಾದಿಸಿದ್ದಾರೆ.

**'ಧರ್ಮ'** ಪದವು 'ಧೃ' ಎಂಬ ಸಂಸ್ಕೃತ ಧಾತುವಿನಿಂದ ರೂಪುಗೊಂಡಿದೆ. ಧರಿಸುವ, ಎತ್ತಿಹಿಡಿಯುವ ಆಂತರಿಕ ಶಕ್ತಿಯೆಂದು ಧರ್ಮ ಪದಕ್ಕೆ ಅರ್ಥ. ಈ ಅರ್ಥದ ಆಶಯವೂ ವಿಶ್ವಸ್ಥ ನಿಯಮವೆಂಬುದೇ

ಆಗಿರುವುದು ಗಮನಾರ್ಹ.

'ಧರ್ಮ' ಎಂಬುದು ಇಂದು ಹಲವರು ಭಾವಿಸಿರುವಂತೆ, ಪೂಜಾ, ಆಚರಣೆ, ವಿಧಿ - ನಿಷೇಧಗಳ ಕೃತ್ರಿಮ ಕಟ್ಟಳೆಗಳಿಂದ ರೂಪಿಸಿದ ಮತ ಅಲ್ಲವೆಂಬುದು ನಿಚ್ಚಳ.

**ನರಧರ್ಮ**

ಪಶು ಮತ್ತು ನರ ಇವೆರಡೂ ವರ್ಗಗಳಲ್ಲಿಯ ದೇಹ ಧರ್ಮ ಒಂದೇ ಬಗೆಯದಾಗಿದೆಯೆಂಬುದು ಚಿಂತನೀಯವಿದೆ. ಕೇವಲ ದೇಹಧರ್ಮಕ್ಕೆ ಮಾತ್ರ ಬಂಧಿತವಾಗಿ, ಯಾವುದೇ ಬಗೆಯ ವಿವೇಚನೆಯಿಲ್ಲದೆ 'ಆಹಾರ, ನಿದ್ರಾ, ಭಯ, ಮೈಥುನ' ಮುಂತಾದ ಕ್ರಿಯೆಗಳನ್ನು ನಡೆಯಿಸುವುದು ಪಶುಗಳಿಗೆ ಸಹಜಧರ್ಮ. ಆದರೆ ಮಾನವರು ಅನ್ನಿಸಿಕೊಳ್ಳುವವರಲ್ಲಿಯೂ ಈ ಬಗೆಯ ವರ್ತನೆ ಮಾತ್ರ ಕಂಡುಬಂದರೆ, ಇಂಥವರಿಗೆ ಮನುಜರೆನ್ನುವುದು ಹೇಗೆ ? ಇವರೂ ಪಶು ಸಮಾನರೇ ಅಲ್ಲವೆ ? ಪಶುಗಳು ನರ - ನಾಡಿಗಳ ಪ್ರಚೋದನೆಯಿಂದ ಮಾತ್ರ ನಡೆಯಿಸುವ ಕ್ರಿಯೆಗಳನ್ನು ಮಾನವರೆನಿಸಿಕೊಳ್ಳುವವರೂ ನಡೆಯಿಸಿದರೆ, ಅಂಥವರು (ದೈಹಿಕವಾಗಿ) ಮಾನವರಾಗುತ್ತಾರೆಯೇ ಹೊರತು, ನಿಜಾರ್ಥದಲ್ಲಿ ಮಾನವರು ಅನ್ನಿಸಿಕೊಳ್ಳಲು ಅರ್ಹರಾಗುವುದಿಲ್ಲ. ಇಂಥವರು ನರರೇ ಹೊರತು ಮಾನವರೆನಿಸಿಕೊಳ್ಳಲಾರರು.

ತೋರಿಕೆಗೆ ಮಾನವರಂತಿದ್ದು, ನಡತೆಯಲ್ಲಿ ಪಶುಗಳಂತೆ ಇರುವವರನ್ನು **ನರರು** ಎಂದೇ ಸಂಬೋಧಿಸುವುದು ಯೋಗ್ಯ ರೀತಿ. ಇಂಥವರ ನರ ಪ್ರಚೋದಿತ ಧರ್ಮಕ್ಕೆ 'ನರಧರ್ಮ' ಎಂದೇ ಕರೆಯಬೇಕಾಗುತ್ತದೆ. ವಾನರ ಹಂತದಿಂದ ಮಾನವನ ಪ್ರಾದುರ್ಭಾವ ಆಗಿದೆಯೆಂದು .ಡಾರ್ವಿನ್ನನು ಪ್ರತಿಪಾದಿಸಿದ್ದರೂ ಇವೆರಡರ ನಡುವೆ (ಅಂದರೆ ವಾನರ ಮತ್ತು ಮಾನವ ಹಂತದ ನಡುವೆ) ಈ ನರಹಂತವೂ ಇದ್ದಿರಬಹುದೆಂದು ನಾವಿಂದು – ನಮ್ಮ ಪರಂಪರೆಯಲ್ಲಿ ಉಳಿದುಬಂದಿರುವ ನರ ಎಂಬ ಶಬ್ದ ಪ್ರತಿಮೆಯ ಸಹಾಯದಿಂದ ತರ್ಕಿಸಬಹುದಾಗಿದೆ.

**ಮಾನವಧರ್ಮ**

ವಿಶ್ವದಲ್ಲಿಯ ಮಾನವ : ಮನುಜರದೆಲ್ಲ ಒಂದು ವರ್ಗವೆಂಬುದನ್ನು ನಾವು ಮೊದಲು ಅರಿತುಕೊಳ್ಳಬೇಕು. ಮಾನವರೆಲ್ಲ ವಿಶ್ವದ ಯಾವೆಡೆಯಲ್ಲಿದ್ದರೂ ಅವರು ಮಾನವ ವರ್ಗದವರಾಗುತ್ತಾರೆ. ಆದ್ದರಿಂದ, ವಿಶ್ವದಲ್ಲಿಯ ಮನುಜ: ಮಾನವರಿಗೆಲ್ಲ ಒಂದೇ ಧರ್ಮ ಇರಲಿಕ್ಕೇಬೇಕು. ಅದುವೇ ಮಾನವರ ಧರ್ಮ: ಮಾನವಧರ್ಮ.

ವಾನರ ಹಂತದಿಂದ ವಿಕಾಸಗೊಂಡು ಮಾನವನ ಪ್ರಾದುರ್ಭಾವವಾಗಿದೆಯೆಂದು ಪ್ರಸಿದ್ಧ ವಿಜ್ಞಾನಿ ಡಾರ್ವಿನ್ನನು ಪ್ರತಿಪಾದಿಸಿದನು. ಇವನ ಸಮಕಾಲೀನನೇ ಆದ ಇನ್ನೊಬ್ಬ ವಿಜ್ಞಾನಿ ವ್ಯಾಲ್ಲಾಸನು, ಡಾರ್ವಿನ್ನನ ಈ ಸಿದ್ಧಾಂತವನ್ನು ಪ್ರಶ್ನಿಸಿದನು. ದೈಹಿಕ ವಿಕಾಸದ ಮಟ್ಟಿಗೆ ಡಾರ್ವಿನ್ನನ ಸಿದ್ಧಾಂತ ಒಪ್ಪಬಹುದು. ಆದರೆ, ಒಂದೇ ಬಗೆಯ ದೈಹಿಕ ಆಕೃತಿ ಹೊಂದಿದ, ವಾನರ ಹಂತದ ನಂತರದ, ನರ ಮತ್ತು ಮಾನವ (ಮನು-ಜ) ಇಬ್ಬರೂ ಒಂದೇ ಮಟ್ಟದವರೆಂಬುದನ್ನು (ಮಾನಸಿಕ ಶಕ್ತಿ ಅಥವಾ ಪ್ರಜ್ಞೆಯ ಬೆಳವಣಿಗೆಯ ಮಾನದಂಡದಿಂದ) ವ್ಯಾಲ್ಲಾಸ ಒಪ್ಪಿಕೊಳ್ಳಲಿಲ್ಲ. ಏಕೆಂದರೆ, ''...ವಾನರ ಮತ್ತು ಮಾನವ ಇವೆರಡೂ ಪ್ರಾಣಿವರ್ಗಗಳಲ್ಲಿ ಇರುವ ಜೀವನ ರೀತಿಯ ಅಂತರದಿಂದಾಗಿ 'ವಾನರ' ಧರ್ಮದ ತರುವಾಯ ನೇರವಾಗಿ, ಮಾನವಧರ್ಮವೇ ಪ್ರಾದುರ್ಭವಿಸಿತು, ಎಂದು ಬಗೆಯಲು ವ್ಯಾಲ್ಲಾಸನ ವಿವೇಕವು ಅಡ್ಡ ಬಂತು. ನಿಸರ್ಗದಲ್ಲಿ ಒಂದು ಕ್ರಮವಿದೆ, ಪದ್ಧತಿಯಿದೆ. ನಿನ್ನೆ ಆದ ಬಳಿಕ ನಾಳೆಯೇ ಉದಯವಾಗುವುದಿಲ್ಲ, ಇವೆರಡನ್ನೂ ಜೋಡಿಸುವ 'ಇಂದು' ಇರಲೇ ಬೇಕಾಗುತ್ತದೆ. 'ನಿನ್ನೆಯ ವಾನರ' 'ನಾಳಿನ ಮಾನವ' ಇವೆರಡರ ನಡುವೆ ಇಷ್ಟು ಅಂತರವು ಹೇಗೆ? ಮನುಜ: ಮಾನವನು ಮನಃ ಶಕ್ತಿಯಿಂದ ಪ್ರಚೋದಿತನು; ಅರ್ಥ: ಉದ್ದೇಶಪೂರ್ವಕ ಬಾಳುವ ಜೀವನ ರೀತಿ ಮಾನವನದು. ಇವನ ಈ ಜೀವನ ರೀತಿಗೂ ಅರ್ಥ: ಉದ್ದೇಶದ ಅರಿವೂ ಇಲ್ಲದ ವಾನರ ವರ್ಗದ ಚಾಂಚಲ್ಯದ ಜೀವನ ರೀತಿಗೂ ಹಗಲು ಮತ್ತು ಇರುಳುಗಳಲ್ಲಿ ಇರುವಷ್ಟು ಅಂತರವಿದೆ... ಇದನ್ನೇ ಇನ್ನೂ ಒಂದು ಬಗೆಯಲ್ಲಿ ಹೀಗೂ ಹೇಳಬಹುದು; ಮನುಜನಿಗೆ 'ಹಗಲು' ಮತ್ತು 'ರಾತ್ರಿ' ಎಂಬ ಭೇದವು ಮಾನ್ಯವಿದೆ. ಆದರೆ, ವಾ-ನರ ವರ್ಗದಲ್ಲಿ ಹಗಲು ಮತ್ತು ರಾತ್ರಿ ಇವೆರಡೂ ಸುಮಾರಾಗಿ ಸಮಾನವೇ ಆಗಿರುತ್ತವೆ ....'ನರನೇ' ಪ್ರಜ್ಞೋದಯದ ಬಳಿಕ 'ಮನು - ಜ' ವರ್ಗದವನು ಆಗುತ್ತಾನೆ'' (ಡಾ|| ಶಂ. ಬಾ. ಜೋಶಿ).

ಪಶು ಸಮಾನನಾಗಿದ್ದ ನರನಲ್ಲಿ ಪ್ರಜ್ಞೆಯ ಪ್ರಾದುರ್ಭಾವವಾಗಿ ಮನುಜತ್ವ ಪ್ರಾಪ್ತವಾಗಿದೆ. ಈ ಮನುಜನಿಗೆ ಮಾನವನೆಂದೂ ಕರೆಯಲಾಗುತ್ತದೆ.

ಭಾರತೀಯ ಪರಂಪರೆಯಲ್ಲಿ ವೈವಸ್ವತ ಮನು ಇವನು ಪ್ರಕಾಶದ – ಪ್ರಜ್ಞೆಯ ಸಂಕೇತ. ಈ ಪ್ರಜ್ಞಾರೂಪೀ ಮನುವಿನ ಮಕ್ಕಳೇ 'ಮನು - ಜ'ರು. ಇಲ್ಲಿಯ ಮನು-ಜ ಎಂಬೀ ಶಬ್ದಪ್ರತಿಮೆಯಿಂದ, ಪಶುವಿಗೆ ಸಮಾನನಾಗಿದ್ದ ನರನಲ್ಲಿ ಪ್ರಜ್ಞೆಯ ಉದಯವಾಗಿ ಅವನು ಮನು-ಜ, ಆದನೆಂಬುದು ಹೊಳೆಯುತ್ತದೆ. 'ಮಾನವ' ಪದದ ಮೂಲ ಮನ. ಮನವುಳ್ಳವನೇ ಮಾನವ. ಈ ಮನ ಎಂಬಲ್ಲಿ ಪ್ರಜ್ಞಾಶಕ್ತಿಯೊಡನೆ ಬದ್ಧವಾದ ಮನವೆಂದೇ ಅರ್ಥ. ಹೀಗೆ, 'ಮಾನವ' ಎಂಬ ಶಬ್ದ ಪ್ರತಿಮೆಯೂ ಕೂಡ ನರನಲ್ಲಿ ಪ್ರಜ್ಞೋದಯವಾಗಿ ಅವನು ಮಾನವನಾದನೆಂಬುದನ್ನು ದೃಢಪಡಿಸುತ್ತದೆ.

ಪಶುಗಳಂತೆ ವರ್ತಿಸುತ್ತಿದ್ದ ನರನನ್ನು ಮಾನವ: ಮನು-ಜನನ್ನಾಗಿಸಿದ ಈ ಪ್ರಜ್ಞೆಯು ಮಾನವನಿಗೆ ಮಾತ್ರ ಲಭಿಸಿದ ಒಂದು ವಿಶೇಷ ಶಕ್ತಿ. ಮಾನವ ಮನದ ಈ ಶಕ್ತಿಯ ಸ್ವರೂಪವನ್ನು ಅರಿಯಲು ಪ್ರಸಿದ್ಧ ಭಾರತೀಯ ಕಾವ್ಯಶಾಸ್ತ್ರಜ್ಞ ಭಟ್ಟತೌತನ ಶ್ಲೋಕವೊಂದು ನಮಗೆ ನೆರವಾಗುತ್ತದೆ:

> ಸ್ಮೃತಿಃ ವ್ಯತೀತವಿಷಯಾ ಮತಿಃ ಆಗಾಮೀಗೋಚರಾ।
> ಬುದ್ಧಿಃ ತಾತ್ಕಾಲಿಕೀ ಜ್ಞೇಯಾ ಪ್ರಜ್ಞಾ ತ್ರೈಕಾಲಿಕೀ ಮತಾ।
> ಪ್ರಜ್ಞಾ ನವನವೋನ್ಮೇಷಶಾಲಿನೀ ಪ್ರತಿಭಾ ....||

ಪ್ರಜ್ಞೆಯ ಕಾರ್ಯವಿಶೇಷತೆಯ ಸ್ವರೂಪದ ಬಗ್ಗೆ ಇಲ್ಲಿ ಖಚಿತವಾಗಿ ಹೇಳಿದೆ. ಭೂತ, ವರ್ತಮಾನ ಮತ್ತು ಭವಿಷ್ಯ ಎಂಬ ಮೂರು ಕಾಲಗಳಲ್ಲಿ ವ್ಯವಹರಿಸಬಲ್ಲ ಶಕ್ತಿ ಪ್ರಜ್ಞೆಗಿದೆಯೆಂಬುದನ್ನು ಸ್ಪಷ್ಟವಾಗಿ ಸೂಚಿಸಲಾಗಿದೆ. ಕಾಲತ್ರಯಗಳನ್ನು ಗ್ರಹಿಸಬಲ್ಲ ಈ ಪ್ರಜ್ಞಾಶಕ್ತಿಯು ಪ್ರಕಾಶ ರೂಪದಲ್ಲಿಯೇ ಇರಬಲ್ಲುದು. ಏಕೆಂದರೆ, ಪ್ರಕಾಶದಲ್ಲಿಯೇ ನಾವು ಏನೆಲ್ಲವನ್ನು ಕಾಣಬಲ್ಲೆವು; ಮನದ ಪ್ರಕಾಶದಿಂದಾಗಿಯೇ ನಾವು ಏನೆಲ್ಲವನ್ನು ಗ್ರಹಿಸಿ ಆಲೋಚಿಸಬಲ್ಲೆವು.

ಭಾರತೀಯ ಪರಂಪರೆಯಲ್ಲಿಯ ಮೂಲ ಮನು, ಅಂದರೆ ವೈವಸ್ವತ ಮನು ಸಹಿತ ಪ್ರಕಾಶದ ಸಂಕೇತವೇ ಆಗಿದ್ದಾನೆಂಬುದನ್ನು ನಾವೀಗ ನೆನಪಿಸಿಕೊಳ್ಳಬೇಕು. 'ತ್ರೈಕಾಲಿಕೀ' ಶಕ್ತಿಯಾದ ಪ್ರಜ್ಞೆ ಸರಿಯಾಗಿ ವಿಕಾಸಗೊಂಡಿರುವುದು ಮಾನವರಲ್ಲಿ ಮಾತ್ರ.

**ಮಾನವಧರ್ಮದ ಸ್ವರೂಪ**

ಧರ್ಮ ಬೇರೆ, ಮತ ಬೇರೆ ಎಂಬುದನ್ನು ಈ ಮೊದಲು ಆಗಾಗ ಸ್ಪಷ್ಟೀಕರಿಸಲಾಗಿದೆ. ಹಾಗಿದ್ದರೂ ಪ್ರಚಲಿತ ಬಳಕೆಯ - ರೂಢಿಯ ಪ್ರಾಬಲ್ಯದಿಂದ ಧರ್ಮ ಅಂದೊಡನೆ ಮತ ಎಂಬಂಥ ಭಾವನೆ ಮನದಲ್ಲಿ ಮೂಡುವ ಸಂಭವವುಂಟು. ಅಂತೆಯೇ, 'ಮಾನವ ಧರ್ಮ' ಎಂದೊಡನೆ ಇದೂ ಒಂದು ಮತವೆಂದು ತಪ್ಪು ಕಲ್ಪನೆಯಾಗುವ ಸಾಧ್ಯತೆಯುಂಟು. ಆದರೆ ಮಾನವ ಧರ್ಮ ಎಂಬುದು ವಿಶ್ವದೆಲ್ಲೆಡೆಯ ಇಡೀ ಮಾನವರಿಗೆ ಅನ್ವಯವಾಗುವಷ್ಟು ವಿಶಾಲತೆಯನ್ನೊಳಗೊಂಡಿದೆ. ಈ ಮಾನವಧರ್ಮ ಮಾತ್ರ ಜಾಗತಿಕ ವಿಷಮತೆಯನ್ನು ನೀಗಿಸಿ, ವಿಶ್ವಶಾಂತಿಯನ್ನು ನೆಲೆಗೊಳಿಸುವ ಸಾಮರ್ಥ್ಯ ಹೊಂದಿದೆ.

೧. ಮಾನವಧರ್ಮದಂತೆ ಬಾಳುವವರು ಪ್ರಜ್ಞಾಯುಕ್ತ ಮನಸ್ಸಿನ ಪ್ರಚೋದನೆಯಿಂದ ಜೀವನ ಸಾಗಿಸುವಂಥವರಾದ್ದರಿಂದ ಅವರ ನಡೆನುಡಿಯಲ್ಲಿ ಅಂತಃಸಂಗತಿಯಿರುತ್ತದೆಂದು ಹೇಳಬೇಕಾಗುತ್ತದೆ.




ಹಸಿರಿಲ್ಲ ನಿನ್ನ ನಗುವಲ್ಲಿ
ನೀಲವಿಲ್ಲ ನಿನ್ನ ಕಂಗಳಲ್ಲಿ
ನಿನ್ನೊಳಗೆ ತಿಳಿಜಲವಿಲ್ಲ
ಸೂರ್ಯಕಿರಣ ನಿನ್ನಲ್ಲಿ
ಪ್ರತಿಫಲಿಸುವುದಿಲ್ಲ
ಚಂದ್ರ ನಿನ್ನ ತಾಗುವುದಿಲ್ಲ
ನಾ ನಿನ್ನ ಪ್ರೀತಿಸುವುದಿಲ್ಲ

'ಪ್ರೀತಿ' ಮಡಿಕೇರಿ
೪೨೨, ನವಿಲು ರಸ್ತೆ ಎಚ ಬ್ಲಾಕ್, ಕುವೆಂಪುನಗರ
ಮೈಸೂರು - ೫೭೦ ೦೨೩.

ಅಂತಃಸಂಗತಿಯುಕ್ತ ಜೀವನದಲ್ಲಿ (ವಿಸಂಗತಿಯಿಲ್ಲವಾದ್ದರಿಂದ) ಹೊಂದಿಕೆಯಿರುತ್ತದೆ; ಸಹಜೀವನ ಸಾಧ್ಯವಾಗುತ್ತದೆ.

೨. ದೇಶಾತೀತ ಮತ್ತು ಕಾಲಾತೀತ ಶಾಶ್ವತ ಮೌಲ್ಯಗಳನ್ನು ಮತ್ತು ಪರಿಶುದ್ಧ ನೈತಿಕಾಚರಣೆಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಲು ಮಾನವಧರ್ಮ ಪ್ರೇರಣೆ ನೀಡುತ್ತದೆ.

೩. ಸಮಷ್ಟಿ: ಸಮಾಜದ ಬಗೆಗೆ ಮತ್ತು ಅದರ ಕಲ್ಯಾಣದ ಬಗೆಗೆ ಮಾನವಧರ್ಮಕ್ಕೆ ವಿಶೇಷ ಆಸಕ್ತಿ. ಏಕೆಂದರೆ, ಪ್ರಜ್ಞಾ ಪ್ರಾದುರ್ಭಾವಕ್ಕೂ ಸಮಷ್ಟಿ: ಸಮಾಜಕ್ಕೂ ನೇರ ಸಂಬಂಧವಿದೆ. ನಿನ್ನೆ - ಇಂದು - ನಾಳೆಗಳೆಂಬ ಅರಿವಿನ ಈ ಪ್ರಜ್ಞೆ ಮಾನವನಲ್ಲಿ ಪ್ರಾದುರ್ಭವಿಸಿದುದರ ವ್ಯಕ್ತ ರೂಪವೇ ಭಾಷೆ. ಏಕೆಂದರೆ, ಭಾಷೆಯೇ ಮಾನವನಿಗೆ ನಿನ್ನೆ - ಇಂದು - ನಾಳೆಗಳ ಜ್ಞಾನವನ್ನು ಹಿಡಿದಿಡುವ ಮತ್ತು ಒದಗಿಸಿಕೊಡುವ ಏಕಮೇವ ಸಾಧನ. ಆದ್ದರಿಂದ ಈ ಭಾಷೆಯೆಂಬುದು 'ಮಾನವಧರ್ಮ'ದ ಬಹುಮುಖ್ಯ ಆಧಾರ ಮತ್ತು ಬಹುಮುಖ್ಯ ಸಾಧನಸಂಪತ್ತು. ಇನ್ನು ಈ ಭಾಷೆಗೆ ಸಮಾಜ : ಸಮಷ್ಟಿ ಕೂಡ ಅನಿವಾರ್ಯ. ಸಮಾಜವಿಲ್ಲದಿದ್ದರೆ ಭಾಷೆಯ ಅಗತ್ಯವೇ ಇಲ್ಲ. ಆದ್ದರಿಂದಲೇ ಪ್ರಜ್ಞಾ ಪ್ರಚೋದಿತ ಜೀವನ ರೀತಿಯ ಮಾನವಧರ್ಮಕ್ಕೆ ಸಮಾಜ : ಸಮಷ್ಟಿಯೂ ಅಪರಿಹಾರ್ಯ. ಸಮಾಜವನ್ನು ತೊರೆದು ಅಡವಿ ಸೇರಿ 'ಮುನಿ' ಆಗುವುದು ಈ ಧರ್ಮಕ್ಕೆ ಸಂಗತವಲ್ಲ.

೪. ಪ್ರಜ್ಞಾಶಕ್ತಿಯೊಡನೆ ಬದ್ಧವಾಗಿರುವ ಮನಸ್ಸಿನ ಪ್ರಚೋದನೆಗಳಿಂದಾಗಿ ನಡೆಯುವ ಮಾನವ ಕಾರ್ಯಚಟುವಟಿಕೆಗಳು ಸ್ವಾಭಾವಿಕವಾಗಿ ಜೀವನ ವಿಶ್ವಸ್ಥ ನಿಯಮಗಳಿಗೆ ಸಂಗತವಾಗಿರುತ್ತವೆ. ಅನವಶ್ಯಕ ನಿಯಂತ್ರಣ ಮತ್ತು ಸ್ವೇಚ್ಛೆ ಇವೆರಡೂ ಮಾನವಧರ್ಮದಿಂದ ದೂರ.

**ಮಾನವಧರ್ಮದ ಅಗತ್ಯ**

ಇಂದು, ಜಾಗತಿಕ ಸ್ತರದಲ್ಲಿಯೇ ಆಗಲಿ, ಭಾರತದಲ್ಲಿಯೇ ಆಗಲಿ ಮತ-ಮತಗಳ ಪೈಪೋಟಿ ಬೇಕಾಗಿಲ್ಲ. ಇಡೀ ವಿಶ್ವದಲ್ಲಿಯ ಎಲ್ಲರನ್ನೂ ಅಪ್ಪಿಕೊಂಡು, ಅವರಲ್ಲಿ ಮಾನವತೆಯನ್ನು ಜಾಗ್ರತಗೊಳಿಸಿ ಅವರೆಲ್ಲರನ್ನೂ ಒಟ್ಟಾಗಿ ಬೆಸೆಯುವ 'ಮಾನವಧರ್ಮ' ಮಾತ್ರ ಬೇಕು.

ಪ್ರಜ್ಞಾಪ್ರಕಾಶದ ಸಂಕೇತವೆಂದು ವೈವಸ್ವತ ಮನುವನ್ನು ಮಾನವಧರ್ಮದವರು ಆರಾಧಿಸುತ್ತಿದ್ದರು. ವಿಶ್ವದ ಸಕಲ ಚಟುವಟಿಕೆಗಳ ಮೂಲಾಧಾರನೂ ಪ್ರಕಾಶದ ಮೂಲಭೂತ ಆಕರನೂ ಆದ ಸೂರ್ಯನು ಅಂದು ಆರಾಧ್ಯನಾಗಿದ್ದನು. ಅಂದರೆ, ಅಂದಿನ ಮಾನವಧರ್ಮದವರು ಬೆಳಕಿನ: ಪ್ರಜ್ಞೆಯ ಆರಾಧಕರಾಗಿದ್ದರು. ಆ ಮಾನವಧರ್ಮ ಇಂದು ಕ್ಷೀಣವಾಗಿದೆ. ಅದರ ಸ್ಥಳದಲ್ಲಿ ಲೈಂಗಿಕ ಪಾತಳಿಯ, ಸಮಾಜ: ಸಮಷ್ಟಿಯಿಂದ ವಿಮುಖರನ್ನಾಗಿಸುವ, ಮತಗಳೇ ಭಾರತದಲ್ಲಿ ಮತ್ತು ಜಗತ್ತಿನ ಎಲ್ಲೆಡೆಗಳಲ್ಲಿ ಪ್ರಾಬಲ್ಯ ಹೊಂದಿ ಅಟ್ಟಹಾಸ ಮಾಡುತ್ತಲಿವೆ. ಈ ಮತ-ಮತಗಳ ಅಟ್ಟಹಾಸ ನಿಲ್ಲದ ಹೊರತು ಮನುಕುಲಕ್ಕೆ ಶಾಂತಿ - ಸಮಾಧಾನಗಳಿಲ್ಲ. ಆದ್ದರಿಂದ, ಇಂದಿನ ಮತ - ಮತಗಳ ಮೇಲಿನ ವ್ಯಾಮೋಹ ತೊರೆದು ಪ್ರಜ್ಞಾವಂತ-ಮಾನವರಾಗುವ ಮೂಲಕ ಎಲ್ಲರೂ 'ಮಾನವಧರ್ಮ' ಒಪ್ಪಿಕೊಳ್ಳುವುದು, ಮತ್ತು ಅಪ್ಪಿಕೊಳ್ಳುವುದು ತುರ್ತಿನ ಅಗತ್ಯವಾಗಿದೆ.

**ಒಂದು ಎಚ್ಚರಿಕೆ**

**ಮಾನವ ಧರ್ಮ** ಎಂಬುದು ಇತ್ತೀಚೆಗೆ ವಿಶೇಷ ಆಕರ್ಷಣೆಯ ಪದವಾಗಿದೆ. ಈ ಪದದ ಚಲಾವಣೆ ಈಗ ಹೆಚ್ಚಾಗಿದೆ. ''ಮಾನವಧರ್ಮಕ್ಕೆ ಜಯವಾಗಲಿ!'' ಎಂಬಂಥ ಉದ್ಘೋಷಣೆಗಳು ಪ್ರಾಸಂಗಿಕವಾಗಿ ಹೆಚ್ಚಾಗಿ ಕೇಳಿಬರುತ್ತಲಿವೆ. ಆದರೆ, ಇಂಥವುಗಳ ಬಗ್ಗೆ ಎಚ್ಚರಿಕೆ ವಹಿಸುವುದು ಅತ್ಯಗತ್ಯವೆಂದು ಅನಿವಾರ್ಯವಾಗಿ ಹೇಳಲೇಬೇಕಾಗುತ್ತದೆ. ವಿಶಿಷ್ಟವಾದ ಬೇರೆ ಬೇರೆ ಮತಗಳ ಸ್ವಾಮಿಗಳು, ಮಹಾಸ್ವಾಮಿಗಳು, ಜಗದ್ಗುರುಗಳೂ, ವಿದ್ವಾಂಸರು ಸಭೆ - ಸಮಾರಂಭಗಳಲ್ಲಿ, ಉತ್ಸವಗಳಲ್ಲಿ, ಪ್ರವಚನ ಕಾರ್ಯಕ್ರಮಗಳಲ್ಲಿ ತಮ್ಮದು ಮಾನವಧರ್ಮವೆಂದೂ, ತಮ್ಮದೇ ಮಾನವಧರ್ಮವೆಂದೂ ಪ್ರತಿಪಾದನೆಯನ್ನು ಆವೇಶದಿಂದ ಮಾಡುವ ಪ್ರವೃತ್ತಿ ಇತ್ತೀಚೆಗೆ ಹೆಚ್ಚಾಗಿದೆ. ಇದೊಂದು ಬಗೆಯ ಪರವಂಚನೆ ಮತ್ತು ಆತ್ಮವಂಚನೆಯ ಹೊಸರೀತಿಯೆಂದು ಹೇಳದೆ ವಿಧಿಯಿಲ್ಲ. ಎಲ್ಲ ಮತಗಳೂ ಪ್ರತ್ಯೇಕ ಅಸ್ತಿತ್ವ ಪಡೆದು ತಮ್ಮದೇ ಆದ ಕಟ್ಟುಪಾಡು, ವಿಧಿ-ನಿಷೇಧ ಮತ್ತು ಆಚರಣಾದಿ ಕ್ರಮ ಇತ್ಯಾದಿಗಳನ್ನು ರೂಪಿಸಿಕೊಂಡಿರುತ್ತವೆ. ವಿಶಿಷ್ಟವಾಗಿರುವ ಲಾಂಛನಗಳನ್ನು ಪೂಜಾ ವಿಧಾನಾದಿಗಳನ್ನು ಹೊಂದಿರುತ್ತವೆ. ಈ ಪ್ರಕಾರದಲ್ಲಿ ವಿಶಿಷ್ಟತೆಯನ್ನು ಮತ್ತು ಪ್ರತ್ಯೇಕತೆಯನ್ನು ಹೊಂದಿರುವಂಥ ಯಾವುದೊಂದು ಮತವೂ 'ಮಾನವಧರ್ಮ' ಆಗುವುದು ಹೇಗೆ ಸಾಧ್ಯವಾಗುತ್ತದೆ ?

ವಿಶಿಷ್ಟ ಮತಗಳಲ್ಲಿಯ ಕೆಲವು ಉದಾತ್ತ ವಿಚಾರಗಳು, ಮಾನವ ಕಲ್ಯಾಣ ಸಾಧನೆಗೆ ಪೋಷಕವಾಗುವ ಕೆಲವು ಕಾರ್ಯಕ್ರಮಗಳು ಇತ್ಯಾದಿಗಳಲ್ಲಿ ಮಾನವಧರ್ಮದ ಒಂದೆರಡು ಅಂಶಗಳು ಇದ್ದಿರಬಹುದು. ಅಷ್ಟು ಮಟ್ಟಿಗೆ ಆ ವಿಶಿಷ್ಟ ಮತವು ಮಾನವಧರ್ಮದ ವಿಶಾಲತೆಯ ಅಂಶಗಳನ್ನು ತನ್ನಲ್ಲಿ ಅಳವಡಿಸಿಕೊಂಡಿದೆಯೆಂದು ಒಪ್ಪಿಕೊಳ್ಳಬಹುದು. ಆದರೆ ಅಂಥ ಆ ಮತವು ಎಂದೆಂದಿಗೂ ಯಾವುದೇ ಪರಿಸ್ಥಿತಿಯಲ್ಲೂ ಅಚ್ಚ ಮಾನವ ಧರ್ಮವಾಗಲಾರದು. ಏಕೆಂದರೆ, ಅಚ್ಚ ಮಾನವ ಧರ್ಮವು ಎಂದೆಂದಿಗೂ ಯಾವುದೇ ಬಗೆಯ ಪ್ರತ್ಯೇಕತೆಯನ್ನು ಯಾವುದೇ ರೂಪದಲ್ಲಿ ಪ್ರತಿಪಾದಿಸುವುದಿಲ್ಲವೆಂಬುದನ್ನು ಮರೆಯಬಾರದು. ಮಾನವ ಧರ್ಮವೇ ಬೇರೆ; ವಿಶಿಷ್ಟಮತಗಳೇ ಬೇರೆ ಎನ್ನುವ ಎಚ್ಚರಿಕೆ. ಖಂಡಿತವಾಗಿಯೂ ಎಲ್ಲರಲ್ಲಿಯೂ ಬೇಕು.

**ಪ್ರೊ॥ ಜ್ಯೋತಿ ಹೊಸೂರ**
ನಿವೃತ್ತ ಪ್ರಾಚಾರ್ಯರು, ಸಂಯೋಜಕರು, ಕನಕಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ರಾಯಭಾಗ - ೫೯೧ ೩೧೭

## ವಿಶ್ವ ಪರಿಸರ ದಿನ - ಜೂನ್ ೫

ಸ್ವೀಡನ್ನಿನ ಸ್ಟಾಕ್ ಹೋಂನಲ್ಲಿ ೧೯೭೨ರ ಜೂನ್ ೫ ರಂದು ಮಾನವ ಪರಿಸರವನ್ನು ಕುರಿತ ಶೃಂಗಸಭೆಯಲ್ಲಿ ಅನೇಕ ರಾಷ್ಟ್ರಗಳು ಸೇರಿ ಮನುಕುಲದ ಅಭಿವೃದ್ಧಿಯ ಜೊತೆ ಜೊತೆಗೆ ನಡೆಯುತ್ತಿರುವ ಪರಿಸರನಾಶದ ಬಗ್ಗೆ ಕಾಳಜಿ ತೋರಿದವು. ಪರಿಸರ ಸಂರಕ್ಷಣೆಯ ಮಹತ್ವವನ್ನು ಜಗತ್ತಿನ ಮೂಲೆ ಮೂಲೆಗೆ ಹರಡುವಲ್ಲಿ ಈ ಸಭೆ ಮುಖ್ಯ ಕಾರಣವಾಯಿತು. ಈ ಸಭೆಯ ಸ್ಮರಣಾರ್ಥವಾಗಿ ಪ್ರತಿ ವರ್ಷ ಜೂನ್ ೫ರಂದು ವಿಶ್ವ ಪರಿಸರ ದಿನವನ್ನು ಆಚರಿಸಲಾಗುತ್ತಿದೆ.

ನಮ್ಮ ಪರಿಸರದ ಕೇಂದ್ರ ಹುಲಿ. ಇದನ್ನು ಸಂರಕ್ಷಿಸಿದರೆ ಇದರ ಆಹಾರವಾದ ಸಸ್ಯಹಾರಿ ಪ್ರಾಣಿಗಳು ಇದರ ಆಹಾರ - ಆವಾಸ ಸ್ಥಾನವಾದ ಸಸ್ಯ ಹಾಗೂ ಕಾಡುಗಳು ರಕ್ಷಿತವಲಯದಲ್ಲಿ ಬರುತ್ತವೆ. ಯಾವುದೇ ರಕ್ಷಿತಾರಣ್ಯದಲ್ಲಿ ಪಕ್ಷಿ, ಪ್ರಾಣಿ, ಕೀಟಗಳು ತಮ್ಮ ಸಹಜ ಜೀವನ ನಡೆಸುತ್ತವೆ. ದಟ್ಟವಾದ ಕಾಡುಗಳು ಮಳೆಗೆ ಮೂಲ. ಹೀಗಾಗಿ ಹುಲಿ ಸಂರಕ್ಷಣೆ ಅತ್ಯಂತ ಮಹತ್ವದ್ದು. ಈಗ ಈ ಹುಲಿಯ ನೆಲೆಯೇ ಅತಂತ್ರವಾದರೆ ? ದುಷ್ಪರಿಣಾಮ ನಮ್ಮ ಜಲಸಂಪನ್ಮೂಲಗಳ ಮೇಲಲ್ಲದೆ ತನ್ಮೂಲಕ ನಮ್ಮ ನಾಗರಿಕ ಜೀವನದ ಮೇಲೂ ಆಘಾತವನ್ನುಂಟು ಮಾಡುತ್ತದೆ.

೧೯೦೦ರಲ್ಲಿ ಅರವತ್ತೈದು ಸಾವಿರದ ಚದರ ಮೈಲಿಗಳಿದ್ದ ಪಶ್ಚಿಮ ಘಟ್ಟಗಳು ಇಂದು ಕೇವಲ ಐದು ಸಾವಿರ ಚ. ಮೈಲಿಗಳಿಗೆ ಇಳಿದಿದೆ. ನಾಗರಹೊಳೆಯಂತಹ ಅಭಯಾರಣ್ಯದಲ್ಲಿ ಕಳ್ಳಭಟ್ಟಿ, ಮರಗಳ್ಳತನದಿಂದ ಹುಲಿ ಜೀವನದ ಮೇಲೆ ಗಂಭೀರ ಪರಿಣಾಮವಾಗಿದೆ.

ಒಟ್ಟಾರೆ ವನ್ಯಜೀವಿಗಳ ಸ್ಥಿತಿಗತಿಯು ದಿನೇದಿನೇ ಹದಗೆಡುತ್ತಿದೆ. ನದಿ ನೀರಿಗಾಗಿ ಭಾರತದಾದ್ಯಂತ ನದಿಗಳ ಜೋಡಣೆ ಎಂಬ ಅವೈಜ್ಞಾನಿಕ ಯೋಜನೆಯ ಕುರಿತ ಮಾತುಗಳು ಇದೀಗ ಕೇಳಿಬರುತ್ತಿದೆ. ಈ ಯೋಜನೆ ನಮ್ಮ ಪರಿಸರದ ಮೇಲಿನ ತೂಗುಕತ್ತಿಯಾಗಲಿದೆ. ಅರಣ್ಯ ಒತ್ತುವರಿ, ಗಣಿಗಾರಿಕೆ, ಕಳ್ಳಬೇಟೆಗಳು ಅವ್ಯಾಹತವಾಗಿ ಸಾಗುತ್ತಿರುವ ಈ ದಿನಗಳಲ್ಲಿ ಪರಿಸರಪರ ಚಳುವಳಿಗಳು ಜಾತೀಯತೆ, ಕೋಮುವಾದ, ಜಾಗತೀಕರಣದ ವಿರುದ್ಧ ನಡೆಯಬೇಕಾಗಿರುವ, ನಡೆಯುತ್ತಿರುವ ಹೋರಾಟಕ್ಕಿಂತ ಇನ್ನೂ ಉಗ್ರವಾಗಿ ಕ್ರಿಯಾತ್ಮಕವಾಗಿ ಆಗಬೇಕಿದೆ.

*ಕೆ. ಎಸ್. ನವೀನ್, ೨೧೩, ಓಬಳಪ್ಪ ಅಡ್ಡರಸ್ತೆ, ಚಿಕ್ಕಮಾವಳ್ಳಿ, ಬೆಂಗಳೂರು - ೪*

# ಕಲೆಗೂ, ಸಮಾಜಕ್ಕೂ ಸೇತುವೆಯಾಗಿ ನಿಂತ ಪ್ರೊ॥ ಎಂ. ಎಸ್. ನಂಜುಂಡರಾವ್

*ಕರ್ನಾಟಕ ಚಿತ್ರಕಲಾ ಪರಿಷತ್ತಿನ ಸ್ಥಾಪಕ ಕಾರ್ಯದರ್ಶಿಗಳಾದ ಪ್ರೊ॥ ಎಂ. ಎಸ್. ನಂಜುಂಡರಾವ್ (೭೨) ಮೇ ೨, ೨೦೦೩ ರಂದು ನಿಧನರಾದರು. ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕಿನ ಸುದ್ದೇಗುಂಟೆ ಗ್ರಾಮದಲ್ಲಿ ೧೯೩೨ರಲ್ಲಿ ಜನಿಸಿದ್ದರು. ಮೈಸೂರಿನ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಯಲ್ಲಿ ಕಲಾಶಿಕ್ಷಣ ಪಡೆದಿದ್ದರು. ವಿದ್ಯಾರ್ಥಿದೆಸೆಯಲ್ಲಿಯೇ ಜವಾಬ್ದಾರಿ ಸರ್ಕಾರದ ಸ್ಥಾಪನಾ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು. ಖಾದಿ ಗ್ರಾಮೋದ್ಯೋಗ ಮಂಡಲಿಯಲ್ಲಿ ವಿನ್ಯಾಸಕಾರ-ಕಲಾವಿದರಾಗಿ ವೃತ್ತಿಜೀವನ ಪ್ರಾರಂಭಿಸಿದರು. ೧೯೬೦ರಲ್ಲಿ ಚಿತ್ರಕಲಾ ಪರಿಷತ್ತನ್ನು ಮಲ್ಲೇಶ್ವರ ಗಾಂಧೀ ಸಾಹಿತ್ಯ ಸಂಘದ ಮಹಡಿಯ ಮೇಲೆ ಪ್ರಾರಂಭಿಸಿದರು. ಕಲಾವಿದರನ್ನು ಸಂಘಟಿಸಿ, ಸರ್ಕಾರದ ನೆರವಿನಿಂದ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಕಲಾ ಸಂಕೀರ್ಣವನ್ನು ಕುಮಾರಕೃಪಾ ರಸ್ತೆಯಲ್ಲಿ ಸ್ಥಾಪಿಸಿದರು. ಮೈಸೂರು ಸಾಂಪ್ರದಾಯಿಕ ಚಿತ್ರಕಲೆ ಹಾಗೂ ತೊಗಲು ಬೊಂಬೆ ಪ್ರಕಾರಗಳನ್ನು ಪುನರುಜ್ಜೀವನಗೊಳಿಸಿದರು. ಪ್ರೊ॥ ರಾವ್ ಅವರಿಗೆ ದೇಶ ವಿದೇಶಗಳು ಪ್ರಶಸ್ತಿ, ಪುರಸ್ಕಾರ ನೀಡಿ ಗೌರವಿಸಿದ್ದುವು.*

**ಕ**ರ್ನಾಟಕ ಕಂಡ ಕೆಲವು ಅಪರೂಪದ ವ್ಯಕ್ತಿಗಳಲ್ಲಿ, ಮೇಸ್ಟ್ರು ಅಂತ ಅನ್ವರ್ಥ ನಾಮ ಹೊತ್ತ ನಂಜುಂಡ ರಾಯರು ಒಬ್ಬರು ಅನ್ನುವುದು ಎಲ್ಲರೂ ಹೇಳುವ ಮಾತು. ನಾನು ಕಂಡ ಈ ಮೇಸ್ಟ್ರ ಮಹತ್ವಾಕಾಂಕ್ಷಿ ವ್ಯಕ್ತಿತ್ವ ಒಂದು ಕಲಾಸಂಸ್ಥೆಯನ್ನು ಸೃಷ್ಟಿಸುವುದಕ್ಕೆ ಮಾತ್ರ ಮಿತಿ ಯಾಗಿರಲಿಲ್ಲ, ಕಲೆ ಸಾಮಾನ್ಯ ಜನರಿಗೂ ತಲುಪ ಬೇಕೆಂಬ ದೃಷ್ಟಿಯಿಂದ ತಮ್ಮ ಕಲಾ ಸಂಸ್ಥೆಯನ್ನು ಜನರಿಗೂ ಕಲೆಗೂ ಒಂದು ಸೇತುವೆಯಾಗುವಂತೆ ಮಾಡುವಲ್ಲಿ ಸಾಕಷ್ಟು ಶ್ರಮಿಸಿದರು. ಹೀಗಾಗಿ ಕರ್ನಾಟಕ ಚಿತ್ರಕಲಾ ಪರಿಷತ್ತು ಇತ್ತೀಚಿನ ದಶಕಗಳಲ್ಲಿ, ವಿಭಿನ್ನ ಆಯಾಮ ಗಳನ್ನು ಪಡೆದು ಅಂತರರಾಷ್ಟ್ರೀಯ ಮಟ್ಟಕ್ಕೂ ಬೆಳೆದು ನಿಂತಿದೆ. ನಂಜುಂಡರಾವ್ ಮೇಸ್ಟ್ರ ಮುಂದೆ ಎರಡು ಆಯ್ಕೆಗಳಿದ್ದವು. ಒಂದು, ಒಬ್ಬ ಕಲಾವಿದನಾಗಿ ಬೆಳೆದು ಖ್ಯಾತಿಯನ್ನು ಪಡೆಯುವುದು. ಎರಡು: ಒಬ್ಬ ಕಲಾ ಸಂಘಟಕನಾಗಿ ಒಂದು ಸಂಸ್ಥೆಯನ್ನು ಕಟ್ಟುವುದು. ಮೊದಲನೆಯ ಆಯ್ಕೆಯಲ್ಲಿ ಹೆಚ್ಚು ಸ್ವಾರ್ಥವಿತ್ತು. ಎರಡನೆಯ ಆಯ್ಕೆಯಲ್ಲಿ ಹೆಚ್ಚು ಕಷ್ಟಗಳೂ, ಮತ್ತು ಜವಾಬ್ದಾರಿಯೂ ಇತ್ತು. ಆದರೆ ಅವರು ಎರಡನೆಯ ಆಯ್ಕೆಯನ್ನೇ ಬಯಸಿದರು. ಇದಕ್ಕೆ ಕಾರಣ, ಮೂರು ದಶಕಗಳ ಹಿಂದೆ, ಬೆಂಗಳೂರಿನಲ್ಲಿ ಕಲಾಶಾಲೆಯಿರಲಿಲ್ಲ, ಸಾಹಿತ್ಯ, ಸಂಗೀತದಂತಹ ಇತರ ಲಲಿತಕಲೆಗಳಿಗೆ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಅವಕಾಶವಿದ್ದರೂ, ಚಿತ್ರಕಲೆಗೆ ಯಾವುದೇ ರೀತಿಯ ಮಾನ್ಯತೆಯಿರಲಿಲ್ಲ. ಇಂತಹ ಸಂದರ್ಭದಲ್ಲಿ ಆಸಕ್ತಿಯಿರುವ ಕೆಲವು ವಿದ್ಯಾರ್ಥಿ



ಗಳಿಂದ ಚಿಕ್ಕ ಕಲಾಶಾಲೆಯನ್ನು ಪ್ರಾರಂಭಿಸುವಾಗ ಮುಂದೆ ಇದು ದೇಶದ ಒಂದು ದೊಡ್ಡ ಕಲಾಸಂಸ್ಥೆಯಾಗ ಬಹುದೆಂಬ ಕಲ್ಪನೆಯು ನಂಜುಂಡರಾಯರಿಗೆ ಇಲ್ಲದೇ ಇದ್ದರೂ ಮಹತ್ವಕಾಂಕ್ಷೆಯಂತೂ ಇತ್ತು. ಹೀಗಾಗಿ ಅವರು ತಮ್ಮ ಚಟುವಟಿಕೆಗಳನ್ನು ಹಲವು ಆಯಾಮಗಳಲ್ಲಿ ಬೆಳೆಸಿ

**ರಮೇಶಚಂದ್ರ**

ಕೊಂಡೇಹೋದರು. ಈ ಬೆಳವಣಿಗೆಯು ಮುಖ್ಯವಾಗಿ ಮೂರು ಮುಖಗಳಲ್ಲಿ ಆಗಿರುವುದನ್ನು ನಾವು ಗುರುತಿಸ ಬಹುದು. ಒಂದು, ಕಲಾ ಶಿಕ್ಷಣ, ಎರಡು, ಕಲೆ ಹಾಗೂ ಸಮಾಜಗಳನ್ನು ಒಟ್ಟಿಗೆ ತರುವಂತಹ ಸಾಂಸ್ಕೃತಿಕ ಕಾರ್ಯಕ್ರಮಗಳಡಿಯಲ್ಲಿ ಕಲಾಪ್ರದರ್ಶನಗಳನ್ನು ಸಂಘಟಿಸಿ ಅದಕ್ಕಾಗಿ ಗ್ಯಾಲರಿಗಳನ್ನು ನಿರ್ಮಿಸಿದ್ದು. ಮೂರು, ಶಾಶ್ವತ ಕಲಾ ಸಂಗ್ರಹಣೆ ಮಾಡುವ ಮೂಲಕ ಮ್ಯೂಸಿಯಮ್ ಗಳನ್ನು ಸೃಷ್ಟಿಸಿದ್ದು. ಇಂತಹ ಕನಸುಗಳು ನನಸಾಗಬೇಕಿದ್ದರೆ ಆಯಾ ಮಾರ್ಗಕ್ಕೆ ಸೂಕ್ತ ಸಂಪನ್ನಗಳು ಅತ್ಯಗತ್ಯ. ನಂಜುಂಡರಾಯರಲ್ಲಿ ಜನಗಳನ್ನು ಸಂಘಟಿಸುವ ಗುಣ ಇತ್ತು. ಯಾವ ಜನರಿಂದ ಈ ಕೆಲಸಗಳನ್ನು ಹೇಗೆ ಮಾಡಿಸಿ ಕೊಳ್ಳಬೇಕೆಂಬ ಸಮಯ ಪ್ರಜ್ಞೆಯಿಂದ ಅಂತಹವರ ಬೆನ್ನು ಹತ್ತಿ, ಸಂಸ್ಥೆಯ ಬೆಳವಣಿಗೆಗೆ ಅವಕಾಶಗಳನ್ನು ನಿರ್ಮಿಸು ತ್ತಿದ್ದರು. ಇವರ ಮೇಲೆ ಚಿಕ್ಕಂದಿನಿಂದ ಗಾಂಧೀಜಿಯವರ ಪ್ರಭಾವ ಸಾಕಷ್ಟಿದ್ದರೂ, ಕಲೆಯನ್ನು ಕುರಿತಂತೆ ಅವರ ಪ್ರಭಾವವೇನೂ ಮೇಸ್ಟ್ರ ಮೇಲೆ ಆದಂತೆ ಕಾಣುವುದಿಲ್ಲ. ಕಾರಣ ಗಾಂಧೀಜಿಯವರಿಗೆ, ಕಲ್ಪನೆಯ ಕಲೆಗಿಂತ, ಸಾಕಾರ ರೂಪದ ವಾಸ್ತವತೆಯೇ ಮುಖ್ಯವಾಗಿದ್ದಂತೆ ಕಾಣುತ್ತದೆ. ಉದಾಹರಣೆಗೆ, ಒಮ್ಮೆ ಅವರು ಬೆಂಗಳೂರಿಗೆ ಬಂದಿದ್ದಾಗ ಕವಿ ಮಿತ್ರರೊಬ್ಬರು, ಜೋಗದ ಪ್ರಕೃತಿ ವೈಭವವನ್ನು ಹೊಗಳಿ, ಅಲ್ಲಿ ನೀರು ನೂರಾರು ಅಡಿಗಳಿಂದ ಬೀಳುವುದನ್ನು ವರ್ಣಿಸಿದರು. ಆಗ ಗಾಂಧಿ' ಅದೇನು ಮಹಾ ! ಮಳೆಯ ನೀರು ಅದಕ್ಕಿಂತ ಮೇಲಿಂದ ಬೀಳುವುದಿಲ್ಲವೇ' ಎಂದರಂತೆ. ಆದರೆ ನಂಜುಂಡರಾಯರಿಗೆ ಇವೆರಡಕ್ಕೂ

### ಯಾರನ್ನು ಮಾತನಾಡಿಸಲಿ ?

*ನಮ್ಮದು ಚಿತ್ರಕಲಾವಿದರ ಕುಟುಂಬ. ನನ್ನ ತಾತ ಶ್ರೀ ವೈ. ಸುಬ್ರಮಣ್ಯರಾಜು ಅವರು ದೊಡ್ಡ ಕಲಾವಿದರು. ಅವರು ಅಲ್ಲಿ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದರು. ಆದ್ದರಿಂದ ಪ್ರೊ॥ ನಂಜುಂಡರಾಯರನ್ನು ನನ್ನ ಆರೇಳು ವರ್ಷ ಪ್ರಾಯದಿಂದಲೂ ನೋಡುತ್ತಿದ್ದೆ. ಚಿತ್ರಕಲಾ ಪರಿಷತ್ತಿನಲ್ಲಿಯೇ ನಾನು ಪದವಿಯನ್ನು, ಸ್ನಾತಕೋತ್ತರ ಪದವಿಯನ್ನು ಪಡೆದುಕೊಂಡೆ. ರಾವ್ ಮೇಷ್ಟ್ರು ನನ್ನ ಮಾರ್ಗದರ್ಶಕರಾಗಿದ್ದರು. ಇವರಿಗೆ ಮೈಸೂರು ಶೈಲಿ ಸಂಪ್ರದಾಯ ಚಿತ್ರಕಲೆಯ ಬಗ್ಗೆ ವಿಶೇಷ ಒಲವು. ಮರೆಯಾಗುತ್ತಿದ್ದ ಈ ಕಲೆಯನ್ನು ಸಾರ್ವಜನಿಕರಿಗೆ ಪರಿಚಯ ಮಾಡಿಕೊಡುವುದು ಅವರ ಉದ್ದೇಶವಾಗಿತ್ತು. ನನ್ನ Solo ಪ್ರದರ್ಶನಕ್ಕೆ ಕಾರಣಕರ್ತರಾದವರು ರಾವ್ ಮೇಷ್ಟ್ರು.*

*ನಾನು ಇತ್ತೀಚೆಗೆ ಮೈಸೂರು ಸಂಪ್ರದಾಯ ಶೈಲಿಯ 'ವಿಶ್ವರೂಪ ದರ್ಶನ' ಎಂಬ ೪ x ೫ ಅಡಿಯ ಕಲಾ ಕೃತಿಯನ್ನು ಮನೆಯಲ್ಲೇ ರಚಿಸುತ್ತಿದ್ದೆ. ಈ ವಿಷಯ ತಿಳಿದು ಮೇಷ್ಟ್ರು ನೇರವಾಗಿ ಮನೆಗೆ ಬಂದು ಕಲಾಕೃತಿಯನ್ನು ಕಂಡು ಸಂತೋಷಪಟ್ಟು ಬೆನ್ನು ತಟ್ಟಿದರು. ನಮ್ಮ ತಾತ ತೀರಿಕೊಂಡ ಮೇಲೆ ಚಿತ್ರಕಲಾ ಪರಿಷತ್ತಿಗೆ ಅಷ್ಟಾಗಿ ಹೋಗುತ್ತಿರಲಿಲ್ಲ. 'ಪರಿಷತ್ತನ್ನು ಮರೆಯಬಾರದು. ಆಗಾಗ ಬರುತ್ತಿರು. ಇಲ್ಲದಿದ್ದರೆ ನನ್ನ ಜೊತೆ ಮಾತನಾಡಬೇಡ' ಎಂದು ಹುಸಿ ಕೋಪವನ್ನು ತೋರಿದರು. ನಾನು ಮೇಷ್ಟ್ರು ಹೀಗಂದರಲ್ಲಾ ಎಂದು ಮಾರನೆಯ ದಿನವೇ ಹೋದೆ. ಅವರನ್ನು ಕಂಡೆ. 'ಗುಡ್. ನನ್ನನ್ನು ಆಗಾಗ ಮಾತನಾಡಿಸುವುದನ್ನು ಮರೆಯಬೇಡ' ಎಂದರು. ಇದಾದ ಒಂದು ವಾರದಲ್ಲೇ ಬರಸಿಡಿಲಿನ ಸುದ್ದಿ. ನಮ್ಮ ಮೇಷ್ಟ್ರು ಇಲ್ಲವಾದರು. ಈಗ ನಾನು ಯಾರನ್ನು ಮಾತನಾಡಿಸಲಿ ?*

*ರೇಖಾರಾಣಿ, ಹಿರಿಯ ವಿದ್ಯಾರ್ಥಿನಿ*

## ಸಾಧನೆ ಸರಳವಲ್ಲ

*ನಮ್ಮ ರಾವ್ ಮೇಷ್ಟು ಇನ್ನಿಲ್ಲ. ನಮ್ಮ ಪರಿಷತ್ತು ತಬ್ಬಲಿಯಾಗಿದೆ. ಇವರಿಲ್ಲದಿದ್ದರೆ ಪರಿಷತ್ತು ಈ ಮಟ್ಟದಲ್ಲಿ ಇರುತ್ತಿರಲಿಲ್ಲ. ಒಬ್ಬ ಸಾಮಾನ್ಯ ಹಳ್ಳಿಶಾಲೆಯ ಉಪಾಧ್ಯಾಯರ ಮಗ ಇಷ್ಟು ದೊಡ್ಡ ಸಂಸ್ಥೆಯನ್ನು ಕಟ್ಟಿರುವುದೇ ಒಂದು ಪವಾಡ. ಇಂದು ಕರ್ನಾಟಕ ಚಿತ್ರಕಲಾ ಪರಿಷತ್ತು ಅನೇಕ ಕಲೆಗಳಿಗೆ ಪೋಷಕವಾಗಿದೆ. ಅನೇಕ ಕಲಾವಿದರು ಬೆಳೆಯಲು ಅವಕಾಶ ಕಲ್ಪಿಸಿಕೊಟ್ಟಿದೆ. ಪರಿಷತ್ತು ರಾವ್ ಮೇಷ್ಟ್ರ ಮಹತ್ವಾಕಾಂಕ್ಷೆಯ ಮಹತ್ವದ ಹೆಜ್ಜೆ.*

*ನಾನು ಪರಿಷತ್ತಿನಲ್ಲಿ ಕಳೆದ ಎರಡು ವರ್ಷಗಳಿಂದಲೂ ವ್ಯಾಸಂಗ ಮಾಡುತ್ತಿದ್ದೇನೆ. ಒಂದು ವಿಶೇಷವೆಂದರೆ ರಾವ್ ಮೇಷ್ಟು ರಜಾದಿನಗಳಲ್ಲೂ ತಪ್ಪದೆ ಪರಿಷತ್ತಿಗೆ ಬರುತ್ತಿದ್ದರು. ಅವರಿಗೆ ಅಲ್ಲಿನ ಪ್ರತಿಯೊಂದು ಗಿಡದ, ಕಲ್ಲಿನ ಪರಿಚಯವಿತ್ತು. ಅವರ ದಿನಚರಿ ಪ್ರಾರಂಭವಾಗುತ್ತಿದ್ದದ್ದು ಪರಿಷತ್ತಿನಲ್ಲಿ, ಮುಗಿಯುತ್ತಿದ್ದದ್ದು ಪರಿಷತ್ತಿನಲ್ಲಿ ಅವರು ತಮ್ಮ ಮಾರುತಿ ಜೆನ್ ಕಾರಿನಿಂದ ಇಳಿಯುತ್ತಲೇ ನೇರವಾಗಿ ಪರಿಷತ್ತಿನ ಆವರಣದಲ್ಲಿರುವ ಗಣೇಶನ ಗುಡಿಗೆ ಹೋಗುತ್ತಿದ್ದರು. ಸದಾ ಬಿಳಿ ಪೈಜಾಮ, ತಿಳಿ ಬಣ್ಣದ ಜುಬ್ಬಾದಲ್ಲಿರುತ್ತಿದ್ದರು. ಇದ್ದ ಕೂದಲೂ ಕೆದರಿರುತ್ತಿತ್ತು. ಕೈಯನ್ನು ಹಿಂದೆ ಕಟ್ಟಿಕೊಂಡು ಪರಿಷತ್ತನ್ನು ಸುತ್ತುತ್ತಿದ್ದರು. ಯಾರು ಏನು ಮಾಡುತ್ತಿದ್ದಾರೆ ? ಎಲ್ಲಿ ಏನಾಗಿದೆ ? ಮುಂದೆ ಏನು ಮಾಡಬೇಕು ? ಎಂಬ ಆಲೋಚನೆಯಲ್ಲಿ ಇದ್ದಂತೆ ಭಾಸವಾಗುತ್ತಿತ್ತು. ಆಗ ವಿದ್ಯಾರ್ಥಿಗಳು, ಅಧ್ಯಾಪಕರು ಗೌರವದಿಂದ ವಂದಿಸುತ್ತಿದ್ದರು. ಅವರ ಉಡುಗೆ ತೊಡುಗೆ ಸರಳವಾಗಿದ್ದರೂ ಅವರ ಸಾಧನೆ ಸರಳವಲ್ಲ.*

*ಕೆ. ವಿ. ಚಿನ್ಮಯಿ, ಎರಡನೆಯ ಬಿ.ಎಫ್.ಎ.*

ಇರುವ ಸೌಂದರ್ಯದ ವ್ಯತ್ಯಾಸದ ಜೊತೆಗೆ, ಸಮಾಜದ ಬೆಳವಣಿಗೆಗೆ, ಇವೆರಡರ ಅಗತ್ಯದ ಅರಿವು ಚೆನ್ನಾಗಿ ಇತ್ತು. ಹಾಗಾಗಿ ಅವರು ಗಾಂಧಿಯ ವಾಸ್ತವತೆಗಿಂತ ಭಿನ್ನವಾದ ವಾಸ್ತವತೆಯಲ್ಲಿ ಬದುಕಿದರು.

ಕರ್ನಾಟಕ ಚಿತ್ರಕಲಾ ಪರಿಷತ್ತಿನ ಸ್ಥಾಪಕ ಕಾರ್ಯದರ್ಶಿಯಾದ ಪ್ರೊ|| ಎಂ. ಎಸ್. ನಂಜುಂಡರಾವ್ ಅವರು ಒಂದು ಸಂಸ್ಥೆಯನ್ನು ಕಟ್ಟಿ ನಡೆಸಬೇಕಾದರೆ, ವೈಯಕ್ತಿಕವಾಗಿ ಕೆಲವು ಇಲ್ಲದ ಗುಣಗಳನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ವ್ಯಾವಹಾರಿಕತೆ, ನಿಷ್ಠುರತೆ, ಹಾಗೂ ಕಾರ್ಯಕ್ಷಮತೆಯಿದ್ದಾಗ ಮಾತ್ರ ಬೆಳವಣಿಗೆಯೆನ್ನುವುದು ಸಾಧ್ಯವಾಗಬಲ್ಲದು. ನಂಜುಂಡರಾಯರು ಈ ಗುಣಗಳನ್ನು ಅಳವಡಿಸಿಕೊಂಡಿದ್ದರೂ ಸಮಯ ಸಿಕ್ಕಾಗ ತಮ್ಮ ಹಾಸ್ಯ ಪ್ರಜ್ಞೆಯನ್ನು ತೋರುತ್ತಿದ್ದರು. ತಮ್ಮ ಸುತ್ತಲಿದ್ದವರನ್ನು ಕಾರ್ಯಪ್ರವೃತ್ತರನ್ನಾಗಿಸುತ್ತಿದ್ದರು. ಅಲ್ಲದೆ ಅವರಲ್ಲಿ ತುಂಬು ಆತ್ಮವಿಶ್ವಾಸ ಹಾಗೂ ಮಹತ್ವಾಕಾಂಕ್ಷೆಯ 'ಮಿಷನರಿ' ಮನೋಭಾವ ಮನೆಮಾಡಿಕೊಂಡಿತ್ತು.

ಒಮ್ಮೆ ಯುರೋಪಿಯನ್ನರೊಬ್ಬರು ಸಂಸ್ಥೆಗೆ ಭೇಟಿಯಿತ್ತಾಗ, ಅವರಿಗೆ ಸಂಸ್ಥೆಯ ವಿವಿಧ ಭಾಗಗಳನ್ನು ಪರಿಚಯಿಸುತ್ತ ಕೊನೆಗೆ ತಮ್ಮ ಪ್ರೀತಿಯ ಸಂಗ್ರಹವಾದ ತೊಗಲುಗೊಂಬೆಗಳನ್ನು ತೋರಿಸಲು ಪ್ರಾರಂಭಿಸಿದರು. ನೋಡು ನೋಡುತ್ತಾ ಆ ವ್ಯಕ್ತಿಗೆ ಬಳಲಿಕೆ ಬಂದರೂ ರಾಯರ ಆಸಕ್ತಿ ಕುಗ್ಗಲಿಲ್ಲ. ಇದು ಅವರ ಉತ್ಸಾಹ ಮತ್ತು ತಾಳ್ಮೆಗೆ ಒಂದು ಉದಾಹರಣೆ.

ಮತ್ತೊಮ್ಮೆ, ಸ್ನಾತಕೋತ್ತರ ವಿದ್ಯಾರ್ಥಿಗಳು ತಮ್ಮ ವಾರ್ಷಿಕ ಚಿತ್ರ ಪ್ರದರ್ಶನದ ತಯಾರಿಗೆ ಸಾಕಷ್ಟು ಸಮಯವನ್ನು ಕೋರಿದಾಗ ಹೇಳಿದ್ದು, 'ಮನಸ್ಸು ಮಾಡಿದರೆ ಹಿಮಾಲಯವನ್ನೇ ಇಲ್ಲಿ ತಂದಿಡಬಹುದಂತೆ, ಅಂತಹುದರಲ್ಲಿ, ಒಂದು ದಿನದ ತಯಾರಿ ಸಾಲದೆ ?' ಇದು ಒಂದು ಉತ್ಪ್ರೇಕ್ಷೆಯೇ ಇರಬಹುದು, ಆದರೆ ಇಲ್ಲಿ ಅವರಿಗೆ ಮನಸ್ಸಿನ ಶಕ್ತಿಯ ಬಗೆಗೆ ಇದ್ದ ನಂಬಿಕೆಯನ್ನು ತೋರಿಸುವುದಿಲ್ಲವೇ ?

ಮೇಷ್ಟ್ರ ದೂರದೃಷ್ಟಿಯಿಂದ ಚಿತ್ರಕಲಾ ಪರಿಷತ್ತು ಶೈಕ್ಷಣಿಕವಾಗಿ, ಪದವೀ ತರಗತಿಗಳನ್ನೂ, ಸ್ನಾತಕೋತ್ತರ ಪದವೀ ತರಗತಿಯಲ್ಲದೆ, ಪರಿಶೋಧನಾ ವಿಭಾಗವನ್ನೂ ಪ್ರಾರಂಭಿಸುವ ಮೂಲಕ ದಕ್ಷಿಣ ಭಾರತದಲ್ಲಿಯೇ ಮೊದಲನೆಯದಾಯಿತು. ಈ ವಿಭಾಗಗಳಿಗೆ ಇಂದು ಬೇಡಿಕೆಯನ್ನು ಗಮನಿಸಿದರೆ, ಬಹುಶಃ ಇದು ಎಷ್ಟು ಸಮಯೋಚಿತವಾಗಿತ್ತು ಎನ್ನುವುದು ಅರಿವಾಗುತ್ತದೆ.

ಸಂಸ್ಕೃತಿಯ ಹಿರಿಮೆಯ ಬಗೆಗೆ ನಂಜುಂಡರಾಯರಿಗೆ ಅಪಾರವಾದ ಪ್ರೀತಿಯೂ, ಗೌರವವೂ ಇತ್ತು ಎನ್ನುವುದಕ್ಕೆ ಅವರು ಸಂಗ್ರಹಿಸಿದ ಮೈಸೂರು ಶೈಲಿಯ ಸಾಂಪ್ರದಾಯಿಕ ವರ್ಣಚಿತ್ರಗಳು ಸಾಕ್ಷಿಯಾಗಿ ನಿಲ್ಲಬಲ್ಲವು. ಇವುಗಳನ್ನು ಅವರು ಜೋಪಾನವಾಗಿ ಕೆಳಮಾಳಿಗೆಯಲ್ಲಿ ಪ್ರದರ್ಶಿಸುವುದಲ್ಲದೆ, ಅವುಗಳನ್ನು ಅಭ್ಯಸಿಸಿ ಕಲಿಯುವ ಸಲುವಾಗಿ ಅವಕಾಶವನ್ನೂ ಕಲ್ಪಿಸಿದರು. ಈ ಕಲೆ ನಮ್ಮ ತಲೆಮಾರಿಗೆ ಕೊನೆಗೊಳ್ಳಬಾರದೆಂಬ ಅವರ ಆಸೆಗೆ ಇದು ಪ್ರತೀಕವಾಗುತ್ತದೆ. ಅಷ್ಟಲ್ಲದೆ ಎಷ್ಟೋ ಮೂಲ ಚಿತ್ರಗಳನ್ನು ನಾವು ನೋಡಲು ಇದು ಅವಕಾಶ ಮಾಡಿಕೊಟ್ಟಿದೆ.

### ನಂಜುಂಡ ಸಿರಿ

*ಇಂದು ನನಗೆ ಪಾಠಮಾಡುತ್ತಿರುವ ಅಧ್ಯಾಪಕರಲ್ಲಿ ಬಹುಪಾಲು ಜನ ನಂಜುಂಡರಾವ್ ಮೇಷ್ಟ್ರ ಕೈಕೆಳಗೆ ಚಿತ್ರಕಲಾ ಅಭ್ಯಾಸ ಮಾಡಿದವರು. ಅಚ್ಚುಕಟ್ಟುತನ ಮತ್ತು ಶಿಸ್ತು ರಾವ್ ಮೇಷ್ಟ್ರು ಮುಖ್ಯ ಗುಣವಾಗಿತ್ತು. ಇದೇ ಅವರ ಯಶಸ್ಸಿನ ಹಾದಿ. ಆದ್ದರಿಂದಲೇ ರಾಷ್ಟ್ರದಲ್ಲೇ ಅತ್ಯುತ್ತಮ ಕಲಾ ಸಂಕೀರ್ಣವನ್ನು ಸ್ಥಾಪಿಸಿದ್ದಲ್ಲದೆ ನಿಕೋಲೊಸ್ ರೋರಿಚ್, ಸ್ವೆತಸ್ಲಾವ್ ರೋರಿಚ್, ಕೇಜ್ರಿವಾಲ್, ಸಂಪ್ರದಾಯ ಚಿತ್ರಕಲಾ ಗ್ಯಾಲರಿಗಳನ್ನು ಶಾಶ್ವತವಾಗಿ ನಿರ್ಮಿಸಿದರು. ಪರಿಷತ್ತಿನ ಉಗ್ರಾಣದಲ್ಲಿ ಇರುವ ಅಪರೂಪದ ತೊಗಲುಗೊಂಬೆ ಸಂಗ್ರಹ ಕಲಾರಸಿಕರ ಕಣ್ಣಿಗೆ ದೊಡ್ಡ ಹಬ್ಬ. ಇದಕ್ಕೆಲ್ಲಾ ಕಾರಣರಾದ ರಾವ್ ಮೇಷ್ಟು ಪರಿಷತ್ತಿನ ವಿದ್ಯಾರ್ಥಿಗಳಿಗೆ ಮತ್ತು ಸಿಬ್ಬಂದಿಗೆ ಒಂದು ರೀತಿಯ 'ಗಾಡ್ ಫಾದರ್.'*

*ಕರ್ನಾಟಕ ಚಿತ್ರಕಲಾ ಪರಿಷತ್ತನ್ನು* Deemed University *(ಪರಿಗಣಿತ ವಿಶ್ವವಿದ್ಯಾಲಯ) ಮಟ್ಟಕ್ಕೆ ತೆಗೆದುಕೊಂಡು ಹೋದ ಕೀರ್ತಿ ನಮ್ಮ ರಾವ್ ಮೇಷ್ಟ್ರಿಗೆ ಸಲ್ಲಬೇಕು. ಯಲಹಂಕದಲ್ಲಿ ಹೊಸ ಅಂತಾರಾಷ್ಟ್ರೀಯ ಮಟ್ಟ ಕಲಾಸಂಕೀರ್ಣವನ್ನು, ವಿದ್ಯಾಲಯವನ್ನು ಸ್ಥಾಪಿಸಲು ಯೋಜನೆಗಳನ್ನು ಸಿದ್ಧಗೊಳಿಸಿದ್ದರು. ಅದು ಸಾಕಾರಗೊಳ್ಳುವ ಮೊದಲೇ ಇಲ್ಲವಾದರು. ನಮ್ಮೆಲ್ಲರ ಪ್ರೀತಿಯ ಮೇಷ್ಟು ಕಷ್ಟ-ನಷ್ಟಗಳನ್ನು, ವಾದ ವಿವಾದಗಳನ್ನು ಬೆನ್ನಿಗೆ ಕಟ್ಟಿಕೊಂಡು ಚಿತ್ರಕಲಾ ಪರಿಷತ್ತಿನಂತಹ ಅಮೂಲ್ಯ ಉಡುಗೊರೆಯನ್ನು ಬಿಟ್ಟುಹೋಗಿದ್ದಾರೆ. ಅದನ್ನು ನಾವು ಎಷ್ಟರಮಟ್ಟಿಗೆ ಉಳಿಸಿಕೊಳ್ಳುತ್ತೇವೆ, ಬೆಳೆಸುತ್ತೇವೆ ಎಂಬುದೇ ನಮ್ಮ ಮುಂದಿರುವ ಸವಾಲು. ಪ್ರೊ|| ಎಂ. ಎಸ್. ನಂಜುಂಡರಾವ್ ಅವರು ಕಣ್ಮರೆಯಾಗಿದ್ದರೂ, ಅವರು ಬಿಟ್ಟುಹೋದ 'ನಂಜುಂಡ ಸಿರಿ' ನಮ್ಮೊಂದಿಗೇ ಇದೆ.*

*ಪಿ. ನವೀನ್, ಹಾಲಿ ವಿದ್ಯಾರ್ಥಿ*

ಇವರ ಮತ್ತೊಂದು ಪ್ರೀತಿಯ ಹುಚ್ಚು ತೊಗಲು ಗೊಂಬೆಗಳನ್ನು ಸಂಗ್ರಹಿಸುವುದು. ಹೀಗಾಗಿ ಇಂದು ಚಿತ್ರಕಲಾ ಪರಿಷತ್ತಿನಲ್ಲಿ ಎರಡು ಶತಮಾನಗಳ ಅಪೂರ್ವವಾದ ತೊಗಲುಗೊಂಬೆಗಳ ಸಂಗ್ರಹವಾಗಿದೆಯೆಂದರೆ ಅಚ್ಚರಿಯಾಗುತ್ತದೆ. ವಿದ್ಯಾರ್ಥಿಗಳಲ್ಲಿ ಇವರು ಹೀಗೆ ಜಾನಪದ, ಸಾಂಪ್ರದಾಯಿಕ ಕಲೆಯ ಕುರಿತು ಆಸಕ್ತಿಯುಂಟಾಗುವಂತಹ ಕಾರ್ಯಾಗಾರಗಳನ್ನೂ ಪ್ರದರ್ಶನಗಳನ್ನೂ ಆಗಿಂದಾಗ್ಗೆ ಏರ್ಪಡಿಸಲು ಉತ್ಸುಕರಾಗಿರುತ್ತಿದ್ದರು. ಅಷ್ಟಲ್ಲದೆ ಜನಪದ ಕಲಾವಿದರು ಪರಿಷತ್ತಿಗೆ ಭೇಟಿಯಿತ್ತಾಗ ಅವರನ್ನು ಅತ್ಯಂತ ಪ್ರೀತಿಯಿಂದ ನಡೆಸಿಕೊಂಡಿದ್ದನ್ನು ನಾನು ಕಂಡಿದ್ದೇನೆ.

ಇವರ ಮತ್ತೊಂದು ಸಮಯೋಚಿತ ಸಾಧನೆಯೆಂದರೆ, ಪರಿಷತ್ತಿನಲ್ಲಿ ತಾತ್ಕಾಲಿಕ ಪ್ರದರ್ಶನಗಳ ಗ್ಯಾಲರಿಗಳು ಹಾಗೂ ಶಾಶ್ವತ ಪ್ರದರ್ಶನಗಳ ಸಲುವಾಗಿ ಮ್ಯೂಸಿಯಮ್‌ಗಳನ್ನು ನಿರ್ಮಿಸಿದ್ದು. ಇವು ಹೊರಗಿನ ಸಾರ್ವಜನಿಕರಿಗೆ, ಕಲಾಸಕ್ತರಿಗೆ ಎಷ್ಟೊಂದು ಅವಶ್ಯಕವಾಗಿದ್ದವೆಂಬುದಕ್ಕೆ ಇವುಗಳಿಗೆ ಭೇಟಿ ನೀಡುವವರ ಸಂಖ್ಯೆಯನ್ನು ಗಮನಿಸಿದರೆ ತಿಳಿಯುತ್ತದೆ. ಶಾಲಾ ಮಕ್ಕಳಿಂದ ಹಿಡಿದು ಹೊರ ರಾಜ್ಯಗಳ ಹಾಗೂ ಅಂತರ ರಾಷ್ಟ್ರೀಯ ಪ್ರವಾಸಿಗರಿಗೆ ಇದೊಂದು ಅಗತ್ಯವಾಗಿ ಭೇಟಿ ನೀಡುವಂತಹ ಸ್ಥಳವಾಗಿದೆ.

ಹೀಗೆ ಮೇಷ್ಟ್ರು ಕೇವಲ ಒಂದು ಕಲಾ ಶಾಲೆಯ ಮಟ್ಟಿಗೆ ತಮ್ಮ ಆಸಕ್ತಿಯನ್ನು ಕುಗ್ಗಿಸದೆ ಅದಕ್ಕೆ ಪೂರಕವಾದ ಇತರ ಅಂಗಗಳನ್ನೂ ಬೆಳೆಸಿದರು. ಹೀಗಾಗಿ ಇದು ಒಂದು ಆರೋಗ್ಯಕರವಾದ ಬೆಳವಣಿಗೆಯಾಗಿ ಭಾರತದ ಇತರ ಕಲಾಸಂಸ್ಥೆಗಳಿಗೆ ಮಾದರಿಯಾಗಿದೆ. ಸರ್ಕಾರದ ಯಾವುದೇ ಕಲಾಸಂಸ್ಥೆ ನಿರ್ವಹಿಸಲಾರದ ಜವಾಬ್ದಾರಿಗಳನ್ನು ಯಶಸ್ವಿಯಾಗಿ ನಿಭಾಯಿಸಿದೆ. ಕರ್ನಾಟಕದ ಹೆಮ್ಮೆ ಇತರ ರಾಜ್ಯ, ದೇಶಗಳಲ್ಲಿ ಹರಡುವಂತೆ ಮಾಡಿದೆ. ಇದರಲ್ಲಿ ನಂಜುಂಡರಾಯರ ಅಪಾರವಾದ ಪರಿಶ್ರಮ, ದೂರದೃಷ್ಟಿ, ಕಲೆಯ ಬಗೆಗಿನ ಅವರ ಕಾಳಜಿ ತುಂಬಿದೆಯೆಂದರೆ ತಪ್ಪಾಗಲಿಕ್ಕಿಲ್ಲ.

ರಮೇಶಚಂದ್ರ
ಅಧ್ಯಾಪಕರು, ಸ್ನಾತಕೋತ್ತರ ಕೇಂದ್ರ, ಕರ್ನಾಟಕ ಚಿತ್ರಕಲಾ ಪರಿಷತ್ತು
ಕುಮಾರ ಕೃಪಾ ರಸ್ತೆ, ಬೆಂಗಳೂರು - ೫೬೦ ೦೦೧

# ಬದುಕು

ವಸುಮತಿ ಉಡುಪ

ಸಣ್ಣ ಮಕ್ಕಳಿರುವ ಪೇಟೆ ಮನೆಯವರಿಗೆಲ್ಲಾ ಇದು ಗೊತ್ತೇ ಇರುತ್ತದೆ. ರಸ್ತೆಯಲ್ಲಿ ಮಾರಾಟದವರು ಏನೇ ಕೂಗಿಕೊಂಡು ಹೋಗಲಿ ಆ ದನಿಯನ್ನು ಅನುಕರಿಸುತ್ತಾ ಮಕ್ಕಳು ತಾವೂ ಹಾಗೇ ಕೂಗುವುದು, ಕೆಲವೊಮ್ಮೆ ಕೈಗೆ ಸಿಕ್ಕಿದ್ದನ್ನು ಎತ್ತಿ ತಲೆಯ ಮೇಲಿಟ್ಟುಕೊಂಡು ಮನೆಯೊಳಗನ್ನೇ ರಸ್ತೆ ಮಾಡಿಕೊಂಡು ಕೂಗುತ್ತಾ ಅತ್ತಿತ್ತ ಓಡಾಡುವುದು. 'ಎಳೇ ಹರಿವೇ, ಕೊತ್ತುಂಬ್ರೀ, ಕರಿಬೇವೂ, ಮೆಂತೇ....' ಎಂದು ಉದ್ದಾನುದ್ದಕ್ಕೋ ಅಥವಾ 'ಮಂಡಕ್ಕೀ.... ಮಂಡಕ್ಕೀ....' ಎಂದು ರಾಗ ರಾಗವಾಗಿಯೋ ಅವು ಅನುಕರಿಸಿದಾಗ ಮನೆಯವರಿಗೆ ಮುದ್ದು, ಸಂತಸ. ಇಂತಾದ್ದೇ ಒಂದು ಎಳೆದನಿ ಒಂದು ಬೆಳಗಿನ ಹೊತ್ತು ಹೊರಗಿನ ರಸ್ತೆಯಿಂದ ಕೇಳಿಬಂದಾಗ ಯಾರೋ ಮಕ್ಕಳು ಅಣಕ ಮಾಡುತ್ತಿದ್ದಾರೆಂದೇ ಒಳಗೆ ಕೆಲಸದಲ್ಲಿದ್ದ ನಾನು ಅಂದುಕೊಂಡಿದ್ದು. ಡಿಸೆಂಬರಿನ ಕೊರೆಯುವ ಚಳಿ, ಇಬ್ಬನಿ. ಇಷ್ಟು ಮುಂಚೆ ಎದ್ದು ಆದ್ಯಾರ ಮನೆಯ ಪುಂಡುಮಗು ರಸ್ತೆಗಿಳಿದಿದೆಯೋ ಎಂದು ಕೊಂಚ ಧಿಕ್ಕಾರ. ನಾನಾಗಿದ್ದರೆ ಖಂಡಿತಾ ಇಂಥಾ ಹೊತ್ತಿನಲ್ಲಿ ಮಗುವನ್ನು ಹೊರಗೆ ಆಡಲು ಬಿಡುತ್ತಿರಲಿಲ್ಲ. ಯಾರೋ ಬೇಕಾಬಿಟ್ಟಿತನ ಇರುವಂತಾ ತಾಯಿ. ಗೊತ್ತು, ನಾಳೆ ಎನ್ನುವಾಗ ಮಗುವಿಗೆ ನೆಗಡಿ, ಕೆಮ್ಮು, ಜ್ವರ, ಬೆಟ್ಟ ಜರಿದು ತಲೆಯ ಮೇಲೆ ಬಿದ್ದಂತೆ ಮುಖ ಮಾಡಿಕೊಂಡು ಡಾಕ್ಟರ ಶಾಪಿನಲ್ಲಿ ಸರದಿ ಹಿಡಿಯುತ್ತಾಳೆ. ಹಿಡಿಯಲಿ, ನನಗೇನಂತೆ, ಎನ್ನುವ ಭಾವನೆಯ ಜೊತೆ ಜೊತೆಯಲ್ಲೇ 'ಯಾರಿಗೆ ಖಾಯಿಲೆ ಬಂದರೂ ನೋಡಬಹುದು, ಮಕ್ಕಳು ನರಳುತ್ತಿದ್ದರೆ ನೋಡೋಕಾಗಲ್ಲಪ್ಪಾ......' ಎನ್ನುವ ನನ್ನದೊಂದು ದೌರ್ಬಲ್ಯ. ಮಗುವಿನ ದನಿ ಕೇಳಿ ಒಂದು ಕ್ಷಣ ಮಿಂಚಿ ಮಾಯವಾದ ಈ ಭಾವನೆ ಮತ್ತೆ ಮರುಕಳಿಸಿದ್ದು ಮರು ಬೆಳಗಿನ ಅದೇ ಹೊತ್ತಿನಲ್ಲಿ. ಅದೇ ದನಿ. ಅದೇ ರಾಗ,

'ಎಳೆ ಹರಿವೇ, ಮೆಂತೇ, ಕರಿಬೇವೂ, ಕೊತ್ತುಂಬ್ರೀ, ಪಾಲಕ....'



ಇವತ್ತು ಬಿಸಿ ಕಾಫಿಯ ಲೋಟ ಹಿಡಿದು ಕೊಂಚ ಪುರುಸೊತ್ತಾಗಿ ಕುಳಿತಿದ್ದೆ. ದನಿ ಕೇಳಿದ್ದೇ ಯಾರ ಮನೆಯ ಮಗು ಎನ್ನುವ ಕುತೂಹಲದಿಂದ ಕಿಟಕಿಯ ಬಳಿ ಹೋಗಿ ಹಣಕಿದೆ. ಇದು ಅನುಕರಣೆಯ ಆಟವಲ್ಲ, ವಾಸ್ತವ. ಐದಾರು ವರ್ಷದ ಹುಡುಗಿಯೊಂದು ಹಲ್ಲು ಕಟಗರಿಸುವ ಚಳಿಯಲ್ಲಿ ಸೊಪ್ಪಿನ ಬುಟ್ಟಿ ಹೊತ್ತು ವ್ಯಾಪಾರಕ್ಕೆ ಹೊರಟಿದೆ. ಬಡಕಲು ಹುಡುಗಿಯ ತಲೆಯ ಮೇಲೆ ಅದಕ್ಕೆ ಭಾರವೆನಿಸುವಂತಾ ಬುಟ್ಟಿ. ಅದರ ವಯಸ್ಸನ್ನು ಮತ್ತಷ್ಟು ಕಿರಿದುಗೊಳಿಸುವಂತಾ ಕೀರಲು ಕಂಠ. ಬಹುಶಃ ಚಳಿಯ ನಡುಕದಿಂದಲೇ ? ಬಾಣಂತಿಯಂತೆ ತಲೆಗೊಂದು ಹಳೆಯ ಬಟ್ಟೆ ಕಟ್ಟಿಕೊಂಡ, ಹರಕು ಸ್ವೆಟರಿನ, ಬರಿಗಾಲಿನ ಹುಡುಗಿ. ಅಂತರಂಗದೊಳಗೆಲ್ಲೋ ಚುರುಗುಟ್ಟಿತು. ಬಾಗಿಲು ತೆಗೆದು ಚಪ್ಪಾಳೆ ತಟ್ಟಿ ಕರೆದೆ. ತಿರುಗಿ ನೋಡಿದ ಹುಡುಗಿ ವಾಪಸು ಬಂದು ಗೇಟಿನ ಬಳಿ ಬುಟ್ಟಿ ಇಳಿಸಿ ನಿಂತಿತು.

'ಎರಡು ರೂಪಾಯಿ ಕೊತ್ತುಂಬ್ರಿ, ಎರಡು ರೂಪಾಯಿ ಕರಿಬೇವು ಕೊಡು...'

ಎರಡೆರಡು ಸಲ ಕಂತೆಗಳನ್ನು ಎಣಿಸಿಕೊಟ್ಟಿತು ಹುಡುಗಿ.

'ಹೆಸರೇನು ?'

ಮಾತಿಲ್ಲ.

'ಹೆಸರಿಲ್ವಾ ನಿಂಗೆ ?'

ಮಾತಿಲ್ಲ.

'ಅಪ್ಪ, ಅಮ್ಮ ಏನ್ಮಾಡ್ತಾರೆ ?'

ಮಾತಿಲ್ಲ.

'ಸ್ಕೂಲಿಗೆ ಯಾಕೆ ಹೋಗಲ್ವೇ ?' ಊಹೂಂ. ತನ್ನ ವ್ಯವಹಾರದೊಂದಿಗೆ ಮಾತ್ರ ಜನರ ಸಂಬಂಧ ಎನ್ನುವಂತೆ ಕಣ್ಣು ಪಿಳಿಪಿಳಿಸುತ್ತಾ ದುಡ್ಡಿಗಾಗಿ ಕಾದು ನಿಂತಿದೆ. ಒಳಗೆ ಹೋಗಿ ದುಡ್ಡು ತಂದು ಕೊಟ್ಟೆ. ರೂಪಾಯಿಯ ಗಟ್ಟಿಗಳನ್ನು ಪರೀಕ್ಷಿಸುವಂತೆ ನೋಡಿ ಸಣ್ಣ ಕೈಚೀಲದೊಳಗೆ ಹಾಕಿ ಅದರ ದಾರ ಬಿಗಿದು ಬುಟ್ಟಿಯೊಳಗೆ ಭದ್ರವಾಗಿಟ್ಟುಕೊಂಡಳು ಹುಡುಗಿ. ಬುಟ್ಟಿ ಎತ್ತಿ ತಲೆಯ ಮೇಲಿಟ್ಟುಕೊಳ್ಳಲು ಸಹಾಯ ಮಾಡುವಾಗ ಹುಡುಗಿ ಭಾರಕ್ಕೆ ಬಳುಕಿ ಭದ್ರವಾಗಿ ನಿಂತಿತು.

'ನಾಳೆ ಮೆಂತೆಸೊಪ್ಪು ತಗೋತೀನಿ, ಬಾ.' ಅಂದರೆ ಹುಡುಗಿ ಮಾತಾಡದೆ ಮುಂದೆ ಹೋಯಿತು. ಕಂಪನದ ನಡುವಿನಿಂದ ದನಿ ಹೊರಟಿತು,

'ಎಳೆ ಹರಿವೇ, ಮೆಂತೇ, ಕೊತ್ತುಂಬ್ರೀ.....'

* * *

ಮರುದಿನ ಹುಡುಗಿ ತಾನಾಗಿ ಬರಲಿಲ್ಲ. ಅವಳ ಸ್ವರ ಕೇಳಿ ನಾನಾಗಿ ಕರೆದೆ. ವ್ಯಾಪಾರ ಮಾಡಿದೆ. ಕ್ರಮೇಣ ಇದೊಂದು ರೂಢಿ ಎನ್ನುವಂತಾಯ್ತು. ಸೊಪ್ಪು ಬೇಕಾದಾಗ ಆ ಹುಡುಗಿಯನ್ನೇ ಕಾದು ಕರೆಯುವುದು ಅಭ್ಯಾಸವಾಯ್ತು. ಹುಡುಗಿಗೂ ಸ್ವಲ್ಪ ಸ್ವಲ್ಪವಾಗಿ ಚಳಿ ಬಿಡುತ್ತಾ ಬಂತು. ಪ್ರಶ್ನೆಗೆ ಚುಟುಕಾದ ಉತ್ತರ ಬರ ತೊಡಗಿತು. ಹೆಸರು ಅಶ್ವಿನಿ (ಓಹೋಹೋ, ಪರವಾಗಿಲ್ಲಪ್ಪಾ, ಹೆಸರು ಹೈಕ್ಲಾಸ್ ಉಂಟು), ಅಪ್ಪ ಇಲ್ಲ (ಛೆ ಛೇ ಏನಾಗಿತ್ತೋ ? ಅಥವಾ... ಇದರ ಅಮ್ಮನ್ನ ಬಿಟ್ಟು ಬೇರೆ ಯಾರನ್ನೋ ಕಟ್ಟಿಕೊಂಡನೋ ?), ಒಂದಿನ ಆಸ್ಪತ್ರೇಲಿ ಸತ್ತುಹೋದ (ಅಯ್ಯಯ್ಯೋ ತಪ್ಪು ತಪ್ಪು ಯೋಚ್ನೆ ಮಾಡಿದ್ದಕ್ಕೆ ಕ್ಷಮಿಸಿ ಬಿಡಪ್ಪಾ, ದೇವ್ರೇ...), ಅಮ್ಮನೂ ಸೊಪ್ಪು, ತರಕಾರಿ ಮಾರ್ತಾಳೆ (ಜಾಗ ಪಾಲು ಮಾಡ್ಕೊಂಡಿರ್ಬೇಕು). 'ಸ್ಕೂಲಿಗೆ ಹೋಗಲ್ವೇನೇ ?' ಅಂದರೆ ಮಾತ್ರಾ ಉತ್ತರ ಇಲ್ಲ. ಹಿಂದಿನ ದಿನ ಮಿಕ್ಕ ತಿಂಡಿಗಳಿಗೆ ಅಶ್ವಿನಿ ಹಕ್ಕುದಾರಳಾದಳು. ಚೋಟುದ್ದ ಇದ್ದರೂ ಅಮ್ಮನ ಮೇಲೆ ಅದೇನು ಪ್ರೀತಿ ಅಂತ ? ಏನು ಕೊಟ್ಟರೂ ಪ್ಲಾಸ್ಟಿಕ್ ಕವರಿನಲ್ಲಿ ಹಾಕಿಕೊಂಡು, ಬುಟ್ಟಿಯಲ್ಲಿಟ್ಟುಕೊಂಡು, ಮನೆಗೆ ತೆಗೆದುಕೊಂಡು ಹೋಗುವುದೇ ಸೈ. ತಿಂಡಿ ಕಂಡರೆ ಕೆಲ ಮಕ್ಕಳು ಎಷ್ಟು ಬೀಗುತ್ತವೆ. ತಿನ್ನಲು ಹಾತೊರೆಯುತ್ತವೆ. ಸಿಹಿತಿಂಡಿ ಕೊಟ್ಟಾಗಲೂ ಈ ಹುಡುಗಿ ಆಗಲೇ ತಿನ್ನಲು ಆತುರಪಟ್ಟವಳಲ್ಲ. ಇವೆಲ್ಲಾ ಏನೇ ಇದ್ದರೂ ವ್ಯವಹಾರದ ವಿಷಯದಲ್ಲಿ ಹುಡುಗಿ ಮಹಾ ಬಿಗಿ. 'ರೂಪಾಯಿಗೆ ಎರಡು ಕಟ್ಟು ಕೊತ್ತುಂಬರಿ' ಎಂದರೆ ಎರಡೇ. ಅವಳೊಡನೆ ಸುಳ್ಳೇ ಚೌಕಾಶಿ ಮಾಡುವುದೆಂದರೆ ನನಗೆ ಖುಷಿ. 'ಮೂರು ಕೊಡು' ಎಂದರೆ 'ಬರಲ್ಲ' ಎಂದು ಬುಟ್ಟಿ ಎತ್ತಿ ತಲೆಯ ಮೇಲಿಟ್ಟುಕೊಂಡು ಹೊರಟಳೇ. ಅಮ್ಮ ಏನು ಹೇಳಿರುತ್ತಾಳೋ ಅದನ್ನು ಚಾಚೂ ತಪ್ಪದೆ ಪರಿಪಾಲಿಸುವ ವಿಧೇಯತೆ ಅಥವಾ ಮುಗ್ಧತೆ ಅಥವಾ ಚಾಕಚಕ್ಯತೆ. ಯಾರೂ ಅವಳನ್ನು ಏಮಾರಿಸುವಂತಿಲ್ಲ. ಅವಳ ಹತ್ತಿರ ಚೌಕಾಶಿ ಮಾಡಿ ದುಡ್ಡು ಉಳಿಸಿ ನಾನು ದೊಡ್ಡ ಮನುಷ್ಯಳಾಗುವುದು ಅಷ್ಟರಲ್ಲೇ ಇದೆ. ಆದರೆ ಹುಡುಗಿಗೆ ತಮಾಷೆ ಗಿಮಾಷೆ ಅರ್ಥವಾಗುವುದಿಲ್ಲ. ತಿಂಡಿತೀರ್ಥ

ಏನೇ ಕೊಡಲಿ ಅವರ ಲೆಕ್ಕ ಈ ಲೆಕ್ಕದ ಜೊತೆ ಸೇರುವುದಿಲ್ಲ. ಅಸಲಿಗೆ ಅದು ಲೆಕ್ಕಕ್ಕಿಲ್ಲ. ಅವಳು ಅದನ್ನು ಲೆಕ್ಕಕ್ಕಿಟ್ಟುಕೊಳ್ಳಬೇಕೆಂಬ ಅಪೇಕ್ಷೆಯೂ ನನಗಿಲ್ಲ. ಯಜಮಾನರು ಹಾಸ್ಯ ಮಾಡುತ್ತಿದ್ದರು, 'ದತ್ತು ತಗೊಳ್ಳೋಯಾದ್ರೆ ತಗೊಂಡ್ಬಿಡು. ನಂದೇನು ತಕರಾರಿಲ್ಲ,' ಅಂತ.

* * *

ಒಂದು ದಿನ ಅಶ್ವಿನಿಯ ಜೊತೆ ಅವಳ ಅಮ್ಮನೂ ಬಂದಳು. ವಾಡಿಕೆಯ ದಿಕ್ಕು ತಪ್ಪಿಸಿ ಮಗಳ ಜೊತೆ ಬಂದಳು. ಮೂವತ್ತರ ಆಸುಪಾಸಿನ ಬಡಕಟೆ ಹೆಂಗಸು. ತಾಯಿ, ಮಗಳು ಒಂದೇ ಅಚ್ಚು. ಅದೇ ಬಣ್ಣ, ಅದೇ ಮುಖ ಲಕ್ಷಣ. ಮಗಳು, 'ತಿಂಡಿ ಕೊಡುವವರ ಮನೆ' ಎಂದು ಸುಳಿವು ಕೊಟ್ಟಿರಬೇಕು. ನಾಲ್ಕು ಕೊಡುವಲ್ಲಿ ಧಾರಾಳವಾಗಿ ಆರು ಕಂತೆ ಎಣಿಸಿದಳು. ಪರಿಚಯದ ನಗು ನಕ್ಕಳು. ದುಡ್ಡು ಕೊಡುವಾಗ ನಾನು ಅದೇ ಹಳೇರಾಗ ಎತ್ತಿದೆ,

'ಇಷ್ಟು ಸಣ್ಣ ಹುಡುಗೀನ ವ್ಯಾಪಾರಕ್ಕೆ ಹಾಕ್ಕೊಂಡಿದೀಯಲ್ಲ? ಸ್ಕೂಲಿಗೆ ಕಳಿಸ್ಬಾರ್ದಿತ್ತಾ?'

'ಇವಳಪ್ಪ ಬದುಕಿದ್ದಿದ್ರೆ ಖಂಡಿತಾ ಕಳಿಸ್ತಿದ್ದೆ...' ಉತ್ತರಿಸುವಾಗ ಅವಳ ಮುಖ ಕೊಂಚ ಕಂದಿತು. ಕಣ್ಣು ಹಸಿಯಾಗಿರಬೇಕು. ಮುಖ ಒರೆಸಿಕೊಳ್ಳುವ ನೆಪದಲ್ಲಿ ಉಟ್ಟ ಹಳೆಯ ನೈಲಾನ್ ಸೀರೆಯ ಸೆರಗಿನಿಂದ ಕಣ್ಣೊರೆಸಿಕೊಂಡಳು.

'ಬೇಕಿದ್ರೆ ನಾನೂ ಅಷ್ಟು ಇಷ್ಟು ಸಹಾಯ ಮಾಡ್ತೀನಿ. ಇದು ಕೆಲ್ಸ ಮಾಡೋ ವಯಸ್ಸಲ್ಲ. ಸ್ಕೂಲಿಗೆ ಹಾಕು...' ಅಂದೆ.

'ಬರೀ ದುಡ್ಡಿನ ವಿಷ್ಯ ಅಲ್ಲ' ಎಂದಳು. ನನಗೆ ಅಚ್ಚರಿ. ಮತ್ತೇನಪ್ಪಾ ಗುನುಗು? ಅವಳು ನಿಧಾನಕ್ಕೆ ಒಗಟು ಬಿಡಿಸಿದಳು,

'ಇವಳ ಅಪ್ಪ ಅಷ್ಟು ಬೇಗ ಸಾಯ್ತಾನೇಂತ ಯಾರಿಗೆ ಗೊತ್ತಿತ್ರೀ? ನಂಗೂ ಹಾಗೇನಾದ್ರೂ ಬರಬಾರ್ದ ಖಾಯಿಲೆ ಬಂದು ಸತ್ತುಹೋದ್ರೆ ಇವಳ ಗತಿ ಏನು? ಆಸ್ತೀನಾ, ಮನೇನಾ, ನಮ್ಗೇನುಂಟು? ತಬ್ಬಲಿ ಹುಡುಗೀನ ಯಾರು ನೋಡ್ಕಂತಾರೆ? ಸ್ಕೂಲು ಗೀಲು ನಮ್ಮಂತೋರಿಗಲ್ಲ ಅಮ್ಮಾವ್ರೇ. ಮೊದ್ಲು ಬದುಕೋಕೆ ಕಲೀಲಿ. ಅಷ್ಟಾದ್ರೆ ನಂಗೂ ಧೈರ್ಯ ಬರುತ್ತೆ...'

'ನೆಂಟ್ರು ಗಿಂಟ್ರು ಇಲ್ವೇನೇ?' ಕೇಳಿದೆ.

'ಮಸ್ತು ಜನ ಇದಾರೆ. ಬಡೋರನ್ನ ಯಾರು ಸೇರಿಸ್ಕಂತಾರೆ ಹೇಳಿ? ನಾನೇ ನೋಡಿಲ್ವಾ?'

ಒಂದು ರಾಜೀಸೂತ್ರ ಹೇಳಿದೆ,

'ಬೆಳಿಗ್ಗೆ ಸೊಪ್ಪು ಮಾರೋಕೆ ಕಳ್ಸು. ಆಮೇಲೆ ಸ್ಕೂಲಿಗೆ ಹೋಗ್ಲಿ, ನಾಕಕ್ಷರ ಕಲೀಲಿ...'

'ಅಕ್ಷರ ನಮಗೆಂತಕ್ಕೆ? ದುಡ್ಡು ಎಣಿಸೋಕೆ ಬಂದ್ರೆ ಸಾಕಪ್ಪಾ. ಅಷ್ಟು ನಾನೇ ಕಲ್ಸಿಕೊಡ್ತೀನಿ' ಹೆಂಗಸು ಬುಟ್ಟಿ ಎತ್ತಿ ತಲೆಯ ಮೇಲೆ ಇಟ್ಟುಕೊಂಡಳು. ಗುಟ್ಟು ಹೇಳುವಂತೆ ದನಿ ತಗ್ಗಿಸಿ ಹೇಳಿದಳು, 'ಒಂದ್ಸಲ ಸ್ಕೂಲಿನ ಮೆಟ್ಲು ಹತ್ತಿದ್ರೆ ಸೊಪ್ಪು ಮಾರೋಕೆ ಹೋಗ್ತಾವೇಂತೀರಾ? ಒಲ್ಲೆ ಅಂತಾವೆ. ಜೊತೆಗಾರ್ರ ಮನೇಮುಂದೆ, 'ಸೊಪ್ಪೂ...' ಅಂತ ಕೂಗ್ಕಂಡ್ಹೋಗೋಕೆ ಮರ್ಯಾದೆ ಬಿಡಲ್ಲ. ದೊಡ್ಡಸ್ತಿಕೆ ಮಾಡ್ತಾವೆ. ಅದೆಲ್ಲಾ ನಿಮ್ಮಂತೋರಿಗೆ ಗೊತ್ತಾಗಲ್ಲ ಬಿಡಿ...'

ತಾಯಿ, ಮಗಳು ಹೊರಟುಹೋದಮೇಲೂ ಅವಳ ಕೊನೆಯ ಮಾತು ನನ್ನ ತಲೆಯಲ್ಲಿ ಗುಂಯ್ಗುಡುತ್ತಲೇ ಇತ್ತು. ನಮ್ಮಂತೋರಿಗೆ ಗೊತ್ತಾಗದ ಒಳಸುಳಿಗಳು ಬದುಕಿನಲ್ಲಿ ಏನೇನಿವೆಯೋ? ಬಹುಶಃ ಅನುಭವ ಮಾತ್ರ ಅದರ ಅರಿವು ಮಾಡಿಕೊಡಬಹುದೇನೋ. ಈ ಒಳಸುಳಿಗಳು ಇಂತವರ ಪೂರ್ವಾಗ್ರಹಗಳೂ ಇರಬಹುದು. ಈ ಕುರಿತು ವಿಶ್ಲೇಷಣೆ ನಡೆಸದೆ, ಪೂರ್ವಾಗ್ರಹಗಳನ್ನು ತಾಳ್ಮೆಯಿಂದ ಹೋಗಲಾಡಿಸದೆ, ದಿಢೀರನೆ ಪರಿವರ್ತನೆ ಬಯಸಿದರೆ ಅದು ಸುಲಭ ಸಾಧ್ಯವಲ್ಲ ಎನ್ನುವ ಅರಿವಿನೊಡನೆ ಮುಂದಿನ ಹೆಜ್ಜೆಯ ಕುರಿತು ಮನಸ್ಸು ಲೆಕ್ಕ ಹಾಕತೊಡಗಿತ್ತು.


ವಸುಮತಿ ಉಡುಪ

'ಗೌರಿ', ೪ನೇ ಕ್ರಾಸ್, 'ಎ' ಬ್ಲಾಕ್, ಗಾಂಧೀನಗರ ಬಡಾವಣೆ, ಶಿವಮೊಗ್ಗ - ೫೭೭ ೨೦೧


## ಕುಪ್ಪಳ್ಳಿಯನ್ನು ಕಂಡಾಗ

ತೀರ್ಥಹಳ್ಳಿಯ ತೀರ್ಥ ತುಂಗಾನದಿ<br>
ಹದಿ ಹರೆಯ ಹಸಿರು ಲೋಕದ ತುದಿ.

ನಸುಕಲ್ಲೆ ಮುಸುಕಿದ<br>
ಮಂಜು ಹಿಮಾಲಯದಲ್ಲಿ<br>
ಹುಗಿದು ನಿಂತ ಚಿತ್ರದ ಕುಟಿರಗಳಂತೆ;<br>
ತೀರ್ಥಹಳ್ಳಿಯ ಮನೆಗಳು!<br>
ಕಣ್ಣಿಗೆಷ್ಟು ಚಂದ<br>
ಏನು ಅವುಗಳ ಸೃಷ್ಟಿಬಂಧ!

ಏರಿ ಏರಿಗೆ ಬೇರು ಕಾನದೆ<br>
ಮುಗಿಲು ಮುಟ್ಟುವ ಗಿಡಗಂಟಿಗಳು<br>
ಸಸ್ಯ ಶ್ಯಾಮಲೆಯ ಕೊರಳಿನಿಂದಲೇ<br>
ಕೂಗಿಕೊಳ್ಳುವ ಲೆಕ್ಕವಿಲ್ಲದ ಲೋಕಪಕ್ಷಿಗಳ<br>
ಕಲರವದ ಕುಪ್ಪಳ್ಳಿ<br>
ಅಪ್ರತಿಮ ಪ್ರಕೃತಿಗೆಂದೂ ಬಾರದಿರಲಿ ವಿಕೃತಿ.

ದಟ್ಟ ಮಂಜಿನಿಂದಲೇ ಮಂಗಳ ಸ್ನಾನ<br>
ಮಾಡುವ ತಾಯಿ ಭೂದೇವಿಗೆ<br>
ಅಡಿಕೆ ತೆಂಗುಗಳೇ ತಲೆದೂಗಿ<br>
ಆಗುವರು - ಕಾವಲುಗಾರರು.

ನಿಬ್ಬನದ ಕಲ್ಲಿಂದ ಬೇಟೆರಂಗಯ್ಯನವರೆಗೂ<br>
ರಂಗುರಂಗಿನ ಗಿಡಗಂಟೆಗಳಲಿ ಝೇಂಕರಿಸುವ<br>
ಪುಷ್ಪ ಪೂಜಾರಿಗಳು!

ಕವಿಶೈಲವೇ<br>
ನಮ್ಮ ಕವಿಗಳಿಗೆ ಶ್ರೀಶೈಲ(ವಾಗಲಿ)<br>
ಹಸಿರು ಕಾನನವೇ ಉಸಿರಾದ ಬದುಕು ಇಲ್ಲಿ<br>
ಬಯಸಿದವರಿಗೆಲ್ಲ ಬ್ರಹ್ಮಸೋಪಾನ ಕಟ್ಟುವದು<br>
ಯಕ್ಷಲೋಕದ ಕಕ್ಷಿದಾಟಿ :

ಬೆಳಗು<br>
ಹತ್ತಾದರೂ ಹೊತ್ತೇರಿದರೂ<br>
ಮಂಜಪ್ಪಿ ಮುದ್ದಿಸುವ ಪಕ್ರತಿಯ<br>
ಲಾಲಿಯಲಿ<br>
ಸೂರ್ಯ ಇಲ್ಲಿ ಏರಿಬರಲು<br>
ಇಲ್ಲ ಅವನಿಗೂ ಧೈರ್ಯ!

ಮಲೆನಾಡಿನ ಈ ಭೂಮಿ<br>
ಬರಿ ಮಣ್ಣಲ್ಲ<br>
ಚಿನ್ನ ರನ್ನ ರತ್ನಗರ್ಭದ ಆಗರ್ಭ<br>
ಖಣಿ

ಮಲೆನಾಡಿನ ಹುಲ್ಲು<br>
ಬರಿ ಹುಲ್ಲಲ್ಲ<br>
ಇದು ಸಂಜೀವಿನಿ ಸಸ್ಯ<br>
ವೃದ್ಧಿಸುತ್ತದೆ ಮನುಜರ ಆಯುಷ್ಯ

ಇದು ಬರಿ ಉದಯಾದ್ರಿ ಅಲ್ಲ<br>
ಸಕಲ ಸಮೃದ್ಧಿಯ ಸಹ್ಯಾದ್ರಿ<br>
ಬೆಡಗು ಬಿನ್ನಾಣದ ಹಸಿರಾದ್ರಿ!

ತೀರ್ಥಹಳ್ಳಿಯ ತೀರ್ಥ ತುಂಗಾನದಿ<br>
ಹದಿ ಹರೆಯ ಹಸಿರು ಲೋಕದ ತುದಿ


ಗವಿಸಿದ್ಧ ಎನ್. ಬಳ್ಳಾರಿ

ತಳಮಳ ವಾರಪತ್ರಿಕೆ, ಜವಾಹರ್ ಬೀದಿ, ಕೊಪ್ಪಳ

# ಪುಸ್ತಕ ಪ್ರಸರಣ ಪ್ರಿಯ ಶ್ರೀ ಕಿಟ್ಟಪ್ಪ ಗೌಡರು

**'ಹೊ**ಸತು' ಅಕ್ಟೋಬರ್ ೨೦೦೨ರ ಸಂಚಿಕೆಯಲ್ಲಿ 'ಪುಸ್ತಕ ಪ್ರೇಮಿ ಶೇಷಗಿರಿ ಮಾಸ್ತರ್' ಪರಿಚಯ ಲೇಖನ ಓದಿದಾಗ, ಅಂಥ ಇನ್ನೊಬ್ಬ ಮಾಸ್ತರ್ ನನಗೆ ನೆನಪಾಯಿತು. ಅಲ್ಲಿಗೆ ಸರಿಯಾಗಿ ಒಂದು ವರ್ಷದ ಹಿಂದೆ (ಅಕ್ಟೋಬರ್ ೨೦೦೧) ನನಗೊಂದು ಪತ್ರ ಬಂತು. ಅದನ್ನು ಬರೆದವರು ನಿವೃತ್ತ ಶಾಲಾ ಉಪಧ್ಯಾಯರಾದ ತೀರ್ಥಹಳ್ಳಿಯ ಶ್ರೀ ನಾ. ಕಿಟ್ಟಪ್ಪ ಗೌಡರು. ಆ ಪತ್ರದಲ್ಲಿ ಅವರು ''ಕುವೆಂಪು ಮನೆಯಲ್ಲಿ ತಾವು ಸಿಕ್ಕಿದಾಗ ಪುಸ್ತಕದ ('ಬೇಡಿ ಕಳಚಿತು ದೇಶ ಒಡೆಯಿತು') ಬಗ್ಗೆ ಪ್ರಸ್ತಾಪಿಸಿದ್ದೆ. ನಂತರ ನನ್ನ ಮಗ ಎನ್. ಕೆ. ರಮೇಶನಿಗೆ ಬರೆದು ಪುಸ್ತಕ ತರಿಸಿಕೊಂಡೆ. ಅರ್ಧ ಓದಿದ ಮೇಲೆ ಕೆಲವರಿಗಾದರೂ ಆ ಪುಸ್ತಕ ತಲ್ಪಿಸುವ ಯೋಚನೆ ಮಾಡಿದೆ. ನನ್ನ ಸ್ನೇಹಿತರೊಬ್ಬರು ಮನೆಗೆ ಬಂದರು. ಆಗ ತಾನೆ ಪುಸ್ತಕ ಓದಿ ಮೇಜಿನ ಮೇಲಿಟ್ಟಿದ್ದೆ. ಅವರು ೧-೨ ಪೇಜು ಓದಿ 'ತುಂಬಾ ಚೆನ್ನಾಗಿದೆ. ಓದಿ ಆದಮೇಲೆ ನನಗೆ ಕೊಡು' ಎಂದರು. ನಾನು : 'ಇದೊಂದು ವಿಷಯದಲ್ಲಿ ನಾನು ಸಹಕರಿಸಲಾರೆ' ಎಂದು ಹೇಳಿದೆ. ಈ ರೀತಿ ಅವರು ಕೇಳಿದರೆ ಸಹಕರಿಸಲು ಸಾಧ್ಯವೆ ?'' – ಹೀಗೆ ಬರೆದಿದ್ದಾರೆ : ''ನನಗೆ ೧,೦೮೦ ರೂ. ಕಮಿಷನ್ ಬಂದಿದೆ. ಇದಕ್ಕೆ ಸ್ವಲ್ಪ ಹಣ ಸೇರಿಸಿ ೨,೦೦೦/- ರೂ. ಮೊತ್ತಮಾಡಿ ನಾನು ಕನ್ನಡ ಸಾಹಿತ್ಯ (ತಾಲ್ಲೂಕು) ಪರಿಷತ್ತಿಗೆ ಕೊಟ್ಟು (ಒಂದು ಲಕ್ಷ ರೂ.) ದತ್ತಿ ಹಣಕ್ಕೆ ಸೇರಿಸಿದ್ದೇನೆ. ಈ ಎರಡು ಸಾವಿರ ರೂ. ಮೊತ್ತದ ಬಡ್ಡಿಯನ್ನು ಪ್ರತಿವರ್ಷ ತಾಲೂಕು ಮಟ್ಟದಲ್ಲಿ ೭ನೆಯ ತರಗತಿ ಪರೀಕ್ಷೆಯಲ್ಲಿ ಕನ್ನಡದಲ್ಲಿ ಅತಿ ಹೆಚ್ಚು ಅಂಕ ಗಳಿಸಿದ ವಿದ್ಯಾರ್ಥಿಗೆ ನಗದು ಬಹುಮಾನವನ್ನು ಆ ಶಾಲೆಗೇ ಹೋಗಿ ವಿತರಣೆ ಮಾಡುವಂತೆ ಪರಿಷತ್ತನ್ನು ಕೇಳಿಕೊಂಡಿದ್ದೇನೆ.''

ಇದೀಗ ಗಮನಿಸಬೇಕಾದ ಸಂಗತಿ ಶ್ರೀ ಕಿಟ್ಟಪ್ಪ ಗೌಡರು ಮನೆಮನೆಗೆ ಪುಸ್ತಕ ವಿತರಣೆ ಮಾಡುವುದರ ಜೊತೆಗೆ ಕನ್ನಡದ ಬೆಳವಣಿಗೆಗೆ ದತ್ತಿ ಹಣವನ್ನು ಕೊಟ್ಟ ದಾನಿಗಳೆಂಬುದು ಈ ಕಾಲದಲ್ಲಿ ಹೆಚ್ಚಿನ ಸಂಗತಿ. ಅವರು ೧೯೭೮ರಲ್ಲಿ ನಿವೃತ್ತರಾದಾಗ ಅವರಿಗೆ ಬಂದಿದ್ದ ನಿವೃತ್ತಿ ಪರಿಹಾರ ಧನ ಸರ್ಕಾರದಿಂದ ಬಂದಿದ್ದ ಇಪ್ಪತ್ತು ಸಾವಿರ ರೂಪಾಯಿಗಳನ್ನು ಠೇವಣಿ ಇಟ್ಟು ಅದು ೮೦ ಸಾವಿರ ಆದ ಮೇಲೆ ಅದಕ್ಕೆ ಮತ್ತೆ ೨೦ ಸಾವಿರ ಸೇರಿಸಿ ಒಂದು ಲಕ್ಷ ಹಣವನ್ನು ತೀರ್ಥಹಳ್ಳಿ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತಿಗೆ ದತ್ತಿ ನಿಧಿ ಅರ್ಪಿಸಿದ್ದಾರೆ ! ಅವರು ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ಉಪಾಧ್ಯಾಯ ವೃತ್ತಿ ಸೇರಿದರೆಂದ ಮೇಲೆ ಅವರು ಮಲೆನಾಡು ಅಡಿಕೆ ತೋಟದ ಮಾಲಿಕರಾಗಿಲ್ಲಿಕ್ಕಿಲ್ಲ ಎಂದು ಊಹಿಸುವುದರಲ್ಲಿ ತಪ್ಪಿರಲಾರದು. ಆದರೂ ಅವರಿಗೆ ಪುಸ್ತಕ ವಿತರಣೆಯ 'ಹುಚ್ಚು' ಮತ್ತೆ ದತ್ತಿ ನಿಧಿ ಅರ್ಪಿಸುವ ಸಾಹಸದ ಕಾರಣ ಏನಿರಬಹುದು ? ಅದಕ್ಕೆ ಕಾರಣವನ್ನು ಕಿಟ್ಟಪ್ಪಗೌಡರು ಬರೆದ ದಿನಾಂಕ ೧-೧೦-೨೦೦೧ರ ಪತ್ರದ ಈ ಕೆಳಗಿನ ಮಾತಿನಲ್ಲಿ ಕಾಣಬಹುದು :

''ಅಮೂಲ್ಯ ಗ್ರಂಥವನ್ನು ಒಬ್ಬ ಉಪಾಧ್ಯಾಯ ಓದಿ ಅರ್ಥಮಾಡಿಕೊಂಡರೆ ಸಾವಿರಾರು ಮಂದಿ ವಿದ್ಯಾರ್ಥಿಗಳಿಗೆ ಆದರಿಂದ ಪ್ರಯೋಜನವಾಗುತ್ತದೆ ಎಂಬ ಅಲ್ಪಜ್ಞಾನ ಅವರಿಗೆ ಇಲ್ಲದಿರುವುದು ವಿಷಾದನೀಯ.... ಬರೀ ಪಠ್ಯ ಪುಸ್ತಕಕ್ಕೇ ತಮ್ಮ ಜ್ಞಾನವನ್ನು ಸೀಮಿತಗೊಳಿಸಿಕೊಂಡು ಮುಂದಿನ ತಿಂಗಳು ೧ನೇ ತಾರೀಖನ್ನೇ ನಿರೀಕ್ಷಿಸುವ ಇಂಥ ಉಪಾಧ್ಯಾಯರ ಸಂಖ್ಯೆ ಶೇ. ೭೫ರಷ್ಟಿದೆ. ಉಪಾಧ್ಯಾಯರು ಆದರ್ಶ ಜೀವನದ ಕಲ್ಪನೆಯನ್ನು ಬಿತ್ತದೆ ಇರುವುದರಿಂದ.... ಸಮಾಜ ಘಾತಕರಾಗುತ್ತಿರುವುದು ಎಂದು ನನ್ನ ಅನಿಸಿಕೆ.'' ಶ್ರೀ ಕಿಟ್ಟಪ್ಪ ಗೌಡರಿಗೆ ಪುಸ್ತಕ ವಿತರಣೆಯ ಬಗ್ಗೆ ಬರೆದಿರುವ 'ದೆವ್ವ'ದ ಕಾರಣ ಇಲ್ಲಿದೆ. ಗೌಡರ ಈ ಹವ್ಯಾಸ ಇತ್ತೀಚೆಗೆ ನಿವೃತ್ತರಾದ ಮೇಲೆ ಕೆಲಸವಿಲ್ಲದೆ ಬೇಸರ ನೀಗಲು ಹಚ್ಚಿಕೊಂಡದ್ದಲ್ಲ. ಅವರು ನೌಕರಿಯಲ್ಲಿ ಇದ್ದಾಗಲೂ ಪುಸ್ತಕ ವಿತರಣೆಯ ಬಗ್ಗೆ ತಲೆಕೆಡಿಸಿ ಕೊಂಡವರು. ೧೯೭೨ರಲ್ಲಿ - ಎಸ್. ವಿ. ಪರಮೇಶ್ವರ ಭಟ್ಟರು, ತಾವು ಅನುವಾದಿಸಿದ ಕಾಳಿದಾಸನ ಸಮಗ್ರ ಕೃತಿಗಳನ್ನು 'ಕನ್ನಡ ಕಾಳಿದಾಸ ಮಹಾಸಂಪುಟ' ಎಂಬ ೧೧೯೦ ಪುಟಗಳ ಬೃಹತ್ ಗ್ರಂಥವನ್ನು ಸಿಂಡಿಕೇಟ್ ಬ್ಯಾಂಕಿನಲ್ಲಿ ಸಾಲ ಮಾಡಿ ತಾವೇ ಪ್ರಕಟಿಸಿದರು.

ಕಿಟ್ಟಪ್ಪ ಗೌಡರು ಅವರ ವಿದ್ಯಾ ಗುರುಗಳಾದ ಎಸ್. ವಿ. ಪರಮೇಶ್ವರ ಭಟ್ಟರ ಈ ಮಹಾ ಸಂಪುಟದ ಸುಮಾರು ಪ್ರತಿಗಳನ್ನು ಮಾರಿ, ಅವರನ್ನು ನಮ್ಮ ಶಾಲೆಗೆ ಕರೆಸಿ ಸನ್ಮಾನಿಸಿ, ಅವರ ದುಡ್ಡನ್ನೇ ಅವರಿಗೆ ಅರ್ಪಿಸಿದ್ದರು... ಕೆಲವು ದಿನಗಳ ನಂತರ ಭಟ್ಟರ ಮತ್ತು ತನ್ನ ಗುರುಗಳಾಗಿದ್ದ ಕಮಗೋಡು ನರಸಿಂಹಶಾಸ್ತ್ರಿಗಳಿಗೆ ಸನ್ಮಾನ ಮಾಡುವುದರ ಸಂಬಂಧ... ಪುಸ್ತಕವನ್ನೂ ಭಟ್ಟರ ಜತೆಗೂಡಿ ಪ್ರಕಟಿಸಿದರು.

ಗೌಡರು ಈ ಪುಸ್ತಕ ವಿತರಣೆ ಇನ್ನೂ ವ್ಯಾಪಕವಾಗ ಬೇಕೆಂದು ಬಯಸುತ್ತಾರೆ. ಪರಿಷತ್ತಿನ 'ಮನೆಗೊಂದು ಪುಸ್ತಕ ಯೋಜನೆ' ಯಶಸ್ವಿಯಾದರೆ - ಒಂದೊಂದು ಮನೆಯಲ್ಲೂ ಒಂದು ಮಿನಿ - ಲೈಬ್ರರಿ ಸ್ಥಾಪನೆ ಆಗುತ್ತದೆ. ಈ ವ್ಯವಸ್ಥೆಯಿಂದ ಆ ಮನೆಯ ಮಕ್ಕಳಿಗೆ ಓದುವ ಅಭ್ಯಾಸ, ಕನ್ನಡದ ಮೇಲಿನ ಪ್ರೀತಿ ಬೆಳೆಯುತ್ತದೆ.

ಶ್ರೀ ಕಿಟ್ಟಪ್ಪ ಗೌಡರು ತರುವಾಯ ನವಕರ್ನಾಟಕದಿಂದ 'ಬೇಡಿ ಕಳಚಿತು ದೇಶ ಒಡೆಯಿತು' ಹನ್ನೆರಡು ಪ್ರತಿಗಳನ್ನು ಹಣ ಕೊಟ್ಟು ತರಿಸಿಕೊಂಡು ಅವುಗಳನ್ನು ವಿತರಣೆ ಮಾಡಿದ ವಿವರಗಳನ್ನು ಬರೆದರು.

''ನಾನು ಪುಸ್ತಕಗಳನ್ನು ತಲಪಿಸುವ ಕೆಲಸದಲ್ಲಿದ್ದೆ. ಕೊಂಡವರಲ್ಲಿ ಬಹುಜನ ನನ್ನ ಶಿಷ್ಯರು. ಸ್ವಲ್ಪವಾದರೂ ಓದುವ ಹವ್ಯಾಸವನ್ನು ಬೆಳೆಸಿಕೊಂಡವರು... ಪಕ್ಕಾ ರೈತರಾಗಿದ್ದಾರೆ. ಕುವೆಂಪು ಹೇಳಿದಂತೆ 'ಮಲೆನಾಡಿನಲ್ಲಿ – ಊರೆಂದರೊಂದೆ ಮನೆ'. ಒಂದು ಪುಸ್ತಕ ತಲುಪಿಸಲು ಬಸ್ಸಿನಿಂದ ಇಳಿದು ಕನಿಷ್ಠ ೩ ಮೈಲು ನಡೆಯ ಬೇಕಾಯಿತು... ೨-೩ ಕಡೆ ಮಾತ್ರ ಆಟೋ ಮಾಡಿಕೊಂಡು ಹೋಗಿ ತಲ್ಪಿಸಿದೆ... ಇನ್ನುಳಿ ಜನರನ್ನು ಹುಡುಕಿಳಿ ಪುಸ್ತಕಗಳನ್ನು, ತರಿಸುವ ಯೋಚನೆಯಲ್ಲಿದ್ದೇನೆ...

ಶ್ರೀ ಕಿಟ್ಟಪ್ಪ ಗೌಡರು ೨-೧೨-೦೨ರಂದು ಈ ರೀತಿ ಬರೆದರು :

''ಪುನಃ ಎರಡು ಪುಸ್ತಕ ತರಿಸಿಕೊಂಡೆ. ಈ ವರ್ಷದ ಸ್ವಾತಂತ್ರ್ಯ ದಿನಾಚರಣೆಯ ಸಂಬಂಧ ಹಳ್ಳಿಯೊಂದರಲ್ಲಿ ಮಾತನಾಡುತ್ತಾ ಪುಸ್ತಕದ ಬಗ್ಗೆ ಪ್ರಸ್ತಾಪಿಸುತ್ತಾ 'ಈಗಿನ ಪೀಳಿಗೆಯವರಿಗೆ ೫೫ ವರ್ಷಗಳ ಹಿಂದೆ ನಡೆದ ಸ್ವಾತಂತ್ರ್ಯ ಚಳವಳಿಯ ಅರಿವು ಇಲ್ಲ. ಈ ಪುಸ್ತಕ ಓದಿ' ಎಂದು ಸಲಹೆ ಮಾಡಿದೆ... ಈ ದಿನ ನವಕರ್ನಾಟಕ ಪಬ್ಲಿಕೇಷನ್ಸ್ ಎರಡು ಪುಸ್ತಕ ಕಳಿಸುವಂತೆ ಬರೆದಿದ್ದೇನೆ.''

ಇಷ್ಟೆಲ್ಲ ಕಷ್ಟ ಪಡುವ ಈ ಪುಸ್ತಕ ಪ್ರಚಾರಕ ಕಿಟ್ಟಪ್ಪ ಗೌಡರಿಗೆ ಇದರಿಂದ ಯಾವ ಲಾಭ ? ಅವರ ಪತ್ರದಲ್ಲಿ

ಶ್ರೀ ಕಿಟ್ಟಪ್ಪ ಗೌಡರಂಥವರು ತಾಲೂಕಿಗೆ ಒಬ್ಬರಾದರೂ ಇದ್ದುದಾದರೆ ಸರ್ಕಾರದ ನೆರವಿಗಾಗಿ ಪ್ರಕಾಶಕರು ಪರಿತಪಿಸಬೇಕಾಗಿಲ್ಲ. ಸರ್ಕಾರವೂ ಮಾಡದ ಕೆಲಸವನ್ನು ಇಂಥವರು ಮಾಡಬಲ್ಲರು ಎಂಬುದಕ್ಕೆ ನವಕರ್ನಾಟಕ ಪಬ್ಲಿಕೇಷನ್ಸ್ ಒಂದು ಸಂಗತಿ ತಿಳಿಸಿದರು. ಕನ್ನಡ ಪುಸ್ತಕ ಪ್ರಾಧಿಕಾರ 'ಬೇಡಿ ಕಳಚಿತು' ಪುಸ್ತಕದ ೧೧ ಪ್ರತಿಗಳನ್ನು ಶೇಕಡಾ ೨೦ ಕಮಿಷನ್ ದರದಲ್ಲಿ ಕೊಂಡುಕೊಳ್ಳುವುದಾಗಿ ಅವರು ನಿರ್ಧರಿಸಿದ 'ಬೆಲೆ'ಯನ್ನು ಸೂಚಿಸಿದ್ದರು. ಒಬ್ಬ ನಿವೃತ್ತ ಶಿಕ್ಷಕ ಹದಿನಾಲ್ಕು ಪ್ರತಿಗಳನ್ನು ಕೊಂಡು ವಿತರಣೆ ಮಾಡಿದರೆ ಘನ ಸರ್ಕಾರ ೧೧ ಪ್ರತಿಗಳನ್ನು ಕೊಳ್ಳುವ ಕೃಪೆ ಮಾಡಿತು !! ಕಿಟ್ಟಪ್ಪ ಗೌಡರಂಥ ಪುಸ್ತಕಪ್ರಿಯರ ಸಂತತಿ ಬೆಳೆಯಬೇಕು.

**ಕೋ. ಚೆನ್ನಬಸಪ್ಪ**
ನಂ. ೧೨೭, ವೆಸ್ಟ್ ಆಫ್ ಕಾರ್ಡ್ ರೋಡ್
ರಾಜಾಜಿನಗರ, ಬೆಂಗಳೂರು - ೫೬೦ ೦೮೬

# ಪ್ರಾಚೀನ ಭಾರತದ ಭೌತವಾದಿ ಪಂಥಗಳು

**೪. ಚಾರ್ವಾಕ – ಲೋಕಾಯತರ ಭೌತವಾದ**




ಬೃಹಸ್ಪತಿ (ಕ್ರಿ. ಪೂ. ೭-೬ನೇ ಶತಮಾನ) ಈ ದಾರ್ಶನಿಕ ಪಂಥದ ಸಂಸ್ಥಾಪಕನೆಂದೂ ಅದರ ಸೂತ್ರಗಳ ಕರ್ತನೆಂದೂ ಭಾವಿಸಲಾಗಿದೆ. ಆದರೆ ಭಾರತೀಯ ಭೌತವಾದದ ಮೂಲ ವಿಚಾರಗಳು ಇವನಿಗೂ ಮುನ್ನ ಇದ್ದ ಭಾರತೀಯ ದಾರ್ಶನಿಕ ಪಂಥಗಳೆಲ್ಲವುಗಳಲ್ಲೂ ಅಂತರ್ಗತವಾಗಿದ್ದವೆಂದೇ ಹೇಳಬಹುದು. ಭೌತವಾದಿ ಪಂಥದ ಮುಖ್ಯಾಂಶಗಳನ್ನು ಹೀಗೆ ಸಂಗ್ರಹಿಸಬಹುದು :

- ಮಾನವನೂ ಒಂದು ಭಾಗವಾಗಿರುವ ಈ ಬಾಹ್ಯ ಜಗತ್ತು ವಸ್ತುನಿಷ್ಠವಾಗಿ ಅಸ್ತಿತ್ವದಲ್ಲಿದೆ. ಅದು ಅವನ ಮಿದುಳಿನ ಉತ್ಪನ್ನವೇನಲ್ಲ, ಅದು ಪ್ರಜ್ಞೆಯಿಂದ ಹೊರಗೆ ಸ್ವತಂತ್ರವಾಗಿ ಅಸ್ತಿತ್ವದಲ್ಲಿದೆ.
- ಬಾಹ್ಯಜಗತ್ತು ಕೆಲವು ನಿಯಮಗಳಿಗೆ ಅನುಸಾರವಾಗಿ ಕಾರ್ಯ ಜರುಗಿಸುತ್ತದೆ. ಈ ನಿಯಮಗಳನ್ನು ಭೌತಕ್ರಿಯೆಯಿಂದಷ್ಟೆ ಬದಲಿಸಲು ಸಾಧ್ಯ. ವಿಚಾರಗಳ ಮೂಲಕ, ಮಂತ್ರತಂತ್ರಗಳ ಮೂಲಕ ಅಥವಾ ಪ್ರಾರ್ಥನೆಯ ಮೂಲಕ ಬದಲಿಸಲು ಸಾಧ್ಯವಿಲ್ಲ.
- ನಿಸರ್ಗಾತೀತ ಅನ್ನುವಂಥ ಶಕ್ತಿಗಳ್ಯಾವುವೂ ಅಸ್ತಿತ್ವದಲ್ಲಿಲ್ಲ. ಈ ಜಗತ್ತು ತಾನೇತಾನಾಗಿ ವಿಕಾಸಗೊಳ್ಳುತ್ತದೆಯೇ ಹೊರತು ಯಾವುದೇ ಬಾಹ್ಯ ವಸ್ತುವಿನ ಅಥವಾ ಶಕ್ತಿಯ ಹಸ್ತಕ್ಷೇಪದಿಂದಲ್ಲ.
- ಮನುಷ್ಯನು ತನ್ನ ಇಂದ್ರಿಯಗಳ ಮೂಲಕ ಪಡೆಯುವ ಬಾಹ್ಯ ಜಗತ್ತಿನ ವಸ್ತುಗಳ ಹಾಗೂ ವಿದ್ಯಮಾನಗಳ ತಿಳಿವಳಿಕೆಯಷ್ಟೆ ನಿಜವಾದ ಜ್ಞಾನದ ಆಕರ.
- ಜ್ಞಾನವೆಂಬುದು ಮನುಷ್ಯನಲ್ಲಿ ಹುಟ್ಟಿನೊಂದಿಗೇ ಅಂತರ್ಗತವಾಗಿ ಬಂದ ಅಥವಾ ಅಂತರ್ಬೋಧೆಯಿಂದ ಜನಿತವಾದ (ಮಿಥ್ಯಾತ್ಮಕವಾದ), ಇಲ್ಲವೇ ಪ್ರತ್ಯೇಕ ಅಸ್ತಿತ್ವ ಪಡೆದ ವಿದ್ಯಮಾನವಲ್ಲ.
- ಮನುಷ್ಯ ಸ್ವಭಾವವನ್ನೂ ಅವನ ಕಾರ್ಯ ಚಟುವಟಿಕೆಗಳನ್ನೂ ನಿರ್ಧರಿಸುವಂತಹುದು ಅವನ ಬಾಳ ಪರಿಸ್ಥಿತಿಗಳೇ ಹೊರತು ಯಾವುದೇ ದೈವಿಕ ಶಕ್ತಿಯಲ್ಲ.
- ಮಧ್ಯಯುಗದ ಅಂತೆಯೇ ಆಧುನಿಕ ಕಾಲದ ಭಾರತದ ದಾರ್ಶನಿಕ ಪಂಥಗಳೆಲ್ಲವುಗಳಲ್ಲೂ ಈ ವಿಚಾರಗಳಲ್ಲಿ ಒಂದಲ್ಲ ಒಂದು, ಒಂದಲ್ಲ ಒಂದು ರೂಪದಲ್ಲಿ ವ್ಯಕ್ತಗೊಂಡಿದೆ.

ಬೃಹಸ್ಪತಿಯೇ ಪ್ರಾಚೀನ ಭಾರತೀಯ ಭೌತವಾದಕ್ಕೆ ಒಂದು ವಿಶಿಷ್ಟ ರೂಪ ನೀಡಿದುದು, ಕಣಾದನು ವೈಶೇಷಿಕದ ಮಹಾನ್ ಬೋಧೆಗಳನ್ನು ರಚಿಸಿದ, ಗೋತಮನು ನ್ಯಾಯಶಾಸ್ತ್ರಗಳನ್ನು ಸಂಕಲಿಸಿದ, ಕಪಿಲನು ಸಾಂಖ್ಯ ಶಾಸ್ತ್ರಗಳನ್ನು ಬರೆದ, ಜೈಮಿನಿಯು ನಾಸ್ತಿಕ ವಾದದ ಸೂತ್ರಗಳನ್ನು ರಚಿಸಿದ. ಭಿಷಣ್ ಎಂಬುವನು ಚಾರ್ವಾಕ ಬೋಧೆಯನ್ನು ಪ್ರಚಾರ ಮಾಡಿದ, ವಿಷ್ಣುವೇ ರಾಕ್ಷಸರನ್ನು ಹಿಮ್ಮೆಟ್ಟಿಸಲು ಬುದ್ಧನ ಅವತಾರವೆತ್ತಿ ತೀರ ಅಧಾರ್ಮಿಕವೆನಿಸಿದ ಬೌದ್ಧಮತ ಸಿದ್ಧಾಂತವನ್ನು ಬೋಧಿಸಿದ – ಎಂದು ಅತ್ಯಂತ ಪುರಾತನ ಪುರಾಣಗಳಲ್ಲೊಂದಾದ ಪದ್ಮ ಪುರಾಣ ತಿಳಿಸುತ್ತದೆ.

ಭಿಷಣನ ಹೆಸರು ಮಹಾಭಾರತದ ಶಾಂತಿ ಹಾಗೂ ಶಲ್ಯ ಪರ್ವಗಳಲ್ಲೂ ಮನುವಿನ ಬರವಣಿಗೆಗಳಲ್ಲೂ ನಮೂದಿತವಾಗಿದೆ. ಸಮಾಜದ ಅತ್ಯಂತ ಬಡ ಜನರ ಭಾವನೆಗಳನ್ನೂ ಆಸೆ ಆಕಾಂಕ್ಷೆಗಳನ್ನೂ ವ್ಯಕ್ತಪಡಿಸುತ್ತ ಬಿಷಣನು ಬ್ರಾಹ್ಮಣವಾದವನ್ನು, ವೈದಿಕ ಧರ್ಮವನ್ನು ಮತ್ತು ಪುರೋಹಿತಶಾಹಿ ಸಿದ್ಧಾಂತವನ್ನು ತೀವ್ರವಾಗಿ ಖಂಡಿಸಿದ್ದಾನೆ. ವೇದಗಳ ಕರ್ತೃಗಳು ಕಪಟಿಗಳು, ಅರ್ಥರಹಿತ ಮಾತುಗಳ ಮೋಡಿಯಿಂದ ಸರಳ ಜನರನ್ನು ಮರುಳುಗೊಳಿಸಿ ಅವರ ಖರ್ಚಿನಲ್ಲಿ ತಾವೇ ಭೋಗಜೀವನ ನಡೆಸುತ್ತಾರೆ ಎಂದವನು ಬ್ರಾಹ್ಮಣಶಾಹಿಯನ್ನು ಕಟುವಾಗಿ ಟೀಕಿಸಿದ. ಮೃತರಾದವರು ಮಣ್ಣು ಪಾಲಾಗುತ್ತಾರೆ, ಅವರಿಗೆ ಪಿಂಡದಾನ ಮಾಡುವುದರಲ್ಲಿ ಏನು ಅರ್ಥವಿದೆ ? ಆರಿಹೋದ ದೀಪಕ್ಕೆ ಎಣ್ಣೆ ಸುರಿದರೆ ಅದು ಮತ್ತೆ ಉರಿಯುವುದೆ ? ಮೃತರಿಗೆ ಆಹಾರ ನೀಡಬೇಕು ಅನ್ನುವುದಾದರೆ ಈ ಪುರೋಹಿತರಿಗೇಕೆ ಅನ್ನದಾನ? ಒಂದು ಹಳ್ಳಿಗೆ ಆಹಾರ ನೀಡಬೇಕಾದಾಗ ಅದನ್ನು ಇನ್ನೊಂದು ಹಳ್ಳಿಗೆ ನೀಡಿದರೆ ಆದೀತೆ ? ಎಂದವನು ಟೀಕಿಸಿದ.

ಚಾರ್ವಾಕರು ದೇವರ ಅಸ್ತಿತ್ವವನ್ನು ಅಲ್ಲಗಳೆದರು. ಮಣ್ಣು, ನೀರು, ಬೆಂಕಿ, ಗಾಳಿ ಈ ನಾಲ್ಕು ಭೌತಧಾತುಗಳಷ್ಟೆ ನಾನಾ ಪ್ರಮಾಣಗಳಲ್ಲಿ ನಾನಾ ರೀತಿಗಳಲ್ಲಿ ಬೆರೆತು ಪ್ರಕೃತಿಯ ಭೌತ ಹಾಗೂ ಅಭೌತ ವಸ್ತುಗಳನ್ನೆಲ್ಲ ಉಂಟುಮಾಡುತ್ತವೆ. ಆತ್ಮವು ಶರೀರದಿಂದ ಹೊರಗೆ ಇರಲಾರದು. ಚೇತನ ಅಥವಾ ಪ್ರಜ್ಞೆಯೂ ಅಚೇತನ ವಸ್ತುಗಳಿಂದಲೇ ಅವು ನಿರ್ದಿಷ್ಟ ಪರಿಸ್ಥಿತಿಗಳಲ್ಲಿ ವಿಶಿಷ್ಟ ರೂಪದಲ್ಲಿ ಸಂಯೋಗಗೊಳ್ಳುವುದರ ಫಲವಾಗಿ, ಹುಟ್ಟುವಂತಹುದು. ಮನುಷ್ಯ ಮರಣಿಸಿದಾಗ ಅವನ ಭೌತಶರೀರವೂ ಅಭೌತ ಚೇತನವೂ ನಾಶಗೊಳ್ಳುತ್ತದೆ. ಭಿಷಣನಂತೆ ಮತ್ತೊಬ್ಬ ಚಾರ್ವಾಕ ಕೇಶಕಂಬಲಿನ್‌ನೂ (ಕ್ರಿ.ಪೂ. ೬ನೆಯ ಶತಮಾನ) ಸಾವಿನ ನಂತರ ಬುದ್ಧಿವಂತನಾಗಲೀ, ಮೂರ್ಖನಾಗಲೀ ಯಾರೂ ಅಸ್ತಿತ್ವದಲ್ಲಿರಲಾರರು, ಎಂದೇ ವಾದಿಸಿದ, ಪ್ರತಿಪಾದಿಸಿದ.

ಭೌತವಾದದ ವಿರೋಧಿಗಳು (ಹೆಚ್ಚಾಗಿ ಪುರೋಹಿತರೂ ಬ್ರಾಹ್ಮಣರೂ) ಭೌತವಾದಿಗಳನ್ನು ದೈಹಿಕ ಹಿಂಸೆ ಉಪದ್ರವಗಳಿಗೆ ಈಡುಮಾಡಿದರಷ್ಟೆ ಅಲ್ಲ ಅವರ ಗ್ರಂಥಗಳನ್ನೆಲ್ಲ ಸುಟ್ಟು ಹಾಕಿದರು. ಹಾಗಾಗಿ ಚಾರ್ವಾಕರ ಬಗೆಗೆ ಹಾಗೂ ಅವರ ಬೋಧೆಯ ಬಗೆಗೆ ತಿಳಿವಳಿಕೆ ನಮಗೀಗ ಅವರ ವಿರೋಧಿಗಳು ಅವರನ್ನು ನಗೆಪಟಾಲು ಮಾಡಿ ಬರೆದಂಥ ಗ್ರಂಥಗಳಿಂದಷ್ಟೆ ಲಭ್ಯ. ಚಾರ್ವಾಕರ ಬೋಧೆಯ ಮುಖ್ಯಾಂಶಗಳನ್ನು ಹೀಗೆ ಸಂಗ್ರಹಿಸಬಹುದು.

೧) ಅಸ್ತಿತ್ವದಲ್ಲಿರುವ ಎಲ್ಲಕ್ಕೂ ನಾಲ್ಕು ಮಹಾಭೂತಗಳೇ -- ಬೆಂಕಿ, ಮಣ್ಣು, ನೀರು ಹಾಗೂ ಗಾಳಿ -- ಆಧಾರ. ಒಂದು ಅಭಿಪ್ರಾಯದ ಪ್ರಕಾರ, ಅವರ ಹೆಸರು ಚಾರ್ವಾಕ ಎಂಬುದು ಇದರಿಂದಲೇ ಬಂದುದು – ಚಾರು (ನಾಲ್ಕು) ವಾಕ್ (ಮಾತು) – ಈ ಮಹಾಭೂತಗಳು ಸ್ವಭಾವಸಿದ್ಧ ಗುಣದಿಂದ ತಾವೇ ತಾವಾಗಿ ಕಾರ್ಯ ಜರುಗಿಸುತ್ತವೆ.

೨) ಇಹ 'ಲೋಕ'ವಷ್ಟೆ ಉಂಟು, ಪರ ಅಥವಾ ಮರಣಾನಂತರ 'ಲೋಕ' ಎಂಬುದಿಲ್ಲ (ಲೋಕಾಯತ ಎಂಬ ಹೆಸರು ಈ 'ಲೋಕ' ಪದದಿಂದಲೇ ಬಂದುದು ಎಂಬುದು ಕೆಲವರ ಅಭಿಮತ). ಸಾವಿನ ನಂತರ ಜೀವ 'ಅಲ್ಲಿ' ಮುಂದುವರಿಯುವುದೂ ಇಲ್ಲ, 'ಇಲ್ಲಿ' ಪುನರ್‌ಜನ್ಮ ತಳೆಯುವುದೂ ಇಲ್ಲ. ಆದ್ದರಿಂದ ಜೀವವಿದ್ದಾಗ ಆನಂದದಿಂದ ಬಾಳಬೇಕು. ಸಾಲ ಮಾಡಿಯಾದರೂ ತುಪ್ಪದ ಸವಿ ಉಣಬೇಕು. ಯಾರೂ ಮೃತ್ಯುವಿನ ಹದ್ದಿನ ಕಣ್ಣಿನಿಂದ ಪಾರಾಗಲಾರರು. ಒಮ್ಮೆ ಈ ಕಾಯವನ್ನು ಸುಟ್ಟು ಹಾಕಿದ ನಂತರ ಅದು ಎಂದಾದರೂ ಮತ್ತೆ ಬರುವುದು ಹೇಗೆ ಸಾಧ್ಯ ? ಮನುಷ್ಯ ಸತ್ತಾಗ ಅವನ ಒಡಲನ್ನು ರೂಪಿಸಿದ ನಾಲ್ಕು ಮಹಾಭೂತಗಳಲ್ಲಿ ಮಣ್ಣು ಪೃಥ್ವಿಗೆ, ನೀರು ಜಲಕ್ಕೆ, ಬೆಂಕಿಯು ಅಗ್ನಿಗೆ, ಗಾಳಿಯು ವಾಯುವಿಗೆ, ಪ್ರಜ್ಞೆಯು ಆಕಾಶಕ್ಕೆ ಹಿಂದಿರುಗುತ್ತವೆ.

೩) ನಿಸರ್ಗಾತೀತ (ದೈವಿಕ) ಶಕ್ತಿಗಳೆಂಬುದು ಇಲ್ಲ. ದೇವರು, ಬಡವರನ್ನು ಮೋಸಗೊಳಿಸುವ ಶ್ರೀಮಂತರ ಸೃಷ್ಟಿ.

೪) ಆತ್ಮ ಎಂಬುದು ಧಾರ್ಮಿಕ ಪಂಥಾನುಯಾಯಿಗಳು ಅವರ ಹಿಂಬಾಲಕ ತತ್ತ್ವಜ್ಞಾನಿಗಳೂ ಭಾವಿಸುವಂಥ ಅರ್ಥದಲ್ಲಿ ಅಸ್ತಿತ್ವದಲ್ಲಿಲ್ಲ. ಭೌತವಸ್ತುವಿನಿಂದ ಸ್ವತಂತ್ರವಾಗಿ ಅಸ್ತಿತ್ವವುಳ್ಳದ್ದೆಂದು ಅವರು ಹೇಳುವ ಆತ್ಮವಲ್ಲ, ಆದರೆ ಭೌತವಸ್ತುವೇ ಚಿಂತನೆ ಮಾಡುವಂತಹುದು.

೫) ಪೂರ್ವಜನ್ಮದ ಕರ್ಮ, ಕರ್ಮಫಲ, ಎಂಬುದೆಲ್ಲ ಧಾರ್ಮಿಕ ಜನರ ಹಾಗೂ ಭಾವನಾವಾದಿ ದಾರ್ಶನಿಕರ ಕಲ್ಪನೆಗಳಷ್ಟೆ. ನಾವು ಅನುಭವಿಸುವ ಕಷ್ಟಕಾರ್ಪಣ್ಯಗಳಿಗೆ ಈ ಸಮಾಜದಲ್ಲಿನ ಅನ್ಯಾಯಗಳು ಮಾನವ ಸ್ವಭಾವದ ವೈಪರೀತ್ಯಗಳು ಕಾರಣವೇ ಹೊರತು ಯಾವುದೋ ಪೂರ್ವಜನ್ಮದ 'ಪಾಪ'ಕೃತ್ಯಗಳಲ್ಲ, ಅವು ಅವುಗಳಿಂದ ಪೂರ್ವನಿರ್ಧಾರಿತವಾದುವಲ್ಲ.

೬) ಇಂದ್ರಿಯ ಗ್ರಾಹ್ಯ ಜ್ಞಾನವಷ್ಟೆ ನಿಜವಾದ ಜ್ಞಾನ. ಇಂದ್ರಿಯಗಳು ನೇರವಾಗಿ ಗ್ರಹಿಸಬಲ್ಲಂಥವಷ್ಟೆ ಅಸ್ತಿತ್ವದಲ್ಲಿರುತ್ತವೆ. ಇಂದ್ರಿಯಗ್ರಹಣಕ್ಕೆ ಮೀರಿದವು, ಅಂದರೆ ದೇವರು, ಆತ್ಮ ಸ್ವರ್ಗ ಇತ್ಯಾದಿಗಳು, ಅಸ್ತಿತ್ವದಲ್ಲಿರಲಾರವು. ಜ್ಞಾನವು ಎರಡು ರೀತಿಯದು. ಒಂದು ಇಂದ್ರಿಯಗ್ರಹಣದಿಂದ ಪ್ರತ್ಯಕ್ಷವಾಗಿ ಲಭಿಸುವಂತಹುದು; ಇನ್ನೊಂದು ಮಾನಸಿಕ ಚಿಂತನೆಯಿಂದ ಪರೋಕ್ಷವಾಗಿ ಲಭಿಸುವಂತಹುದು. ಆದರೆ ಈ ಎರಡನೆಯ ರೀತಿಯ ಜ್ಞಾನಕ್ಕೂ ಮೂಲಾಧಾರ ಇಂದ್ರಿಯಗಳೇ. ಮಿದುಳಿಲ್ಲದೆ ಮನಸ್ಸು ಇರುವುದುಂಟೆ ? ಒಂದು ಚಿಂತನೆಯ ಆಧಾರದ ಮೇಲೆ ಇನ್ನೊಂದು ಚಿಂತನೆ, ಅಮೂರ್ತ ಕಲ್ಪನೆ, ಬರುವುದು ಸಾಧ್ಯವಿದೆ. ಆದರೆ ಈ ಎರಡನೆಯ ರೀತಿಯ ಚಿಂತನೆಗೂ ಮೂಲ ಮಿದುಳೇ ಅಲ್ಲವೇ ?

**ಕೆ. ಎಲ್. ಗೋಪಾಲಕೃಷ್ಣರಾವ್**
೨೬೧, ೨ನೇ ಕ್ರಾಸ್, ಸಿ. ಟಿ. ಬೆಡ್, ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

**HOSATHU** Kannada Monthly / June 2003 Rs. 10
RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna